# ಕಾಂಚನಗೀತ

ಇಂದಿರಾತನಯ

ವಾಹಿನಿ ಪ್ರಕಾಶನ
ಜಯಚಾಮರಾಜರಸ್ತೆ, ಬೆಂಗಳೂರು-೨

**ಅರ್ಪಣೆ**

ವಿವಾಹ ಪ್ರವಾಹದಲ್ಲಿ ವರದಕ್ಷಿಣೆಯ ವಿಷವಾಹಿನಿಯ
ಸುಳಿಗೆ ಸಿಕ್ಕಿ ಬಾಳು ಹಾಳು ಮಾಡಿಕೊಂಡ ಅಸಂಖ್ಯಾತ
ಸೋದರ–ಸೋದರಿಯರಿಗೆ

**ಇಂದಿರಾತನಯ**


ಮೊದಲನೆಯ ಮುದ್ರಣ : ೧೯೫೫

ಮುಖಚಿತ್ರ :
**ಭೀಮಾಶಂಕರ್**

ಮುದ್ರಕರು :
ಎಂ. ಎಸ್. ಚಿಂತಾಮಣಿ, ಬಿ. ಎಸ್‌ಸಿ.,
“ಈಸ್ಟರ್ನ್ ಪ್ರೆಸ್”, ಜಯಚಾಮರಾಜ ರಸ್ತೆ,
ಬೆಂಗಳೂರು–೨

# ಮುನ್ನುಡಿ

ಇಂದಿನ ಪ್ರಗತಿಯುಗದಲ್ಲಿ ಕ್ರಾಂತಿಕಾರಕ ಮನೋಭಾವನೆಗಳನ್ನುಳ್ಳ ಕ್ರಿಯಾಶಾಲೀ ಲೇಖಕನೊಬ್ಬನು ನಿತ್ಯ ನೂತನ ಸಮಸ್ಯೆಗಳ ಕಡೆಗೆ ದಿಟ್ಟಿ ಹಾಯಿಸದೆ, ಸಮಾಜದ ಹಚ್ಚಹಳೆಯ ಸಮಸ್ಯೆಯೊಂದನ್ನು ಆರಿಸಿಕೊಂಡು, ಸರ್ವ ಸಾಮಾನ್ಯವಾದ ಕಥಾವಸ್ತುವಿನತ್ತ ಕಣ್ಣು ಹರಿಯಿಸಿ ಕಾದಂಬರಿಯನ್ನು ರಚಿಸುತ್ತಿರುವುದು ನಗೆಪಾಟಲಾಗಿ ತೋರಬಹುದು. ಆದರೆ ನಗುವವರನ್ನು ಕಂಡು ಬರಹಗಾರನು ಬಿಗುಮಾನದಿಂದ ಬೀಗಿ ವಿಷ ಸಮಸ್ಯೆಗಳನ್ನು ಲಘುವಾಗಿ ಪರಿಗಣಿಸಲಾರ.

'ವರದಕ್ಷಿಣೆ' ಪದ್ಧತಿಯಮೇಲೆ ಈ ಲೇಖಕನು ಕಾದಂಬರಿಯೊಂದನ್ನು ಬರೆಯುತ್ತಿದ್ದಾನೆಂಬ ಸುದ್ದಿ ಕೆಲ ಮಿತ್ರರಿಗೂ ಬಂಧುವರ್ಗದವರಿಗೂ ತಿಳಿದಾಗ, ಸ್ವಲ್ಪ ಹಾಹಾಕಾರವೆದ್ದು-ಕೋಲಾಹಲವೇ ಆಯಿತು. ಕೆಲಮಂದಿ ಹಿತೈಷಿಗಳನ್ನಿಸಿಕೊಳ್ಳುವ ಹಿರಿಯರು – 'ನಿನ್ನ ತಲೆಯ ಮೇಲೆ ನೀನೇ ಕಲ್ಲು ಎತ್ತಿ ಹಾಕಿಕೊಳ್ಳುತ್ತಿದ್ದೀ. ಬರುವ ಹಣವನ್ನು ಬೇಡವೆಂದು ಸಾರುತ್ತಾ ಹೋಗುವುದು ಯಾವ ಜಾಣತನ?' ಎಂದು ಎಚ್ಚರಿಸಿ ಮೂದಲಿಸಿದರು! ಹೆಚ್ಚು ಮಂದಿ ಗಂಡು ಮಕ್ಕಳನ್ನು ಪಡೆದ ಹಲವು ಮಂದಿ ತಂದೆ-ತಾಯಿಯರು 'ನೀನು ಈ ತರ ಪುಸ್ತಕಗಳನ್ನು ಬರೆಯಕೂಡದು ಇದರಿಂದ ನಮಗೆ ತುಂಬಾ ತೊಂದರೆಯಾಗುತ್ತದೆ' ಎಂದು ರೋಷದಿಂದ ಪ್ರತಿಭಟಿಸಿದರು. ಇದರ ಸಮಾಜದ ಈ ನೀಚ ಸಂಪ್ರದಾಯವನ್ನು ಕಂಡು ರೋಸಿ, ಬೇಸತ್ತು. ತಾನೇ ಅಂತಹ ಸಮಸ್ಯೆಯನ್ನು ಎದುರಿಸಬೇಕಾದ ಅನುಭವವನ್ನು ಪ್ರತ್ಯಕ್ಷವಾಗಿ ಪಡೆದ ಲೇಖಕ ಹೊಚ್ಚ ಹೊಸ ದೃಷ್ಟಿಯಿಂದಲ್ಲದಿದ್ದರೂ ಕೆಚ್ಚು ಕೆರಳುವ ದೃಷ್ಟಿಯಿಂದ ಈ ಕೃತಿಯನ್ನು ರಚಿಸಿ, ಸಾಹಿತ್ಯದ ಕಿಡಿಯೊಂದನ್ನು ಸಿಡಿಸಿದ್ದಾನೆ

'ಅನುಭವದಿಂದ ಸಾಹಿತ್ಯ ಸೃಷ್ಟಿಯಾಗಬೇಕು' ಎಂಬ ತತ್ತ್ವವನ್ನೊಪ್ಪಿಕೊಂಡಿರುವ ಈ ಲೇಖಕ ನಡೆದ ಕಥೆಯೊಂದನ್ನು ಆಧರಿಸಿ ಈ ಕಾದಂಬರಿಯನ್ನು ಹೆಣೆದಿದ್ದಾನೆ. ಹೆಸರುಗಳೂ, ಸ್ಥಳ ಸನ್ನಿವೇಶಗಳೂ ಬದಲಾಗಿರಬಹುದೇ ಹೊರತು, ಮೂಲಕಥೆಯು ಮಾತ್ರ ನಡೆದುದು ನಡೆದಂತೆಯೇ ನಿರೂಪಿತವಾಗಿದೆ. ಕಲಾದೃಷ್ಟಿಯಿಂದ ಕೃತಿಗೆ ಸೊಬಗು ನೀಡಲು ಲೇಖಕನು ಧಾರಾಳವಾಗಿ ಕಲ್ಪನೆಯ ಮೆರುಗು ಕೊಟ್ಟಿದ್ದಾನೆ. ವಾಸ್ತವಿಕತೆ ಮತ್ತು ಕಲ್ಪನೆಗಳ ಸಮ್ಮಿಳನವಾದ ಈ ಕಾದಂಬರಿ ಓದುಗರಿಗೂ – ವಿಮರ್ಶಕರಿಗೂ ಮೆಚ್ಚಿಕೆಯಾದರೆ, ಲೇಖಕನು ತನ್ನ ಪ್ರಯತ್ನ ಸಾರ್ಥಕವಾಯಿತೆಂದು ಕೊಳ್ಳುತ್ತಾನೆ.

ವರದಕ್ಷಿಣೆಯ ಪದ್ಧತಿಗೆ ಸಂಬಂಧಿಸಿದಂತೆ ಜೀವನದ ನಾನಾಮುಖ

ಗಳನ್ನು, ವರದಕ್ಷಿಣೆಯಿಂದುಂಟಾಗುವ ಅನೇಕ ಅನಾಹುತಗಳನ್ನೂ, ಉದ್ಭವಿಸುವ ವಿಚಿತ್ರ ಸನ್ನಿವೇಶಗಳನ್ನೂ ಚಿತ್ರಿಸಲು ಯತ್ನಿಸಿರುವ ಈ ಕಾದಂಬರಿ ಸುಮಾರು ಆರುನೂರಕ್ಕಿಂತಲೂ ಹೆಚ್ಚು ಪುಟಗಳನ್ನೊಳಗೊಂಡಿರುವುದರಿಂದ, ಇದನ್ನು ಎರಡು ಭಾಗಗಳಾಗಿ ಬೇರ್ಪಡಿಸುವುದು ಅನಿವಾರ್ಯವಾಗಿದೆ. ಇದೀಗ ಓದುಗರ ಕೈಯ್ಯಲ್ಲಿರುವ 'ಕಾಂಚನಗೀತ'ದ ಉತ್ತರಭಾಗ 'ನಕ್ಷತ್ರಗಾನ'. ಪ್ರಕೃತ ಕೃತಿಯಲ್ಲಿ ಅಪೂರ್ಣವೆನಿಸುವ ಕಥೆ '<u>ನಕ್ಷತ್ರಗಾನ</u>'ದಲ್ಲಿ ಸಂಪೂರ್ಣವಾಗಿದೆ. ಈ ದ್ವಿತೀಯ ಕೃತಿಯೂ ಸಹ ವಾಹಿನಿ ಕೈಹೊತ್ತಿಗೆಗಳಲ್ಲಿಯೇ ಪ್ರಕಟವಾಗಿ ಅತಿ ಶೀಘ್ರದಲ್ಲಿಯೇ ಓದುಗರ ಕೈ ಸೇರುತ್ತದೆಂದು ತಿಳಿಸಲು ಹರ್ಷವೆನಿಸುತ್ತದೆ.

ಈ ಕಾದಂಬರಿ ರಚನೆಯ ಸಮಯದಲ್ಲಿ ಬಹು ತೆರನಾಗಿ ನೆರವು ನೀಡಿ ಉಪಕರಿಸಿದ ಗೆಳೆಯ ಕೆ. ವಿ. ಶೇಷಾದ್ರಿಯವರಿಗೂ, ಕೃತಿಯನ್ನು ಪ್ರಕಟಿಸಿದ ವಾಹಿನಿ ಪ್ರಕಾಶನದ ಮಿತ್ರರಾದ ಶ್ರೀ ಎಂ. ಎಸ್. ಚಿಂತಾಮಣಿಯವರಿಗೂ ತುಂಬಾ ಕೃತಜ್ಞ.

ವಾಗಟ ಅಗ್ರಹಾರ ಪಿ. ಓ.
ವೈಟ್‌ಫೀಲ್ಡ್ ಮಾರ್ಗ.
ಬೆಂಗಳೂರು ಜಿಲ್ಲೆ.

ಇಂದಿರಾತನಯ

೧

ಆ ರಾತ್ರಿ... .!

ಹೇಗೆ ಹೊರಳಾಡಿದರೂ ನಿದ್ರೆಯಿಲ್ಲ ನಾಗಪ್ಪನವರಿಗೆ. ಒಂದೆರಡು ಬಾರಿ ಎದ್ದು, ಶಬ್ದವಾಗದಂತೆ ಬಾಗಿಲು ತೆರೆದು ಹೊರಗೆ ಹೋಗಿಬಂದರು. ಮೊದಲನೆಯ ಸಾರಿ ಹೋಗಿಬಂದಾಗ ಎರಡು ಗಳಿಗೆ ಬೀದಿಯ ಜಗುಲಿಯ ಮೇಲೆಯೇ ಕುಳಿತು ಬಂದಿದ್ದರೆ ಚೆನ್ನಾಗಿತ್ತು ಎಂದನ್ನಿಸಿತ್ತು. ಆದರೆ ಹಾಗೆ ಮಾಡದೆ, ಒಳಗೆ ಬಂದು ತಮ್ಮ ಹಾಸಿಗೆಯ ಮೇಲೆ ಕುಳಿತರು. ಸ್ವಲ್ಪ ಹೊತ್ತಿನ ನಂತರ ಕಣ್ಣು ಜೋಲುವಂತಾಗಿ ಹಾಗೆಯೇ ಉರುಳಿಕೊಂಡರು. ಆದರೆ ನಿದ್ರೆ ಅವರನ್ನು ವಂಚಿಸಿ ಏನೋ ಒಳಸಂಚು ಹೂಡಿತು. ಮತ್ತೆ ನಾಲ್ಕಾರು ಬಾರಿ ಹೊರಳಾಡಿದರೂ ನಿದ್ರೆಯಿಲ್ಲ. ಸ್ವಲ್ಪ ಹೊತ್ತು ಗಾಳಿಯಲ್ಲಿ ಕುಳಿತುಕೊಳ್ಳೋಣವೆಂದು ಇನ್ನೊಮ್ಮೆ ಹೊರಗೆ ಹೊರಟರು. ಈ ಸಾರಿ ನಡುಗಿಸುವ ಛಳಿಗಾಳಿ ಬೀಸುತ್ತಿದ್ದುದರಿಂದ, ನಾಗಪ್ಪನವರಿಗೆ ಅಲ್ಲಿ ಕುಳಿತುಕೊಳ್ಳಲು ಮನಸ್ಸು ಬರಲಿಲ್ಲ. 'ಇದೇನು ಹುಚ್ಚು !' ಎಂದು ತಮ್ಮಷ್ಟಕ್ಕೆ ತಾವೇ ಅಂದುಕೊಂಡು ಒಳಗೆ ಬಂದು, ತಲೆದಿಂಬು ಸರಿಪಡಿಸಿಕೊಂಡು, ಬೆಚ್ಚಗೆ ಹೊದ್ದು ಮಲಗಿದರು. ಮತ್ತೆ ಏನು ನೆನಪು ಬಂದಿತೋ—ಎದ್ದು ಹೋಗಿ ಸಣ್ಣಗೆ ಉರಿಯುತ್ತಿದ್ದ ಬೆಡ್ ಲ್ಯಾಂಪನ್ನೂ ಆರಿಸಿ ಬಂದು ಮುಸುಕು ಹಾಕಿಕೊಂಡು ಮಲಗಿದರು. ಊಹ್ಞೂ, ಏನಾದರೂ ನಿದ್ರೆ ಅವರ ಬಳಿ ಸುಳಿಯಲಿಲ್ಲ.

ನಾಗಪ್ಪನವರೇನೋ 'ನಿದ್ರೆ ಬರಲಿಲ್ಲವಲ್ಲಾ' ಎಂದು ಗೊಣಗುಟ್ಟುತ್ತಿದ್ದರೂ ಅವರ ಮನಸ್ಸು ಮಾತ್ರ ಅದನ್ನು ಬಯಸಿರಲಿಲ್ಲ.

ಅದು ನೂರು ಕಲ್ಪನೆಯ ಗೋಪುರಗಳನ್ನು ಕಟ್ಟಿ ಕಟ್ಟಿ ತನ್ನದೇ ಆದ ಒಂದು ಲೋಕದಲ್ಲಿ ವಿಹರಿಸುತ್ತಿತ್ತು. ಅದು ಕಟ್ಟುತ್ತಿದ್ದ ಕನಸುಗಳು ಇಂದಲ್ಲ—ನಾಳೆ ನಿಜವಾದಾವು ಎಂಬ ಭರವಸೆ ನಾಗಪ್ಪನವರಿಗೆ. ಎಂತಲೇ ಅವರಿಗೆ ಆ ಕಲ್ಪನಾ ರಾಜ್ಯದಲ್ಲಿ ವಿಹರಿಸಲು ಬಹಳ ಆಸೆ.

'ಬಡವಂ ಬಲ್ಲಿದನಾಗನೆ ?'

—ಸೋಮೇಶ್ವರ ಶತಕದ ಈ ವಾಕ್ಯ ನಾಗಪ್ಪನವರಿಗೆ ಆ ರಾತ್ರಿ ಲೆಕ್ಕವಿಲ್ಲದಷ್ಟು ಬಾರಿ ನೆನಪಾಗಿತ್ತು. ಅದರೊಡನೆ ತಮ್ಮ ಐವತ್ತೆಂಟು ವರ್ಷಗಳ ಆಯುಷ್ಯದಲ್ಲ ಮುಖ್ಯವಾಗಿ ಸಿಂಗನಹಳ್ಳಿ—ಅಗ್ರಹಾರಗಳಲ್ಲಿ ಕಳೆದ ಸುಮಾರು ಮೂವತ್ತೆರಡು ವರ್ಷಗಳ ಬಾಳಿನ-ಬದುಕಿನ ಚಿತ್ರಗಳು ಅವರ ಮನಃಪಟಲದಲ್ಲಿ ಸುಳಿಯತೊಡಗಿದುವು........

ನಾಗಪ್ಪನವರು ಅಗ್ರಹಾರಕ್ಕೆ ಬರುವ ಮೊದಲು ಸಿಂಗನಹಳ್ಳಿಯಲ್ಲಿದ್ದರು. ಹುಟ್ಟೂರಾದ ಅಷ್ಟಗ್ರಾಮದಲ್ಲಿ, ಚಿಕ್ಕಂದಿನಲ್ಲಿಯೇ ತಬ್ಬಲಿಯಾಗಿ, ಅಜ್ಜನ ಆರೈಕೆಯಲ್ಲಿ ಬೆಳೆದು, ಅವರೂ ತೀರಿಕೊಂಡ ಬಳಿಕ ದಿಕ್ಕುಗಾಣದೆ ಕಷ್ಟಪಟ್ಟು, ಕೊನೆಗೆ ಹಂಗಾಮಿ ಉಪಾಧ್ಯಾಯರಾಗಿ ಸಿಂಗನಹಳ್ಳಿಯ ಪ್ರಾಥಮಿಕ ಶಾಲೆಗೆ ಬಂದಿದ್ದರು. ಆಗ ಅವರಿಗೆ ಇಪ್ಪತ್ತಾರು ವರ್ಷ ವಯಸ್ಸು. ಊರಿನ ಗೌಡರೇ ತಮ್ಮ ಮನೆಯ ಕೋಣೆಯೊಂದನ್ನು ಅವರಿಗೆ ವಾಸಕ್ಕೆ ಕೊಟ್ಟು ಆತ್ಮೀಯತೆಯಿಂದ ನೋಡಿಕೊಂಡರು. ಅನಂತರ ಒಂದೆರಡು ತಿಂಗಳು ಕಳೆದಾಗ ನಾಗಪ್ಪನವರಿಗೆ ಹೆಣ್ಣು ಕೊಡಲು ಅಷ್ಟಗ್ರಾಮದಿಂದ ಅನಂತಯ್ಯನವರು ಆಗಮಿಸಿದರು. ದಿಕ್ಕಿಲ್ಲದ ತನಗೆ ಮದುವೆಯಾಗುವುದೇ ? ಸಂಸಾರಿ ಎನ್ನಿಸಿಕೊಂಡು ಹತ್ತು ಜನರೊಡನೆ ಕಲೆತು ಸರಿಸಮಾನತೆಯಿಂದ ಬದುಕಲು ತಮ್ಮಿಂದ ಸಾಧ್ಯವಾಗುವುದೇ ?—ಎಂದು ಪರಿಪರಿಯಿಂದ ಚಿಂತಿಸುತ್ತಿದ್ದ ನಾಗಪ್ಪನವರಿಗೆ ಅನಂತಯ್ಯನವರು ಹೆಣ್ಣು ಕೊಡಲು ಬಂದಾಗ ಅತ್ಯಂತ ಆನಂದವಾಯಿತು. ಆದರೆ "ಸಿಂಗನಹಳ್ಳಿಯಲ್ಲಿ ಬ್ರಾಹ್ಮಣರ ಮನೆಯಿಲ್ಲ. ನನ್ನ ಮಗಳಿಗೆ ಸಮಯದಲ್ಲಿ ತನ್ನವರೆನ್ನುವವರ ಸಹಾಯವಿರುವುದಿಲ್ಲ. ಬ್ರಾಹ್ಮಣರಿರುವ ಬೇರೊಂದು ಊರಿಗೆ ವರ್ಗಮಾಡಿಸಿಕೊಂಡರೆ ನನ್ನ ಮಗಳನ್ನು ಧಾರೆಯೆರೆಯುತ್ತೇನೆ. ವರದಕ್ಷಿಣೆ ಕೊಡುವುದು ಮಾತ್ರ ಸಾಧ್ಯವಿಲ್ಲ" ಎಂದು ನಿರ್ದಾಕ್ಷಿಣ್ಯ

ನಾಗಿ ಮಡಿದ ಅನಂತಯ್ಯ ನಾಗಪ್ಪನವರಿಗೆ ನಿರಾಸೆಯನ್ನುಂಟುಮಾಡಿ ಅಷ್ಟಗ್ರಾಮಕ್ಕೆ ಮರಳಿದ್ದರು. ಹತ್ತಿರ ಹತ್ತಿರಕ್ಕೆ ಬಂದಿದ್ದ ಭಾಗ್ಯ ಕೊನೆಗೆ ದೂರವಾಗಿ ಹೋಯಿತಲ್ಲ ಎಂದು ಪರಿತಪಿಸುತ್ತಾ ಅದೇ ಚಿಂತೆಯಲ್ಲಿಯೇ ಅನ್ನ ನೀರಿನ ಕಡೆಗೆ ಗಮನವೀಯದೆ ಕೊರಗತೊಡಗಿದರು ನಾಗಪ್ಪ. ಆಗ ಇವರ ಪರಿಸ್ಥಿತಿಯನ್ನು ಅರಿತುಕೊಂಡು ಪರಿಹಾರ ನೀಡಿದವಳು ಗೌಡರ ಹೆಂಡತಿ ರಾಮಕ್ಕ.

ಗೌಡರ ಮನೆಯೊಡನೆ ಬೆಳೆದ ನಾಗಪ್ಪನವರ ಸಲಿಗೆ, ಮಕ್ಕಳಿಲ್ಲದ ರಾಮಕ್ಕನನ್ನು ಮೋಹದ ಬಲೆಗೆ ಸೆಳೆದಿತ್ತು. ಸಂತಾನಾಪೇಕ್ಷೆಯಿಂದ ನಾಗಪ್ಪನವರ ಪ್ರೇಯಸಿಯಾಗಿದ್ದ ಆಕೆಗೆ ಅವರ ಕೊರಗಿನ ಕಾರಣ, ಅನಂತಯ್ಯನವರು ಬಂದು ಹೋದ ವಿಷಯ ತಿಳಿದಾಗ ಸ್ವಲ್ಪ ಅಸಮಾಧಾನವೇ ಆಯಿತು. ಆದರೂ, ನಾಗಪ್ಪನವರ ಕೊರಗಿನ ಸಂಗತಿಯನ್ನು ತನ್ನ ಗಂಡನಿಗೆ ತಿಳಿಸಿದಾಗ, ಗೌಡರು ತಮ್ಮ 'ಪ್ರೀತಿಯ ಮೇಷ್ಟ್ರ'ರ ವಿಷಯದಲ್ಲಿ ಆಸಕ್ತಿ ವಹಿಸಿ, ಅಗ್ರಹಾರದಲ್ಲಿದ್ದ ಜಮೀನುದಾರ್ ಗೋಪಾಲಯ್ಯನವರ ಖಾಲಿ ಮನೆಯೊಂದನ್ನು ದೊರಕಿಸಿಕೊಟ್ಟರು. ಅನಂತರ ಮದುವೆಯ ಸನ್ನಾಹ ನಡೆಯಿತು. ಗೌಡರೂ ಅಗ್ರಹಾರದ ಮುಖಂಡರೂ ಮುಂದಾಳತ್ವವನ್ನು ವಹಿಸಿ, ಗಂಡಿನ ಕಡೆಯವರಾಗಿ ಅಷ್ಟಗ್ರಾಮಕ್ಕೆ ತೆರಳಿ, ನಾಗಪ್ಪನವರಿಗೆ ಅನಂತಯ್ಯನವರ ಮಗಳು ಶಂಕಮ್ಮನನ್ನು ಧಾರೆಯೆರೆಸಿದರು. ಮರುದಿನವೇ ನಿಷೇಕದ ಶಾಸ್ತ್ರ ಮುಗಿಸಿ ಗಂಡ-ಹೆಂಡಿರನ್ನು ಅಗ್ರಹಾರಕ್ಕೆ ಕರೆದುಕೊಂಡು ಹೋಗಬೇಕೆಂದು ನಿಶ್ಚಯವಾಯಿತು. ಪ್ರಸ್ತದ ಸಂಜೆ ನಾಗಪ್ಪ ತಮ್ಮ ಹಳೆಯ ಸ್ನೇಹಿತ ನಾರಾಯಣನೊಡನೆ ತಿರುಗಾಡಿಕೊಂಡು ಬರಲು ಹೊರಟಾಗ ನಡೆದ ಮಾತುಕತೆ ನಾಗಪ್ಪನವರ ಭಾವನೆಗಳನ್ನೇ ತಲೆಕೆಳಗುಮಾಡಿ, ಅವರ ಮನಸ್ಸಿನ ಮೇಲೆ ಮಹತ್ತಾದ ಪರಿಣಾಮವುಂಟುಮಾಡಿತು. "ವರದಕ್ಷಿಣೆಯಿಲ್ಲದೆ ಮದುವೆ ಮಾಡಿಕೊಂಡ ಗತಿಗೆಟ್ಟ ಗಂಡಾಗಿದ್ದೀಯೆ ನೀನು" ಎಂದು ನಾರಾಯಣ ನಾಗಪ್ಪನವರಿಗೆ ಛೀಮಾರಿ ಹಾಕಿದ್ದ. "ನೀನಲ್ಲದಿದ್ದರೆ ಇನ್ಯಾರು ಮದುವೆಯಾಗುತ್ತಿದ್ದರು ಆ ಹಿಡಂಬಿಯನ್ನು?" ಎಂದಾಗ ನಾಗಪ್ಪನವರ ಹೃದಯದಲ್ಲಿ ಬಿರುಗಾಳಿ ಎದ್ದಿತ್ತು.

"ಈಗ ನೋಡು, ಅವರ ಹಿರಿಯ ಮಗ ಚಂದ್ರನಿಗೆ ಬೆಂಗಳೂರಿನ ಇಂಜನಿಯರ್ ರಾಮಚಂದ್ರರಾಯರ ಮಗಳನ್ನು ತಂದುಕೊಳ್ಳುವರು. ಎರಡು ಸಾವಿರ ಬಂದ ಹೊರತೂ ಕನ್ಯಾದಾನ ಸ್ವೀಕರಿಸುವುದಿಲ್ಲವೆಂದು ಹೇಳಿದ್ದಾರೆ. ಇಷ್ಟೂ ಅಲ್ಲದೆ ಹುಡುಗಿಯ ಮೈ ಮೇಲೆ ಚಿನ್ನದ ಹೊರೆ ಹೊರಿಗೆ ಕಳುಹಿಸಬೇಕಂತೆ! ಚಂದ್ರು ತಾನೆ ಏನು ಓದಿದ್ದಾನೆ ಮಹಾ! ಚಿಂತಾಮಣಿಯಲ್ಲಿ ಮಾರಾನ್ನ ಮಾಡಿಕೊಂಡು ಎಸ್. ಎಸ್. ಎಲ್. ಸಿ. ಮಾಡಿಕೊಂಡಿದ್ದಾನೆ. ಏನೋ ಅವನ ಅದೃಷ್ಟ—ಬೆಂಗಳೂರಿನಲ್ಲೇ ಪೋಲೀಸ್ ಇನ್ಸ್‌ಪೆಕ್ಟರ ಆಫೀಸಿನಲ್ಲಿ ಗುಮಾಸ್ತೆ ಕೆಲಸ ಸಿಕ್ಕಿತು. ಅದಕ್ಕೇ ಅನಂತಯ್ಯನವರಿಗೆ ತಲೆ ನಿಲ್ಲುವುದಿಲ್ಲ. ತಮ್ಮ ಮಗ ಎಂ. ಎ ಪಾಸು ಮಾಡಿದ ಹಾಗೆ, ದಿವಾನ್ ಕೆಲಸ ಮಾಡುವ ಹಾಗೆ ಆಡುತ್ತಾರೆ. ಅವರಿಗೆ ಸರಿಯಾಗೇ ಸಿಕ್ಕಿದ್ದೀ ನೀನು ಅಳಿಯ ದುಡ್ಡಿಲ್ಲದೆ-ಕಾಸಿಲ್ಲದೆ ಅರಾಕ್ಷಸಿಯನ್ನು ಕಟ್ಟಿಕೊಂಡ ಮಂಗರಾಯ!"

—ನಾರಾಯಣನ ಮೂದಲಿಕೆಯ ಮಾತುಗಳನ್ನು ಕೇಳುತ್ತಿದ್ದಂತೆ ನಾಗಪ್ಪನವರಿಗೆ, ತಾವು 'ಹೇಡಿ—ಕೈಲಾಗದವರು' ಎಂಬ ಭಾವನೆ ಮೂಡುತ್ತಿತ್ತು.

"ಈಗಲೂ ನೀನು ಮನಸ್ಸು ಮಾಡಿದರೆ ಅನಂತಯ್ಯನವರಿಂದ ಒಂದು ಸಾವಿರವಾದರೂ ಗಿಟ್ಟಿಸಬಹುದು. ಏನು ಹೇಳುತ್ತೀಯೋ?"

ಎಂದ ನಾರಾಯಣ. ಬೇರೆ ಯಾರಾದರೂ ಈ ಮಾತುಗಳನ್ನು ಹೇಳಿದ್ದರೆ ನಾಗಪ್ಪನವರು ಅಷ್ಟಾಗಿ ಗಮನಿಸದೆ ಮಾನಸಿಕ ಮಾಡಿಬಿಡುತ್ತಿದ್ದರು ಆದರೆ ಹೇಳುತ್ತಿದ್ದವನು ನಾರಾಯಣ. ಅವನು ತನಗಿಂತಲೂ ಹೆಚ್ಚು ಓದಿ, ಇಂಟರ್ ಮೀಡಿಯಟ್ ಪಾಸ್ ಮಾಡಿದ್ದವನು ಅಲ್ಲದೆ ಬೆಂಗಳೂರಿನಲ್ಲೇ ಇದ್ದುಕೊಂಡು ತನ್ನ ಸೋದರ ಮಾವ ಲಾಯರ್ ವೆಂಕಟರಾಯರ ಬಳಿ ಕಲಸ ಮಾಡುತ್ತಾ ಪ್ಲೀಡರ್ ಪರೀಕ್ಷೆಗೆ ಅಭ್ಯಾಸ ಮಾಡುತ್ತಿದ್ದವನು. ಇಂಥವನು ಹೇಳಿದ ಮಾತಿಗೆ ನಾಗಪ್ಪನವರು ಬೆಲೆ ಕೊಡದಿರಲು ಸಾಧ್ಯವೇ?

"ಏನು ಹೇಳು ನಾಣಿ, ನೀನು ಹೇಳಿದ ಹಾಗೆ ಕೇಳುತ್ತೀನೆ"—ಎಂದರು ನಾಗಪ್ಪ. ಅವರ ವಾಣಿಯಲ್ಲಿ ದೃಢವಾದ ನಿರ್ಧಾರವಿತ್ತು.

"ನಾನು ಬೆಂಗಳೂರಿಗೆ ಹೋಗಿ, ನಿಮಗೆ ಕಾಗದ ಬರೆಯುತ್ತೇನೆ. ಯಾವುದನ್ನೂ ಆತುರ ಪಟ್ಟು ಒಂದೇ ಸಾರಿಗೆ ಮಾಡಿಬಿಡಬಾರದು. ಸರ್ಕಾರದ ಕಾನೂನು ಬೇರೆ ನಮ್ಮ ತಲೆಯ ಮೇಲಿದೆ. ಅದಕ್ಕೆ ಸರಿಯಾಗಿ ನಡೆದುಕೊಳ್ಳಬೇಕು"—ಎಂದ ನಾರಾಯಣ.

"ಹಾಗೇ ಆಗಲಿ. ಖಂಡಿತ ಕಾಗದ ಬರಿ"

—ಎಂದರು ನಾಗಪ್ಪ. ಅವರಿಗೆ ಅನಂತಯ್ಯನವರ ಬಗ್ಗೆ ಅಸಮಾಧಾನ ಮೂಡತೊಡಗಿತ್ತು. ತಾನೆಂತಹ ಮೋಸಕ್ಕೊಳಗಾದೆ ಎಂದು ಅವರು ಪರಿತಪಿಸುತ್ತಿದ್ದರು. ನಾರಾಯಣನ ನೆರವಿರುವವರೆಗೂ ಅವರ ಮುಯ್ಯಿ ಅವರಿಗೇ ತೀರಿಸುತ್ತೇನೆ ಎಂದವರು ಶಪಥ ಮಾಡಿದಂತೆ ನಿಶ್ಚಯಿಸಿದರು.

ಆ ರಾತ್ರಿ ನಾಗಪ್ಪನವರಿಗೆ ಸ್ವರ್ಗ ಭೂಮಿಗಿಳಿದುಬಂದಿತ್ತು. ಆದರೆ ಅವರ ಮನಸ್ಸಿನಲ್ಲಿ ಅನಂತಯ್ಯನವರ ಬಗ್ಗೆ ಮೂಡಿದ್ದ ಕ್ರೋಧದಿಂದಾಗಿ, ಆ ಸ್ವರ್ಗದಲ್ಲಿ ತೃಪ್ತಿಯಾಗುವಷ್ಟು ಸುಖವನ್ನನುಭವಿಸಲು ಉತ್ಸಾಹವಿರಲಿಲ್ಲ. ಯೌವನ-ಸೌಂದರ್ಯಗಳ ಮೂರ್ತಿಯಾಗಿ ವೆಂಕಮ್ಮ ಪಕ್ಕದಲ್ಲಿಯೇ ಮಲಗಿದ್ದರೂ, ಅಂದು ರಾತ್ರಿಯೆಲ್ಲಾ ನಾಗಪ್ಪನವರ ಕಣ್ಣಿಗೆ ಕಾಣಿಸುತ್ತಿದ್ದುದು ಎರಡೇ ಎರಡು ಮುಖ—ವರದಕ್ಷಿಣೆ ಕೊಡದೆ ಮದುವೆ ಮಾಡಿದ ಅನಂತಯ್ಯ ಮತ್ತು ಸಿಂಗನಹಳ್ಳಿಯಲ್ಲಿ ಸಂಗ ಸುಖ ಕೊಡುತ್ತಿದ್ದ ರಾಮಕ್ಕ !

ಮರುದಿನ ನವದಂಪತಿಗಳು ನೇರವಾಗಿ ಅಗ್ರಹಾರಕ್ಕೆ ಬಂದರು. ಗೌಡರು ಹಾಗೂ ಶ್ಯಾನುಭೋಗರ ಏರ್ಪಾಡಿನಂತೆ ಗೋಪಾಲಯ್ಯನವರು ಕೊಟ್ಟಿದ್ದ ಮನೆಯಲ್ಲಿ ನಾಗಪ್ಪನವರ ಸಂಸಾರ ಪ್ರಾರಂಭವಾಯಿತು.

ದಿನದಿನಕ್ಕೆ ಅವರ ಮನಸ್ಸಿನಲ್ಲಿದ್ದ ಅಸಮಾಧಾನ ಬಲಿಯುತ್ತಿತ್ತು. ವರದಕ್ಷಿಣೆ ಕೊಡದ ಅನಂತಯ್ಯನವರ ಮೇಲೆ ಕ್ರೋಧ ಹೆಚ್ಚಾಗುತ್ತಿತ್ತು. ಹೆಂಡತಿ ವೆಂಕಮ್ಮನ ಬಗ್ಗೆ ತಿರಸ್ಕಾರ ಉದಿಸಿತ್ತು. ಎಲ್ಲರೆದುರೂ ಪ್ರಸನ್ನಮುಖರಾಗಿಯೇ ಇದ್ದರೂ, ಮನೆಯಲ್ಲಿ ಮಾತ್ರ ಅವರು ನಗುತ್ತಿದ್ದುದನ್ನೂ ಸಂತೋಷವಾಗಿರುತ್ತಿದ್ದುದನ್ನೂ ವೆಂಕಮ್ಮ ಕಂಡಿರಲಿಲ್ಲ. ಆಕೆ ಎಷ್ಟೇ ಪ್ರೀತಿಯಿಂದ ಅವರನ್ನು ಸ್ವಾಗತಿಸಿ,

ಸವಿ ಮಾತನಾಡಿದರೂ ನಾಗಪ್ಪನವರ ಮನಸ್ಸು ಸಮಾಧಾನ ಪಡು ತ್ತಿರಲಿಲ್ಲ. ಅವಳೊಡನೆ ಹೆಚ್ಚು ಮಾತನಾಡಲೂ ಅವರಿಗಾಗದು. ಅವಳ ನೆನಪು ಬಂದೊಡನೆ ಅವರ ಮನಸ್ಸಿನಲ್ಲಿ ತಿರಸ್ಕಾರ ಮೂಡು ತ್ತಿತ್ತು. ಒಡನೆಯೇ ಅನಂತಯ್ಯನವರ ನೆನಪಾಗಿ, ನಾಗಪ್ಪನವರ ಎದೆ ಬಿಸಿಯಾಗಿ ಸೇಡಿನ ಹೊಗೆಯಾಡುತ್ತಿತ್ತು.

ಮುಯ್ಯಿಗೆ ಮುಯ್ಯಿ ತೀರಿಸಬೇಕೆಂದು ಸಮಯ ಕಾದು ನೋಡುತ್ತಿದ್ದ ನಾಗಪ್ಪನವರಿಗೆ ಒಂದು ದಿನ ನಾರಾಯಣನ ಕಾಗದ ಬಂದಿತು: "ನಮ್ಮ ಮಾವನವರ ಮಗನಿಗೆ ಉಪನಯನ ನಿಶ್ಚಯ ವಾಗಿರುವುದರಿಂದ ನೀನು ಕೂಡಲೇ ಹೊರಟು ಬರುವುದು. ಬಾಕಿ ವಿಚಾರ ಮೊಕ್ತಾ" ಎಂದು ಅವನು ಬರೆದಿದ್ದುದು ನಾಗಪ್ಪನವರಿಗೆ ಬಿಡಿಸಲಾರದ ಒಗಟಿನಂತಿತ್ತು. ಇದರಲ್ಲೇನೋ ಅಂತರಾರ್ಥವಿದೆ ಯೆಂಬುದು ಅವರ ಬುದ್ಧಿಗೆ ಹೊಳೆಯದಿರಲಿಲ್ಲ.

ಕಾಗದ ಬಂದ ಮರುದಿನವೇ ನಾಗಪ್ಪನವರು ಬೆಂಗಳೂರಿಗೆ ಹೋಗಬೇಕಾದ ಆಗತ್ಯ ಕೆಲಸವಿದೆಯೆಂದೂ, ಬರುವುದು ಎರಡು ದಿನಗಳಾಗುತ್ತವೆಂದೂ ವೆಂಕಮ್ಮನಿಗೆ ಮಾತ್ರ ಹೇಳಿ ರೈಲು ಹತ್ತಿದರು. ಆ ಸಂಜೆ ನಾಗಪ್ಪನವರನ್ನು ಹುಡುಕಿಕೊಂಡು ಬಂದ ಗೌಡರಿಗೂ, ಶ್ಯಾನುಭೋಗರಿಗೂ ಉತ್ತರಿಸುವಷ್ಟು ಸಮಾಧಾನವೂ ಇರಲಿಲ್ಲ ವೆಂಕಮ್ಮನಿಗೆ. ಅವಳು ತನ್ನ ಗಂಡನ ನಡುವಳಿಕೆಗಾಗಿ ದುಃಖಿ ಸುತ್ತಿದ್ದಳು. ಅತ್ತು ಅತ್ತು ಅವಳ ಕಣ್ಣುಗಳು ಕೆಂಪಗಾಗಿದ್ದವು.

ವೆಂಕಮ್ಮನ ಸ್ಥಿತಿಯನ್ನು ಕಂಡು ಗೌಡರಿಗೂ-ಶ್ಯಾನುಭೋಗ ರಿಗೂ ಗಾಬರಿಯಾಯಿತು. ಗಂಡ-ಹೆಂಡತಿಯರಲ್ಲಿ ಏನಾದರೂ ಮನಸ್ತಾಪವಾಗಿ ಹೀಗಾಗಿರಬಹುದೇ ?—ಎಂಬ ಸಂಶಯ ಅವರಲ್ಲಿ ಮೂಡಿತು. ಕೊನೆಗೆ ಶಾನುಭೋಗರ ಹೆಂಡತಿ ಲಕ್ಷ್ಮಮ್ಮ ಬಂದು, ಅವಳನ್ನು ಸಂತೈಸಿ, ವಿಷಯವನ್ನರಿತುಕೊಂಡಮೇಲೆಯೇ ಎಲ್ಲರಿಗೂ ಸಮಾಧಾನ. ಆದರೂ ನಾಗಪ್ಪನವರು ಬೆಂಗಳೂರಿಗೇಕೆ ಹೋದ ರೆಂಬುದು ಗೌಡರಿಗೂ ಶಾನುಭೋಗರಿಗೂ ಯೋಚಿಸುವ ವಿಷಯ ವಾಗಿತ್ತು.

ನಾರಾಯಣ ನಿರೀಕ್ಷಿಸಿದ್ದಂತೆ ನಾಗಪ್ಪನವರು ಅವನ ಮುಂದೆ

ಪ್ರತ್ಯಕ್ಷವಾದರು. ಕ್ಷೇಮಸಮಾಚಾರದ ಮಾತುಗಳ ನಂತರ ಗೆಳೆಯರಿಬ್ಬರೂ ರಾತ್ರಿಯ ಊಟ ಮುಗಿಸಿ, ಕಬ್ಬನ್ ಪಾರ್ಕಿನ ಕಡೆಗೆ ತಿರುಗಾಡಲು ಹೊರಟರು. ದಾರಿ ಸಾಗಿದಂತೆ ಮಾತೂ ಸಾಗಿತ್ತು ಮಾತಿನ ಮಧ್ಯೆ ನಾರಾಯಣ—"ಗೌರಿಯ ಹಬ್ಬ ಹತ್ತಿರ ಬರುತ್ತಿದೆ ನಾಗಪ್ಪ ಮಗಳನ್ನು ಹಬ್ಬಕ್ಕೆ ಕರೆದುಕೊಂಡು ಹೋಗಲು ಅನಂತಯ್ಯ ಬರುತ್ತಾರೆ. ಅಷ್ಟರಲ್ಲೇ ಅವನ ಮಗನಿಗೆ ಮದುವೆ ನಿಶ್ಚಯವಾಗುತ್ತದೆ ನೀನೂ ಹೋಗಬೇಕಾಗುತ್ತದೆ. ಆದರೆ ಮದುವೆ ಮುಗಿದ ಮೇಲೆ, ನಿನ್ನ ಹೆಂಡತಿಯನ್ನು ಮಾತ್ರ ಕರೆದುಕೊಂಡು ಬರಬೇಡ. ಅವಳನ್ನು ಅಲ್ಲೇ ಬಿಟ್ಟು ಬಾ ಆಮೇಲೆ ಮಾಡಬೇಕಾದುದನ್ನು ನಾನು ನಿನಗೆ ಕಾಗದ ಬರೆದು ತಿಳಿಸುತ್ತೇನೆ" ಎಂದು ಹೇಳಿದ.

"ಹಾಗೇ ಆಗಲಿ" ಎಂದು ಒಪ್ಪಿದರು ನಾಗಪ್ಪ.

ಮರುದಿನ ನಾರಾಯಣನ ಮಾವ ಲಾಯರ್ ವೆಂಕಟರಾಯರ ಮನೆಯಲ್ಲಿ, ಅವರ ಮಗ ಶೇಷುವಿಗೆ ಉಪನಯನ ನಾಗಪ್ಪನವರು ನಾರಾಯಣನ ಜೊತೆಯಲ್ಲಿ ತಿರುಗಾಡುತ್ತಾ ಸಣ್ಣ ಪುಟ್ಟ ಕೆಲಸ ಗಳನ್ನು ಮಾಡುತ್ತಿದ್ದವರು ತರಕಾರಿ ಹೆಚ್ಚುವ ನೆಪದಿಂದ ಹಾಗೆಯೇ ಅಡಿಗೆ ಮನೆ ಸೇರಬೇಕಾಯಿತು. ಅಂತೂ ಅಡಿಗೆಯವರೊಡನೆ ಅಡಿಗೆಯವರಾಗಿ ದುಡಿದ ನಾಗಪ್ಪನವರಿಗೆ ಊರಿಗೆ ಹೊರಡುವಾಗ ಒಂದು ಜೊತೆ ಪಂಚೆ ಐದು ರೂಪಾಯಿ ದಕ್ಷಿಣೆ ಸಿಕ್ಕಿತು ಅವರ ಅತ್ಯಂತ ಸಂತೋಷದಿಂದಲೇ ಬೆಂಗಳೂರಿನಿಂದ ಹೊರಟರು.

ಮುಸ್ಸಂಜೆಯ ರೈಲಿನಲ್ಲಿ ಹೊರಟು ಅಗ್ರಹಾರ ಸೇರುವ ವೇಳೆಗೆ ಕತ್ತಲೆಯಾಗಿದ್ದರಿಂದ ಯಾರೂ ಅವರನ್ನು ನೋಡಲಿಲ್ಲ. ನೇರವಾಗಿ ಮನೆಯ ಬಳಿಗೆ ಬಂದು, ಬಾಗಿಲು ಹಾಕಿರುವುದನ್ನು ಕಂಡಾಗ ಅವರ ಮುಖಕ್ಕೆ ಕಪ್ಪು ಬಳಿದಂತಾಯಿತು

"ವೆಂಕು ಎಲ್ಲಿಗೆ ಹೋದಳು ? ತೌರಿಗೆಹೊರಟುಹೋದಳೆ ಅಥವಾ ಎಲ್ಲಾದರೂ ಹೊರಗಡೆ ಹೋಗಿರಬಹುದೇ ?"

—ಎಂದು ನಾಗಪ್ಪನವರು ಮನಸ್ಸಿನಲ್ಲಿಯೇ ಅಂದುಕೊಂಡರು. ಹತ್ತು ನಿಮಿಷ ಕತ್ತಲೆಯಲ್ಲಿಯೇ ಅಲ್ಲಿ ನಿಂತರು. ಆದರೂ ವೆಂಕಮ್ಮ

ಬಾರದಿದ್ದುದನ್ನು ಕಂಡು ಅವರ ಮನಸ್ಸು ಕಳವಳಗೊಂಡಿತು.

ಸದ್ದು ಮಾಡದೆ, ಮೆಲ್ಲಮೆಲ್ಲನೆ ಹೆಜ್ಜೆಯಿಡುತ್ತಾ ಶಾನುಭೋಗರ ಮನೆಯ ಕಡೆಗೆ ನಡೆದರು. ಹೊರ ಜಗುಲಿಯ ಮೇಲೆ ಯಾರೂ ಇಲ್ಲದುದನ್ನು ಕಂಡು, ಬಾಗಿಲಿನ ಬಳಿಗೆ ಬಂದು ಒಳಗೆ ಹಣಿಕಿದರು. ಅಷ್ಟರಲ್ಲಿ ಶಾನುಭೋಗರ ಹೆಂಡತಿ-ನಾಗಪ್ಪನವರನ್ನು ಗುರ್ತಿಸಿ—

"ವೆಂಕಮ್ಮ, ನಿನ್ನ ಯಜಮಾನರು ಬಂದಿದ್ದಾರೆ ನೋಡು ತಾಯಿ" ಎಂದರು

ಅಂಗಳದ ಕಂಭಕ್ಕೆ ಒರಗಿಕೊಂಡು ಯೋಚನಾಮಗ್ನಳಾಗಿದ್ದ ವೆಂಕಮ್ಮನಿಗೆ ತಟ್ಟನೆ ಎಚ್ಚರಿಕೆಯಾಯಿತು ಆಕೆ ಲಗುಬಗೆಯಿಂದ ಎದ್ದು ಹೊರಗಡೆ ಬಂದು ಗಂಡನನ್ನು ಇದಿರುಗೊಂಡಳು. ನಾಗಪ್ಪನವರ ಮುಖದ ದೈನ್ಯಭಾವವನ್ನು ಕಂಡು ಮರುಕಪಟ್ಟವಳಂತೆ ಆಕೆ ಬಾಗಿಲು ತೆರೆಯಲು ಮುಂದೆ ನಡೆದಳು ನಾಗಪ್ಪನವರೂ ಅವಳನ್ನು ಹಿಂಬಾಲಿಸಿದರು.

ವೆಂಕಮ್ಮ ಮೌನವಾಗಿ ಬಾಗಿಲು ತೆರೆದು, ದೀಪ ಹೊತ್ತಿಸಿ, ಅಡಿಗೆಯ ಕೋಣೆಗೆ ನಡೆದಳು. ಎರಡು ಮೂರು ದಿನಗಳಿಂದ ಕಸ ಗುಡಿಸದೆ ಇದ್ದುದರಿಂದ ಮನೆಯ ತುಂಬ ಧೂಳು ತುಂಬಿಕೊಂಡಿದ್ದುದನ್ನು ಕಂಡು ನಾಗಪ್ಪನವರ ಮನಸ್ಸಿನಲ್ಲಿ ನಾನಾ ಯೋಚನೆಗಳು ಮೂಡಿದವು. ಆದರೆ ಮಾತನಾಡುವುದಕ್ಕೇನೂ ತೋರದೆ, ಕೋಟು ಬಿಚ್ಚಿಟ್ಟು, ಅಂಗಳದಲ್ಲಿ ಚಾಪೆ ಹಾಸಿ ಕುಳಿತರು. ವೆಂಕಮ್ಮನೂ ಅವರನ್ನು ಮಾತನಾಡಿಸದೆ ಅಡಿಗೆಯ ಸಿದ್ಧತೆಗೆ ತೊಡಗಿದಳು.

ಅವಳ ಮನಸ್ಸು ತುಂಬ ಭಾರವಾಗಿತ್ತು. ಗಂಡನ ನಡುವಳಿಕೆಯಿಂದ ಅವಳ ಅದೃಷ್ಟವೇ ಬದಲಾದಂತಿತ್ತು. ಆದರೆ ತನ್ನ ಮೂಕ ಸಂಕಟವನ್ನು ತೋಡಿಕೊಳ್ಳಲು ಯಾರೂ ಇರಲಿಲ್ಲ. ಕಳೆದ ಎರಡು—ಮೂರು ದಿನಗಳಿಂದ ಶ್ಯಾನುಭೋಗರ ಹೆಂಡತಿ ಲಕ್ಷ್ಮಮ್ಮ, ತಾಯಿಗಿಂತ ಹೆಚ್ಚಾಗಿ ನೋಡಿಕೊಂಡಿದ್ದರು. ನಾಗಪ್ಪನವರು ಬೆಂಗಳೂರಿಗೆ ಹೋದಂದಿನಿಂದ ವೆಂಕಮ್ಮನಿಗೆ ಊಟ-ನಿದ್ರೆ ಎಲ್ಲ ಶ್ಯಾನುಭೋಗರ ಮನೆಯಲ್ಲಿಯೇ. ಅಗ್ರಹಾರಕ್ಕೆ ಬಂದ ಕೆಲವೇ ದಿನಗಳಲ್ಲಿ ಅವರ ಹೃದಯಗಳ ನಂಟಸ್ತಿಕೆ ಯಾರಿಂದಲೂ ಒಡೆಯ

ಲಾಗದಷ್ಟು ಬಿಗಿಯಾಗಿ ಬೆಳೆದಿತ್ತು. ವೆಂಕಮ್ಮನ ಸ್ಥಿತಿಯನ್ನು ಕಂಡು ಲಕ್ಷ್ಮಮ್ಮನವರೂ ಮರುಕಪಟ್ಟಿದ್ದರು. ನಾಗಪ್ಪನವರ ಮೇಲೆಯೂ ಅವರಿಗೆ ಸಿಟ್ಟು ಬಂದಿತ್ತು. ಶಾಲೆಗೂ ರಜೆಯ ಅರ್ಜಿ ಬರೆಯದೆ ಹೋದುದನ್ನು ನೋಡಿ, ಶ್ಯಾನುಭೋಗರಿಗೂ ಸಹ ಅವರ ನಡವಳಿಕೆ ಸರಿಯಿಲ್ಲವೆಂದು ತೋರಿತು. ಗೌಡರೊಡನೆ ಸಮಾಲೋಚಿಸಿ, ನಾಗಪ್ಪನವರಿಗೆ ನಾಲ್ಕು ಬುದ್ಧಿಯ ಮಾತು ಹೇಳಬೇಕೆಂದು ಮನಸ್ಸಿನಲ್ಲಿಯೇ ನಿರ್ಧರಿಸಿದ್ದರು. ಆದರೆ ಆದಿನ ನಾಗಪ್ಪನವರು ಊರಿಗೆ ಮರಳಿದ ಸಂಜೆ—ಗೌಡರೂ ಶ್ಯಾನುಭೋಗರೂ ಗೋಪಾಲಯ್ಯನವರ ಕೇಸಿನ ವಿಚಾರಣೆಗೆ ಹಾಜರಾಗಲು ಬೆಂಗಳೂರಿಗೆ ಹೊರಟುಹೋಗಿದ್ದರು. ಎಂತಲೇ ನಾಗಪ್ಪನವರಿಗೆ ಧೈರ್ಯವಾಗಿತ್ತು. ತಾವು ಬಂದು ಅಷ್ಟು ಹೊತ್ತಾಗಿದ್ದರೂ ಯಾರೂ ತಮ್ಮನ್ನು ಮಾತನಾಡಿಸಲು ಬಾರದಿದ್ದುದನ್ನು ಕಂಡು ಕಳವಳಪಡುತ್ತಿದ್ದ ಅವರ ಮನಸ್ಸು ನಿಶ್ಚಿಂತವಾಯಿತು.

ಅವರು ಮೌನವಾಗಿ ಅಂಗಳದಲ್ಲಿ ಚಾಪೆಯ ಮೇಲೆ ಕುಳಿತ್ತಿದ್ದಂತೆಯೇ ಶ್ಯಾನುಭೋಗರ ಮಗಳು ಸೀತೆ ಒಳಗೆ ಓಡಿ ಬಂದಳು. ನಾಗಪ್ಪನವರನ್ನು ಕಂಡು ತಿರಸ್ಕಾರದ ನೋಟ ಬೀರಿ, ವೆಂಕಮ್ಮನ ಬಳಿಗೆ ಬಂದು—

"ಅಕ್ಕ, ಅನ್ನ ಮಾಡಿದ್ದಾಯ್ತಾ ? ಅಮ್ಮ ಕೇಳು ಅಂದಳು"

"ಆಯ್ತಮ್ಮ"

ವೆಂಕಮ್ಮನ ಉತ್ತರವನ್ನು ಕೇಳಿ ಸೀತೆ ಹೊರಡಲನುವಾದಳು

"ಯಾಕೇ ಸಿತೂ, ಹೋಗ್ತಾ ಇದ್ದೀಯಾ ?"

"ಬಂದೇ ತಾಳು" ಎನ್ನುತ್ತಾ ಸೀತೆ ಹೊರಟೇಹೋದಳು.

ವೆಂಕಮ್ಮ ಉರಿಯುತ್ತಿದ್ದ ಒಲೆಯ ಮುಂದೆ ಕುಳಿತು, ಮುಂದಿನ ದಿನಗಳನ್ನು ಕುರಿತು ಯೋಚಿಸುತ್ತಿದ್ದಳು ಅವಳ ಕಣ್ಣಿಗೆ ಕಾಣುತ್ತಿದ್ದುದು ಕಷ್ಟದ ಕಪ್ಪುದಿನಗಳು....ದುಃಖದ ದುರ್ದಿನಗಳು !

ಸ್ವಲ್ಪಹೊತ್ತಿನ ನಂತರ ಸೀತೆ ಮತ್ತೆ ಓಡಿಬಂದು "ಅಕ್ಕಾ, ಅಮ್ಮ ಕರೆಯುತ್ತಾರೆ" ಎಂದಳು. "ಬರ್ತೀನಿ ನಡಿಯಮ್ಮ ಎಂದು ವೆಂಕಮ್ಮ ಉರಿಯುತ್ತಿದ್ದ ಒಲೆಯ ಕಡೆ ಒಮ್ಮೆ ದೃಷ್ಟಿಬೀರಿ ಸೀತೆಯೊಡನೆ

ಹೊರಟಳು.

ಲಕ್ಷ್ಮಮ್ಮನವರ ಮನೆಗೆ ಬಂದ ಮೇಲೆ, ಅವರು ಕರೆಕಳುಹಿದ ಉದ್ದೇಶವೇನೆಂದು ವೆಂಕಮ್ಮನಿಗೆ ತಟ್ಟನೆ ಹೊಳೆಯಿತು.

"ಸ್ವಲ್ಪ ಹುಳಿ, ಒಂದಿಷ್ಟು ಉಪ್ಪಿನಕಾಯಿ ಕೊಡ್ತೀನಿ, ಇಷ್ಟು ಹೊತ್ತಿನ ಮೇಲೆ ಇನ್ನು ಸಾರು ಮಾಡುತ್ತಾ ಕುಳಿತುಕೋಬೇಡ. ಮಜ್ಜಿಗೆ ಬೇಕಾದರೆ ಸೀತೂ ಕೈಯಲ್ಲಿ ಕಳುಹಿಸುತ್ತೇನೆ" ಎಂದರು ಲಕ್ಷ್ಮಮ್ಮ.

"ಹಾಗೇ ಆಗಲಮ್ಮ"

"ನಿನ್ನ ಯಜಮಾನರನ್ನು ಮಾತನಾಡಿಸಿದೆಯಾ ?"

"ಉಹ್ಞ"

"ಅವರೂ ಮಾತನಾಡಿಸಲಿಲ್ಲವೇ ?"

"ಇಲ್ಲ."

"ಹೋಗಲಿ ಬಿಡು. ಊಟಕ್ಕೆ ಕುಳಿತಾಗ ಏನಾದರೂ ಮಾತನಾಡಿಸಿದರೆ, ಸಮಾಧಾನವಾಗಿ ಒಂದೋ ಎರಡೋ ಮಾತಿನಲ್ಲಿ ಜವಾಬು ಕೊಡು. ಕೋಪಮಾಡಿಕೊಂಡು ಏನಾದರೂ ಅಂದು ಬಿಡಬೇಡ"

"ಹಾಗೇ ಆಗಲಮ್ಮ" ಎನ್ನುತ್ತಾ ವೆಂಕಮ್ಮ ತನ್ನ ಮನೆಗೆ ಬಂದಳು. ನಾಗಪ್ಪನವರು ಇನ್ನೂ ಹಾಗೆಯೇ ಕುಳಿತಿದ್ದರು.

"ಏಳಿ, ಕೈಕಾಲು ತೊಳೆದುಕೊಳ್ಳಿ ಅಡಿಗೆ ಆಗಿದೆ" ವೆಂಕಮ್ಮ ಮೆಲು ಮಾತಿನಲ್ಲಿ ನುಡಿದು ಅಡಿಗೆ ಮನೆಗೆ ಹೋದಳು ದೇವರ ಪಟದ ಮುಂದೆ ದೀಪ ಹಚ್ಚಿಟ್ಟು, ಎಲೆ ಹಾಕುವ ವೇಳೆಗೆ ನಾಗಪ್ಪನವರು ಊಟಕ್ಕೆ ಬಂದರು. ಮೌನವಾಗಿಯೇ ಊಟ ನಾಗಿತು.

ರಾತ್ರಿ ವೀಳ್ಯ ಕೊಡುವಾಗ ವೆಂಕಮ್ಮ—

"ಇವತ್ತು ಊಟ ಕೂಡ ಸರಿಯಾಗಿ ಮಾಡಲಿಲ್ಲ" ಎಂದಳು.

"ಯಾರಿಗೆ ಬೇಕು ನಿನ್ನೂಟ ? ಮನಸ್ಸಿಗೆ ಹಿಡಿಸದೆ ಇದ್ದುದು ಹೊಟ್ಟೆಗೆ ಹಿಡಿಸುತ್ತದೆಯೇ ?"

—ಸಿಡಿಮದ್ದಿನ ಆಸ್ಫೋಟನೆಯಂತೆ ಮಾತಿನ ಹನಿ ಟಪಟಪನೆ ಉದುರಿತು. ಮೌನವಾಗಿದ್ದ ಮೃಗವನ್ನು ಆಕಸ್ಮಿಕವಾಗಿ ಕೆರಳಿ

ಸಿದಂತಾಗಿತ್ತು. ಆ ಮಾತು ವೆಂಕಮ್ಮನಿಗೆ ಒಗಟಿನಂತಿತ್ತು. ಆದರೂ ಆಕೆ ಮಾರುತ್ತರ ಕೊಡದೆ ಸುಮ್ಮನಾದಳು. ನೆಟಿಮುಕೊಂಡಿದ್ದ ನಾಗಪ್ಪನವರು ಶಾಂತರಾಗಲಿಲ್ಲ.

ಮರುದಿನ ಬೆಳಿಗ್ಗೆ ಕಾಫಿ ಕುಡಿದು ನಾಗಪ್ಪನವರು ಶಾಲೆಯ ಬಾಗಿಲು ತೆರೆಯಲು ನಿಂಗನಪಳ್ಳಿಯ ಕಡೆಗೆ ಹೊರಟರು. ಎಂದಿನಂತೆ ದಾರಿಯಲ್ಲಿಯೇ ನೆರೆಯ ಊರಿನ ಶಾಲೆಯ ಉಪಾಧ್ಯಾಯರಾದ ವೆಂಕಟಯ್ಯನವರು ಎದುರಾದರು. ಪರಸ್ಪರ ನಮಸ್ಕಾರಗಳ ನಂತರ, ವೆಂಕಟಯ್ಯನವರು--

"ಏನು ಸ್ವಾಮಿ., ಎರಡು-ಮೂರು ದಿನಗಳಿಂದ ಕಾಣಲೇ ಇಲ್ಲ."

"ಬೆಂಗಳೂರಿಗೆ ಹೋಗಿದ್ದೆ ವೆಂಕಟಯ್ಯನವರೆ"

"ಮೊನ್ನೆ ಇನ್ಸ್‌ಪೆಕ್ಟರ್ ಸಾಹೇಬರು ಬಂದಿದ್ದರು."

"ಮೊನ್ನೆ. . ?"-ನಾಗಪ್ಪನವರು ಆಶ್ಚರ್ಯಚಕಿತರಾಗಿ ಕೇಳಿದರು.

"ಹೌದು ಸ್ವಾಮಿ. ಮೊನ್ನೆ ನಿಮ್ಮ ಸ್ಕೂಲಿಗೂ ಬಂದಿದ್ದರಂತೆ. ನೀವು ಬಾಗಿಲೇ ತೆರೆದಿರಲಿಲ್ಲವಂತೆ !"

"ಹೌದು, ನಾನು ಊರಿನಲ್ಲೇ ಇರಲಿಲ್ಲವಲ್ಲ"

"ಓಹೋ ! ಹಾಗೇನು !!"—ಎನ್ನುತ್ತಾ ವೆಂಕಟಯ್ಯನವರು ವಿಷಾದದ ನಗೆ ನಕ್ಕರು. ನಾಗಪ್ಪನವರೂ ಬಲವಂತವಾಗಿ ನಕ್ಕು ಮುಂದೆ ಹೆಜ್ಜೆ ಇಟ್ಟರು.

ಅವರು ಶಾಲೆಯ ಬಳಿ ಬರುವ ವೇಳೆಗೆ ಅಲ್ಲಿ ಹುಡುಗರಾರೂ ಇರಲಿಲ್ಲ. ಒಂದೆರಡು ಸಣ್ಣ ಮಕ್ಕಳು ಕೈಯ್ಯಲ್ಲಿ ಸ್ಲೇಟು ಹಿಡಿದು, ರಾಗಿರೊಟ್ಟಿ ತಿನ್ನುತ್ತಾ ಶಾಲೆಯ ಎದುರಿನ ಮರಳಿನಲ್ಲಿ ಆಟವಾಡುತ್ತಿದ್ದರು. ನಾಗಪ್ಪನವರು ಬೇಗ ಬೇಗನೆ ನಡೆದು ಗೌಡರ ಮನೆಗೆ ಬಂದರು. ಪ್ರತಿಸಂಜೆ ಶಾಲೆ ಮುಗಿದ ನಂತರ ಬೀಗಹಾಕಿ ಬೀಗದ ಕೈಯ್ಯನ್ನು ಗೌಡರ ಮನೆಯಲ್ಲಿ ಕೊಟ್ಟು ಹೋಗುವುದು ನಾಗಪ್ಪನವರ ಪದ್ಧತಿ. ಎಂತಲೇ ಬೀಗದ ಕೈ ತರಲು ಶಾಲೆಯ ಹುಡುಗರಾರೂ ಇಲ್ಲದ್ದರಿಂದ ತಾವೇ ಗೌಡರ ಮನೆಗೆ ಬಂದರು.

ಗೌಡರು ಬೆಂಗಳೂರಿಗೆ ಹೋಗಿದ್ದುದರಿಂದ ರಾಮಕ್ಕನೊಬ್ಬಳೇ ತೊಟ್ಟಿಯಲ್ಲಿ ಕುಳಿತು ತಲೆ ಬಾಚಿಕೊಳ್ಳುತ್ತಿದ್ದಳು. ನಾಗಪ್ಪನವರನ್ನು

ಕಂಡೊಡನೆಯೇ ಆಶ್ಚರ್ಯದಿಂದ—

"ಏನ್ ಸ್ವಾಮಿ, ಎಲ್ ಒಂಟೋಗಿದ್ರಿ ಇಷ್ಟ್‌ದಿನ ?"

"ಬೆಂಗಳೂರಿಗೆ ಹೋಗಿದ್ದೆ ರಾಮಕ್ಕ"

"ಏಳಬುಟ್ಟ್ವಾನ ಓಗ್‌ಬಾರದಾಗಿತ್ತ ?"

—ಎನ್ನುತ್ತಾ ಎದ್ದು ರಾಮಕ್ಕ ರಾಮದೇವರ ಪಟದ ಹಿಂದೆ ಇದ್ದ ಲಕೋಟೆಯನ್ನು ತೆಗೆದುಕೊಂಡು "ನೀವು ಬಂದ್ರೆ ಈ ಕಾಗ್ದ ಕೊಟ್ಟ್ಬಿಡು ಅಂತ ಕೊಟ್ಟವ್ರೆ ಬುದ್ಧಿ ಗೌಡರು" ಎಂದು ನಾಗಪ್ಪನವರ ಕೈಗಿತ್ತಳು. ಅವರು ನಡುಗುವ ಕೈಗಳಿಂದಲೇ ಅದನ್ನು ತೆಗೆದು ಕೊಂಡರು ಲಕೋಟೆಯನ್ನು ಬಿಡಿಸಿ ಕಾಗದ ಓದುತ್ತಿದ್ದಂತೆ ಅವರ ಮುಖ ನಿಸ್ತೇಜವಾಯಿತು ನಾಲಗೆ ಒಣಗಿತು. ಕಣ್ಣು ಮಂಜಾಯಿತು. ದೇಹದಲ್ಲಿದ್ದ ಶಕ್ತಿಯನ್ನೆಲ್ಲಾ ಯಾರೋ ಕಿತ್ತುಕೊಂಡತಾಗಿ ಅವರು ಅಲ್ಲೇ ಕುಸಿದು ಕೂತರು.

"ಏನ್ ಬರದೈತೆ ಬುದ್ಧಿ ಅದರಾಗ ?"

—ನಾಗಪ್ಪನವರ ಕಂಗೆಟ್ಟ ಸ್ಥಿತಿಯನ್ನು ನೋಡಿದ ರಾಮಕ್ಕ ಮುಗ್ಧಳಾಗಿ ಕೇಳಿದಳು. ಆಕೆಗೆ ಗೌಡರು ಈ ಸುದ್ದಿಯೊಂದನ್ನೂ ಹೇಳಿರಲಿಲ್ಲ.

ಆದರೆ ನಾಗಪ್ಪನವರಿಗೆ ರಾಮಕ್ಕನ ಪ್ರಶ್ನೆ ಕೇಳಿಸಿತೇ ? ಅವರು ಅನ್ಯ ಮನಸ್ಕರಾಗಿಯೋ ಶೂನ್ಯ ಮನಸ್ಕರಾಗಿಯೋ ನೆಲವನ್ನೇ ನಿಟ್ಟಿಸುತ್ತಾ ಕುಳಿತುಬಿಟ್ಟಿದ್ದರು.

ಆಗಲೇ ಗಂಟೆ ಎಂಟಾಗಿತ್ತು. ಸೂರ್ಯನು ಮೇಲ ಮೇಲಕ್ಕೆ ಬರುತ್ತಿದ್ದ. ಬಿಸಿಲು ತನಗೆ ಸಾಧ್ಯವೆನಿಸಿದೆಡೆಯಲ್ಲೆಲ್ಲಾ ಆಕ್ರಮಿಸುತ್ತಿತ್ತು. ಎಂದಿನಂತೆ ಗೌಡರ ಮನೆಯ ತೊಟ್ಟಿಯಲ್ಲೂ ಮೆಲ್ಲಮೆಲ್ಲನೆ ಹೆಜ್ಜೆಯಿಟ್ಟು ನಡು ಅಂಗಳದ ನಾಲ್ಕು ಕಂಭಗಳನ್ನೂ ದಾಟಿ, ಅಡಿಗೆ ಕೋಣೆಗೆ ಹೋಗುವ ದಾರಿಯಲ್ಲಿದ್ದ ಗೂಡಿನ ಬಳಿಯೂ ಪಸರಿಸಿತು. ಅಲ್ಲೇ ಮೌನವಾಗಿ ಕುಳಿತಿದ್ದ ನಾಗಪ್ಪನವರಿಗೆ ಆ ಬಿಸಿಲಿನ ಪರಿವೆಯೂ ಇರಲಿಲ್ಲ. ಸನಿಯದಲ್ಲೇ ಕುಳಿತಿದ್ದ ರಾಮಕ್ಕನ ಅರಿವೂ ಇರಲಿಲ್ಲ. ತಲೆತಗ್ಗಿಸಿ ಕುಳಿತಿದ್ದ ಅವರ ಹೃದಯದಲ್ಲಿ ದೊಡ್ಡ ಬಿರುಗಾಳಿ ಎದ್ದು ಮನಸ್ಸಿನ ಮಹಾಕಡಲನ್ನು ಅಲ್ಲೋಲಕಲ್ಲೋಲ

ಗೊಳಿಸಿದ್ದಿತು. ಬಾಳ ದೋಣಿಯಲ್ಲಿ ಹೊಸ ನಾವಿಕರಾಗಿದ್ದ ಅವರಿಗೆ ಆ ಬಿರುಗಾಳಿಯ ಭರದಲ್ಲಿ ದಿಕ್ಕುತಪ್ಪಿ, ಬುದ್ಧಿಬಾನಿಗೆ ಮಂಕುಮೋಡ ಕವಿದಂತಾಗಿತ್ತು.

ರಾಮಕ್ಕ ಇನ್ನೂ ಎರಡು ಬಾರಿ ಅವರನ್ನು ಕೂಗಿದಳು. ಆದರೆ ಅವರು ಓ ಗೊಡದೆ ಮೌನವನ್ನು ಕಾಪಾಡಿಕೊಂಡಿದ್ದರು.

ಗೌಡರ ಮನೆಯ ಆಳುಗಳು ಹೊಲದ ಕೆಲಸಕ್ಕೆ ಹೊರಟು ಹೋಗಿದ್ದರಿಂದ ಮನೆಯಲ್ಲಿ ರಾಮಕ್ಕನನ್ನು ಉಳಿದು ಬೇರೆ ಯಾರೂ ಇರಲಿಲ್ಲ. ಆಕೆ ಒಬ್ಬಳೇ ಅವರೆದುರಿಗೆ ಕುಳಿತುಕೊಳ್ಳಲು ಮನಸ್ಸು ಒಪ್ಪದೆ, ಅಲ್ಲಿಂದೆದ್ದು ಒಳಗೆ ಹೋದಳು. ನಾಗಪ್ಪನವರ ಅಂದಿನ ಪರಿಸ್ಥಿತಿಗೆ ಏನು ಕಾರಣವೆಂದು ಹತ್ತಾರು ಬಾರಿ ಯೋಚಿಸಿದಳು. ಕಾಗದವನ್ನು ಓದುತ್ತ ಅವರ ಮುಖ ಕಪ್ಪಿಟ್ಟುದನ್ನು ಆಕೆ ಗಮನಿಸಿದ್ದ ರಿಂದ, ಆ ಕಾಗದದಲ್ಲಿ ಏನು ಬರೆದಿದೆಯೋ ಎಂದುಕೊಂಡಳು.

ಒಲೆಯ ಮೇಲಿದ್ದ ಹಾಲಿನ ಮಡಿಕೆ ಅವಳ ಗಮನ ಸೆಳೆಯಿತು. ಕೂಡಲೇ ಒಂದು ಕಂಚಿನಬಟ್ಟಲು ತೆಗೆದುಕೊಂಡು, ಅದರ ತುಂಬ ಹಾಲು ಬಗ್ಗಿಸಿ ಸೆರಗಿನ ತುದಿಯಿಂದ ಗಟ್ಟಿಯಾಗಿ ಹಿಡಿದುಕೊಂಡು ಹೊರಗೆ ಬಂದಳು.

ನಾಗಪ್ಪನವರು ಇನ್ನೂ ಅಲ್ಲಿಯೇ ಕುಳಿತಿದ್ದರು. ಬಿಸಿಲಿನ ಪ್ರಖರ ಕಿರಣಗಳು ಅವರ ಮೈಬೆವರನ್ನು ಹೊರಗೆಳೆಯತೊಡಗಿದ್ದವು. ತಲೆಯ ಮೇಲಿನಿಂದ ಹರಿದು ಬರುತ್ತಿದ್ದ ಬೆವರು ಧಾರೆ ಹಣೆಯ ಮೇಲೆಲ್ಲಾ ಹರಡಿತ್ತು. ಆದರೂ ಹಟ ಮಾಡಿದವರಂತೆ ನಾಗಪ್ಪ ನವರು ಕುಳಿತ ಜಾಗವನ್ನು ಬಿಟ್ಟು ಅಲುಗಾಡಲಿಲ್ಲ.

ರಾಮಕ್ಕ ಹಾಲಿನ ಬಟ್ಟಲಿನೊಡನೆ ಅವರ ಬಳಿಗೆ ಬಂದು—

"ಬುದ್ಧೀ, ಒಸಿ ಹಾಲಾನ ಕುಡೀರಿ"

ಎಂದಳು. ನಾಗಪ್ಪನವರು ಮೆಲ್ಲನೆ ತಲೆ ಎತ್ತಿದರು. ಕಣ್ಣು ಗಳಲ್ಲಿ ಕಳೆಯಿಲ್ಲದೆ ಸೋತುಹೋಗಿದ್ದವು. ಅವು ರಾಮಕ್ಕನ ಕಡೆಗೆ ನೋಡಲಾರದೆ ಅವಳ ಕೈಯಲ್ಲಿದ್ದ ಹಾಲಿನ ಬಟ್ಟಲಿನ ಕಡೆಗೆ ಮಾತ್ರ ನೋಡಿದವು.

"ಕೊಳ್ಳಿ ಸ್ವಾಮಿ"

"ಬೇಡ" ಎನ್ನುವಂತೆ ನಾಗಪ್ಪನವರು ತಲೆ ಅಲುಗಿಸಿದರು.

"ಇದ್ಯಾಕ್ ಸ್ವಾಮಿ, ಇಂಗ್ ಮಾಡ್ತೀರಿ ಇವತ್ತು ?"

"................"

"ಕಾಗ್ದ ಓದಿದ್ರಲ್ಲ ಏನಯ್ತೆ ಅದರಾಗ ?"

"................"

"ಹೇಳಿ ಬುದ್ಧಿ"

ಆ ಧ್ವನಿಯಲ್ಲಿ ಅಂಗಲಾಚುವ ಭಾವವಿತ್ತು. ಆದರೆ ಆಕೆಗೆ ಹೇಗೆ ಉತ್ತರಿಸಬೇಕೆಂಬುದು ನಾಗಪ್ಪನವರಿಗೆ ತೋಚಲಿಲ್ಲ.

ಬಲವಂತವಾಗಿ ನಗುತ್ತಾ—

"ಕೆಲಸ ಹೋಯ್ತು ರಾಮಕ್ಕ. ಇನ್ನು ಮೂರು ತಿಂಗಳು ಈ ಪೋಸ್ಟು ಕೆಲಸ ಇಲ್ಲ."

"ಅದೇನಾ ಬುದ್ಧಿ ಆ ಕಾಗ್ದದಾಗ ಬರ್ದಿರೋದು"

"ಹ್ಞೂ" ಎಂದರು ನಾಗಪ್ಪ.

ಬಟ್ಟಲಲ್ಲಿದ್ದ ಹಾಲು ಹಾಗೆಯೇ ಇತ್ತು. ನಾಗಪ್ಪನವರು ಅದನ್ನು ಮುಟ್ಟಲೇ ಇಲ್ಲ. ಯಾವ ಆಸರೆಯ ಭರವಸೆಯ ಮೇಲೆ ಬಾಳಿನ ಭವ್ಯ ಭವನವನ್ನು ಕಟ್ಟಿದ್ದರೋ, ಆ ಆಸರೆಯ ತಳಹದಿಯೇ ಕೆಸರಿನಲ್ಲಿ ಮುಚ್ಚಿಹೋಗಿ, ಸರ್ವನಾಶದ ಖಚಿತ ಸೂಚನೆಯೆಂಬಂತೆ ಸಂಪಾದನೆಗೇ ಸಾವು ಬಂದು ಸಂಕಟ ಪಡುತ್ತಿರುವಾಗ ಈ ಹಾಲು ಕುಡಿದು ಸಮಾಧಾನ ಪಡುವುದು ಸಾಧ್ಯವೇ ಎಂದು ಅವರ ಹೃದಯದ ಧ್ವನಿ ಅಣಕಿಸುತ್ತಿತ್ತು.

"ಹಾಲು ಆರೋಗ್ತಯ್ತೆ ಬುದ್ಧಿ"

ಅದುವರೆಗೂ ಮೌನವಾಗಿ ಕುಳಿತಿದ್ದ ನಾಗಪ್ಪನವರು ಒಮ್ಮಿಂದೊಮ್ಮೆಗೇ—

"ಊಹ್ಞೂ, ನನಗೆ ಬೇಡ"

ಎಂದು ನುಡಿದು ತಟಕ್ಕನೆ ಅಲ್ಲಿಂದೆದ್ದು ಹೊರಗೆ ಹೊರಟು ಅಗ್ರಹಾರದ ದಾರಿಯಲ್ಲಿ ತಲೆತಗ್ಗಿಸಿಕೊಂಡು ನಡೆದರು.

"ಮುಂದೇನು ಮುಂದೇನು ?" ಎನ್ನುತ್ತಿತ್ತು ಮನಸ್ಸು.

"ಅನ್ಯಾಯವಾಗಿ ಮೂರುತಿಂಗಳು ಕೆಲಸ ಕಳೆದುಕೊಂಡು

ಮನೆಯಲ್ಲಿ ಕುಳಿತುಕೊಂಡೆಯಲ್ಲ !"

—ಸುಪ್ತವಾಗಿದ್ದ ವಿವೇಕ ಕೆರಳಿ ಕೇಳಿತು.

"ಇದಕ್ಕೆ ಯಾರು ಕಾರಣರು ? ಯಾರು ಕಾರಣರು ?"

—ಮನಸ್ಸು ಪ್ರಶ್ನಿಸಿತು

"ನಿನ್ನ ಆಸೆ—ತಾತ್ಸಾರ—ಅಹಂಕಾರ"

"ಅಲ್ಲ"

'ಮತ್ತೆ ?"

"ವೆಂಕು .. ವೆಂಕು ...ವೆಂಕು"

—ನಾಗಪ್ಪನವರ ಮನಸ್ಸು ಸಿಟ್ಟಿನಿಂದ ಬೊಬ್ಬೆಯಿಟ್ಟಿತು—ವಿವೇಕದ ವಿಚಾರ ಸರಣಿಗೆ ಅವಕಾಶ ಕೂಡದಂತೆ

ಹೌದು, ಹೌದು. ಇಷ್ಟಕ್ಕೆಲ್ಲಾ ವೆಂಕುವೇ ಕಾರಣ. ಅವಳು ತನ್ನ ಕೈಹಿಡಿದ ಘಳಿಗೆ ಒಳ್ಳೆಯದಲ್ಲ ಆಗಬಾರದ್ದೆಲ್ಲ ಆಗಿ ತನ್ನ ಸರ್ವನಾಶಕ್ಕೇ ಅವಳು ಬಂದಿದ್ದಾಳೆ. ಬರುವಾಗಲಾದರೂ ಕೈಬೀಸಿ ಕೊಂಡೇ ಬಂದಳು. ತೌರುಮನೆಯಿಂದ ಒಂದು ಕುರುಡು ಕವಡೆ ಯನ್ನೂ ತರದೆ, ಬಡತನದ ಬೊಂಬೆಯಾಗಿ ತನ್ನೊಡನೆ ಬಂದು ತನ್ನನ್ನೇ ಭಿಕಾರಿಯಾಗಿ ಮಾಡಿದಳು ತನ್ನ ಬಾಳಿಗೇ ಕುಠಾರ ಪ್ರಾಯಳಾಗಿ ಬಂದಳು ಬಯಸಿ ಬಯಸಿ ಶನಿಯ ಕೊರಳಿಗೆ ಮಾಂಗಲ್ಯ ಕಟ್ಟಿ ಬಲವಂತವಾಗಿ ತನ್ನ ಮನೆಗೆ ಕರೆದುಕೊಂಡು ಬಂದಂತಾಯಿತು

—ಕೆಟ್ಟಮನಸ್ಸಿನ ಹುಚ್ಚು ಪ್ರವಾಹದಲ್ಲಿ ನಾಗಪ್ಪನವರು ಕೊಚ್ಚಿಕೊಂಡು ಹೋಗುತ್ತಿದ್ದರು. ನಿಸ್ಸಹಾಯಕಳಾದ ಸೌಮ್ಯ ಮೂರ್ತಿ ವೆಂಕಮ್ಮ ಅವರ ಉದ್ದೀಪ್ತ ಮನೋ ನಯನಗಳೆದುರಿಗೆ ನಿಂತಿದ್ದಳು ನಿಷ್ಕಳಂಕ ಪ್ರತಿಮೆಯಾಗಿ ಜೊತೆಯ ಬಾಳನ್ನು ಕಳಾ ಪೂರ್ಣವಾಗಿ ಬೆಳಗಲು ಬಂದಿದ್ದ ಆಕೆ ನಾಗಪ್ಪನವರ ದೃಷ್ಟಿಯಲ್ಲಿ ಹಗಲು ಹತ್ತಿ ಹಳ್ಳಕ್ಕೆ ತಳ್ಳುವ ಶನಿಯಾಗಿ ಗೋಚರಿಸಿದಳು. ತಾನು ಮಾಡಿದ ತಪ್ಪಿಗೆ ವೆಂಕಮ್ಮ ಹೇಗೆ ಕಾರಣಳಾದಳು ಎಂಬ ವಿವೇಚನೆಗೆ ಅವರು ಸಿದ್ಧರಾಗಿರಲಿಲ್ಲ. ಅವರ ಮೂಢನಂಬಿಕೆಯ ಮೋಡದ ತೆರೆ ಯಲ್ಲಿ ವಿವೇಕ ಚಂದ್ರ ಮರೆಯಾಗಿ ಹೋಗಿದ್ದ.

ನಾಗಪ್ಪನವರು ಅಗ್ರಹಾರದ ಸಮೀಪಕ್ಕೆ ಬಂದಿದ್ದರು. ಸುಮಾರು ಹತ್ತು ಗಂಟೆಯಾಗಿದ್ದರಿಂದ ಬೇಸಿಗೆ ಬರುವ ಮುನ್ಸೂಚನೆಯ ಬಿಸಿಲು ಪ್ರಜ್ವಲವಾಗಿಯೇ ಇದ್ದಿತು. ಗಿಡಮರದೆಲೆಗಳು ಸಹ ಅಲುಗಾಡದಷ್ಟು ಅತಿ ಮಂದವಾಗಿ ಗಾಳಿ ಬೀಸುತ್ತಿದ್ದುದರಿಂದ ಸೆಖೆಯ ವಾತಾವರಣ ಆಗಲೇ ಏರ್ಪಟ್ಟಿದ್ದಿತು. ನಾಗಪ್ಪನವರು ಕೈಬೆರಳುಗಳಿಂದ ಹಣೆಯ ಮೇಲಿನ ಬೆವರು ಹನಿಗಳನ್ನು ಒರೆಸಿಕೊಂಡು ಮನೆಯೊಳಗೆ ಅಡಿಯಿಟ್ಟರು.

ವೆಂಕಮ್ಮ, ಸಾರಿಸಿದ ಮನೆಗೆ ರಂಗವಲ್ಲಿಯಿಡುತ್ತಿದ್ದಳು. ಬಗೆಬಗೆ ಚಿತ್ತಾರದ ರಂಗವಲ್ಲಿ ಇಡುವುದೆಂದರೆ ಚಿಕ್ಕಂದಿನಿಂದಲೂ ಅವಳಿಗೆ ತುಂಬ ಆಶೆ. ಅಷ್ಟಗ್ರಾಮದಲ್ಲಿದ್ದಾಗಲೂ ಮನೆಯನ್ನು ಸಾರಿಸಿ, ರಂಗವಲ್ಲಿಯಿಡುವವಳು ಅವಳೇ. ಪ್ರತಿಸಾರಿಯೂ ಹೊಸ ಹೊಸ ಮಾದರಿಯ ಕೋನಗಳನ್ನು ರಚಿಸಿ, ಚುಕ್ಕೆ ಚುಕ್ಕೆಯ ನಕ್ಷತ್ರ ವರ್ತುಲದಲ್ಲಿ ಅಷ್ಟ ದಿಗ್ಬಂಧನೆಯ ವಿಶಿಷ್ಟ ತರಹೆಯ ರಂಗವಲ್ಲಿ ಬರೆಯುವುದೆಂದರೆ ಗಂಟೆಗಟ್ಟಲೆಯಾದರೂ ಸರಿಯೇ—ಬೇಸರಪಟ್ಟುಕೊಳ್ಳುತ್ತಿರಲಿಲ್ಲ. ಒಮ್ಮೊಮ್ಮೆ ಯಾವಾಗಲಾದರೂ ಕೋಪದ ಭರದಲ್ಲಿ ತನ್ನ ಮಲತಾಯಿ ಬೈದು ಮಾತನಾಡಿಸದಿದ್ದಾಗ, ವೆಂಕಮ್ಮ ಸ್ಲೇಟಿನಲ್ಲಿ ರಂಗೋಲಿ ಬರೆದು, ಅದರಲ್ಲಿ ಹೊಸ ಅಲಂಕಾರವೆಂಬಂತೆ ಅಲ್ಲಲ್ಲಿ ತಿದ್ದಿ, ನಡುವೆ ಪೀಠವನ್ನು ರಚಿಸಿ, ಅದರ ಮುಂಗಡೆಗೆ ಮಾಲೆಗಳ ಸಾಲುಗಳನ್ನು ಪೇರಿಸಿದಂತೆ ಬಳಪದಲ್ಲಿ ಕುಸುರು ಕೆಲಸ ಮಾಡಿ, ಚಿಕ್ಕಮ್ಮ ತನ್ನನ್ನು ಬೈಯ್ಯಲೇ ಇಲ್ಲ–ಹೊಡೆಯಲೇ ಇಲ್ಲ–ಕೋಪವನ್ನೂ ಮಾಡಿಕೊಳ್ಳಲಿಲ್ಲವೆಂಬಂತೆ, ಅವಳ ಬಳಿಗೋಡಿ—

"ಚಿಕ್ಕಮ್ಮ.... ಚಿಕ್ಕಮ್ಮ"

ಎಂದು ನಗೆಮುಖದಿಂದ ಸ್ಲೇಟನ್ನು ಅವಳ ಮುಖಕ್ಕೆ ಹಿಡಿದಾಗ,

"ಏನೇ ಅದು ?"

—ಎಂಬ ಸಿಟ್ಟಿನ ಧ್ವನಿ ಬಂದರೂ, ಎರಡು ಕ್ಷಣಗಳ ನಂತರ ಅವಳ ಕೈಯಿಂದ ಸ್ಲೇಟನ್ನು ಕಿತ್ತುಕೊಂಡು—

"ಯಾರೇ ಬರೆದೋರು ?"

"ನಾನೇ ಚಿಕ್ಕಮ್ಮ !"

"ನಿಜವಾಗ಼್ೂ ನೀನೇ ಬರೆದೆಯೇನೇ ವೆಂಕು?"

"ಹ್ಞೂ. ಚಿಕ್ಕಮ್ಮ"

"ತುಂಬ ಚೆನ್ನಾಗಿದೆ ಕಣೆ. ನಾಳೆ ಅಂಗಳ ಸಾರಿಸಿದಾಗ, ದೇವರ ಪಟದ ಮುಂದೆ ಹೀಗೇ ಬರೆಯೇ ವೆಂಕು. ನೋಡೋಕೆ ತುಂಬ ಚೆನ್ನಾಗಿರುತ್ತೆ!"–ಎಂದು ಪ್ರಸನ್ನವದನದಿಂದ ನುಡಿದೇ ನುಡಿಯುವರು. ಚಿಕ್ಕಮ್ಮನ ಕೋಪ ಶಾಂತಿಗೆ ಇದೊಂದು ದಾರಿ ಎಂದು ವೆಂಕಮ್ಮನಿಗೆ ತಿಳಿದಿತ್ತು.

ಮತ್ತೆ ಕೆಲವು ಬಾರಿ ಚಿಕ್ಕಮ್ಮ ಕೋಪಗೊಂಡಾಗ ವೆಂಕು ಅನುಸರಿಸುತ್ತಿದ್ದ ಮಾರ್ಗವೇ ಬೇರೆ! ಆಗಾಗ ಅನಂತಯ್ಯನವರ ಮನೆಗೆ ಬಂದು ಬಿಡಾರ ಮಾಡುತ್ತಿದ್ದ ಹರಿಕಥೆ ದಾಸರು ಆ ಮಾರ್ಗವನ್ನು ಆಕೆಗೆ ತೋರಿಸಿದ್ದರು

ವೆಂಕಮ್ಮ ಚಿಕ್ಕಮ್ಮನ ಕೋಪಾಗ್ನಿಗೆ ಆಹುತಿಯಾಗಿ, ಅವಳಿಂದ ದೂರವಾದ ಅರ್ಧ ಗಂಟೆಯ ನಂತರ, ಅಡಿಗೆ ಕೋಣೆಗೆ ಓಡಿ ಬಂದು, ಆಕೆ ಯಾವುದೋ ಕೆಲಸದಲ್ಲಿ ತೊಡಗಿರುವಾಗ ತಟ್ಟನೆ ಅವಳ ಕಾಲುಗಳನ್ನು ಗಟ್ಟಿಯಾಗಿ ಹಿಡಿದುಕೊಂಡು—

"ಚಿಕ್ಕಮ್ಮ, ನಾ ಮಾಡಿದ್ದು ತಪ್ಪು. ಕೋಪಿಸ್ಕೋಬೇಡ ಚಿಕ್ಕಮ್ಮ"

—ಎಂದು ಅತಿ ದೈನ್ಯದಿಂದ ಮರುಕ ಉದಿಸುವಂತೆ, ನಾಚಿಕೆ ಮರೆತು ನುಡಿಯುವಳು ಅವಳ ಮುಗ್ಧತೆಯನ್ನೂ ಸರಳತೆಯನ್ನೂ ಕಂಡು, ಮಲತಾಯಿಯಾದರೂ ಮಮತೆಯಿಂದ ವೆಂಕುವನ್ನು ಎಬ್ಬಿಸಿ ಅವಳ ತಲೆಯನ್ನು ತಡವಿ—

"ಹೋಗ್ಲಿ ಏಳಮ್ಮ. ನಾನೇನೂ ಕೋಪ ಮಾಡಿಕೊಳ್ಳೋಲ್ಲ!"

ಎಂದು ಮೃದುನುಡಿಯಾಡುವರು. ಅಂತಹ ಸಮಯಗಳಲ್ಲಿ ಆಕೆ ಮಲತಾಯಿಯಲ್ಲ; ನಿಜವಾಗಿಯೂ ತನ್ನನ್ನು ಹೆತ್ತ ತಾಯಿಯೇ ಎಂಬ ಭ್ರಮೆಯಾಗುವುದು ವೆಂಕಮ್ಮನಿಗೆ.

ಆದರೆ ರಂಗವಲ್ಲಿಯನ್ನು ಮೆಚ್ಚುವವಳು ತನ್ನ ಚಿಕ್ಕಮ್ಮನೊಬ್ಬಳೇ ಅಲ್ಲ. ಅವಳಾದರೆ ಹೆಂಗಸು – ತನಗೆ ಪ್ರಿಯವಾದ ಕಲೆಯನ್ನು ಮೆಚ್ಚುವುದರಲ್ಲಿ ಆಶ್ಚರ್ಯವಿಲ್ಲವೆಂದರೆ, ತಂದೆ ಅನಂತಯ್ಯ

ನವರೂ ಮೆಚ್ಚಿ ಹೊಗಳುವುದರಲ್ಲಿ ಆಶ್ಚರ್ಯವಿಲ್ಲವೇ? ಅವರು ಗಂಡಸರು ಸಹಜವಾಗಿ ಅವರ ಹೃದಯ ಮೃದುವಲ್ಲ; ಮನಸ್ಸು ಮಲ್ಲಿಗೆಯಲ್ಲ; ಮಾತೂ ಮಾಣಿಕ್ಯವಲ್ಲ: ಆದರೂ ಅವರು, ತನ್ನ ರಂಗವಲ್ಲಿಯ ಚಿತ್ತಾರವನ್ನು ಕಂಡಾಗ ಎಷ್ಟೊಂದು ಆನಂದಿಸುತ್ತಾರೆ! ಎಷ್ಟು ಹೊಗಳುತ್ತಾರೆ! ಆ ಸಮಯದಲ್ಲಿ ಅವರಿಗೆ ಯಾರಮೇಲೆ ಕೋಪ ವಿದ್ದರೂ ಮರೆತುಬಿಡುತ್ತಾರೆ ಅಂತಹ ಆಕರ್ಷಕ ವೈಚಿತ್ರ್ಯವಿದೆ ತನ್ನ ರಂಗವಲ್ಲಿಯಲ್ಲಿ ಎಂದು ವೆಂಕಮ್ಮನಿಗೆ ಹೆಮ್ಮೆ

ಆದರೆ ನಾಗಪ್ಪನವರನ್ನು ಮದುವೆಯಾದಂದಿನಿಂದ, ಅವರು ತನ್ನ ಬಳಿ ಎಳ್ಳಷ್ಟೂ ಸಂತೋಷ ತೋರಿಸಿಕೊಂಡವರಲ್ಲ. ಏನೋ ತಿರಸ್ಕಾರ–ಔದಾಸೀನ್ಯಗಳ ಪ್ರದರ್ಶನವನ್ನೇ ತಾನು ನೋಡಿದುದು. ಮೊದಲ ದಿನ ರಾತ್ರಿಯೂ ಪ್ರೀತಿಯ ಮಾತು ಅವರ ಬಾಯಿಂದ ಬರಲಿಲ್ಲ. ರಸಿಕತೆಯ ಹಾಸ್ಯ ಚಟಾಕಿಯನ್ನೂ ತಾನು ಅನುಭವಿ ಸಿರಲಿಲ್ಲ ಬರೀ ಹೆಣ್ಣುಗಂಡುಗಳ ಯೌವ್ವನದ ಸಹಜ ದಾಹ ತೀರಿಸ್ತಿ ದಷ್ಟೇ ಹೊರತು ಅದರಲ್ಲಿಯೂ ಸುಖವನ್ನು ಸೃಷ್ಟಿಸಿಕೊಳ್ಳಲು ಸಾಧ್ಯವಾಗಲಿಲ್ಲ.

....ಬೆಂಗಳೂರಿನಿಂದ ಹಿಂತಿರುಗಿ ಬಂದ ಮೇಲಂತೂ ತನ್ನ ಗಂಡ ಮೌನದ ಬೊಂಬೆಯಾಗಿದ್ದಾರೆ. ಆದರೆ ಆ ಬೊಂಬೆಯ ಮುಖದಲ್ಲಿ ಎಷ್ಟೊಂದು ಕೋಪ? ಆ ಕಣ್ಣುಗಳಂತೂ ಅಗ್ನಿ ವೃಷ್ಟಿ ಯನ್ನೇ ಕರೆಯುತ್ತಿವೆ! ಸಿಟ್ಟಿನ ಸೋನೆಯಿಂದ ನೆನೆದ ಮುಖ ಹೆಪ್ಪುಗಟ್ಟಿದೆ. ಇದಕ್ಕೆಲ್ಲಾ ಏನು ಕಾರಣವಿರಬೇಕು?

......ತಾನಾವಾಗ ಎಂದು ಅವರಿಗೆ ಕೋಪ ಬರುವಂತೆ ನಡೆದುಕೊಂಡಿದ್ದೇನೆ? ಒಂದು ನಾರಿಯಾದರೂ ಅವರ ಮಾತಿಗೆ ಎದುರು ಹೇಳಿದವಳಲ್ಲ ಇಂಥದು ಬೇಕು ಎಂದು ಯಾವಾಗಲೂ ಕೇಳಿದವಳಲ್ಲ. ಆಡುವ ಮಾತನ್ನೂ—ಆಡಬಹುದೋ–ಕೂಡದೋ ಎಂದು ತೂಗಿ ತೂಗಿ ಆಡುತ್ತಿದ್ದೇನೆ. ಆದರೂ ಅವರು ಪ್ರಸನ್ನ ರಾಗಲಿಲ್ಲವಲ್ಲ! ಎಂತಹ ದುರದೃಷ್ಟ ತನ್ನದು!

—ಎಂದುಕೊಂಡು ವೆಂಕಮ್ಮ ಬೀದಿಯ ಹೊಸಲಿನ ಕಡೆಗೆ ನೋಡಿದಳು....ನಾಗಪ್ಪನವರು ನಿಂತಿದ್ದಾರೆ!

ಐದೂವರೆ ಅಡಿ ಎತ್ತರ ನಿಲುವು. ಸ್ಕೈ ಕೈ ತುಂಬಿಕೊಂಡು ದೃಢವಾಗಿರುವ ದೇಹ. ಪೊಜ್ಜು ಬೆಳೆದು ಮುಂದಕ್ಕೆ ಬರುತ್ತಿರುವ ಹೊಟ್ಟೆ; ಉಬ್ಬಿದ ಕೆನ್ನೆಗಳು, ದಪ್ಪ ತುಟಿ, ಕಿಡಿಯುದುರುವ ಕಣ್ಣು, ಮುಖದಲ್ಲೆಲ್ಲ ಎದ್ದು ಕಾಣುವ ಗರುಡ ಮೂಗು, ವಿಶಾಲವಾದ ಹಣೆ ನೋಡಿದೊಡನೆ ಬಡ ಉಪಾಧ್ಯಾಯನೆಂದು ಸಾರುವ ಧೂಳು ತುಂಬಿದ ಕೋಟು, ಪಿಕ್ಕಿಜುಟ್ಟನ್ನು ಮುಚ್ಚಲು ತಲೆಗೆ ಕೆಂಪು ಟೋಪಿ ಸುತ್ತ ಕಚ್ಚೆ ಹಾಕಿದ ಪಂಚೆಯುಟ್ಟು ನಿಂತಿದ್ದಾರೆ ಆ ಅಗ್ನಿದೇವ!

ವೆಂಕಮ್ಮನ ಹೃದಯ ಭಯದಿಂದ ವೇಗವಾಗಿ ಬಡಿದುಕೊಳ್ಳ ಲಾರಂಭಿಸಿತು ಆಕೆ ಎದ್ದು ರಂಗೋಲೆಯ ಬಟ್ಟಲನ್ನು ತೆಗೆದು ಕೊಂಡು ಬೇಗಬೇಗನೆ ಒಳಗೆ ಹೊರಟು ಹೋದಳು.

ನಾಗಪ್ಪನವರು ಹೊಸಲು ದಾಟಿ ಒಳಗೆ ಬಂದರು ಮೂಲೆ ಯಲ್ಲಿ ಸುರುಳಿಯಾಗಿದ್ದ ಚಾಪೆಯನ್ನು ತಾವೇ ಹಾಸಿ ಕುಳಿತರು. ಕೆಲಸವಿಲ್ಲದ ಕಣ್ಣುಗಳು ಕ್ಷಣಕಾಲ ಚಿತ್ತಾರದ ರಂಗವಲ್ಲಿಯನ್ನು ನಿಟ್ಟಿಸಿದುವು. ಮನದಲ್ಲಿ ಮೂಡಿದ್ದ ಕೋಪ ಮುಖದಲ್ಲಿ ಹೊರ ಹೊಮ್ಮಿ ಕ್ಷಣಕ್ಷಣಕ್ಕೆ ಇಮ್ಮಡಿಸುತ್ತಿತ್ತು.

ಅಷ್ಟರಲ್ಲಿ ವೆಂಕಮ್ಮ ಒಳ ಅಂಗಳದ ಬಾಗಿಲಲ್ಲಿ ಮರೆಯಲ್ಲಿ ನಿಂತು

"ಇನ್ನೊಂದು ಕಪ್ಪು ಕಾಫಿ ಮಾಡಿಕೊಡಲೇನು?"

"ಕಾಫಿಯೂ ಬೇಡ... ಸುಡುಗಾಡೂ ಬೇಡ!"

—ಕೋಪದ ಕೆಚ್ಚಿನಲ್ಲಿ ಅರ್ಥವಿಲ್ಲದೆ ನುಡಿದರು ನಾಗಪ್ಪ. ಅವರ ಮಾತುಗಳು ಈಟಿಯಂತೆ ವೆಂಕಮ್ಮನ ಹೃದಯವನ್ನು ಇರಿದವು. ಅವಳು ಒಲೆಯ ಮುಂದೆ ಹೋಗಿ ಕುಳಿತು, ತನ್ನ ವಿಧಿಯನ್ನು ನೆನೆದು ಶಬ್ದವಿಲ್ಲದೆ ಅಳತೊಡಗಿದಳು.

ಹೀಗೆ ಇಬ್ಬರೂ ಒಂದೊಂದೆಡೆ ಕುಳಿತು ಮೌನವಾಗಿದ್ದಾಗ ಶ್ಯಾನುಭೋಗರ ಮನೆಯ ಸೀತು ಒಳಗೆ ಬಂದಳು ಸದ್ದುಮಾಡದೆ ಅಡಿಗೆಯ ಕೋಣೆಗೆ ಕಳ್ಳ-ಹೆಜ್ಜೆಯಿಟ್ಟು ಬಂದು ವೆಂಕಮ್ಮನ ಬೆನ್ನ ಹಿಂದೆ ನಿಂತಳು. ಎರಡು ಕ್ಷಣಗಳನಂತರ ಅವಳಿಗೆ ತಿಳಿಯದಂತೆ ಕಣ್ಣು ಮುಚ್ಚಿದಾಗ ಸೀತೆಯ ಕೈಗಳು ಒದ್ದೆಯಾದವು.

ನಗೆಯಾಡುವುದಕ್ಕೆಂದು ಬಂದ ಸೀತೆ, ವೆಂಕಮ್ಮ ಅಳುತ್ತಿರುವುದನ್ನು ಕಂಡು ಗಾಬರಿಗೊಂಡಳು.

"ಅಕ್ಕ ಅಕ್ಕ...."

ವೆಂಕಮ್ಮ ಮುಖದ ಮೇಲೆ ನಗೆಯ ತೆರೆಯನ್ನು ಎಳೆದುಕೊಂಡು, ಸೀತುವಿನಕಡೆಗೆ ಪ್ರೇಮಪೂರ್ಣ ದೃಷ್ಟಿಯನ್ನು ಬೀರಿದಳು.

"ಯಾಕಕ್ಕ ಅಳುತ್ತಿದ್ದೀ ?"

"ಇಲ್ಲಮ್ಮ"

"ನೋಡು, ಕಣ್ಣಲ್ಲಿ ನೀರು"

"ಹೊಗೆ ಕಣೆ ಸೀತು "

"ಇಷ್ಟೊಂದು ಚೆನ್ನಾಗಿ ಉರಿತಾ ಇದೆ ಒಲೆ. ಹೊಗೆ ಎಲ್ಲಿದೇಕ್ಕ?"

"ಅಯ್ಯೋ, ನಿಂಗೊತ್ತಿಲ್ಲಾ ಕಣೆ. ಆಗ್ಲೇ ಹೊಗೆ ತುಂಬ್ಕೊಂಡ್ ಬಿಟ್ಟಿತ್ತು. ನೋಡು, ಈಗ್ಲೇನೇ ಅದು ಸರಿಯಾಗಿ ಉರಿತಾ ಇರೋದು"

"ಇಲ್ಲಕ್ಕ, ನೀನು ಸುಳ್ಳು ಹೇಳ್ತೀ"

"ನಿಜ ಹೇಳಿದ್ರೆ ನೀನು ನಂಬೋಲ್ಲಮ್ಮ....ಹೋಗ್ಲಿ, ಅಮ್ಮ ಏನ್ಮಾಡ್ತಿದ್ದಾರೆ ?"

"ಅಡಿಗೆ...."

"ಇದೇನೇ, ಒಂದು ಗಂಟೆ ಆಗ್ತಾ ಬಂತು ಇನ್ನೂ ಅಡಿಗೆ ಆಗಲಿಲ್ಲವೇ ?"

"ಇಲ್ಲಕ್ಕ. ಇಷ್ಟೊತ್ತಿನವರೆಗೂ ಅಮ್ಮ ಮೆಣಸಿನಪುಡಿ ಕುಟ್ತಿದ್ದರು. ನಮಗೆಲ್ಲಾ ಬೆಳಿಗ್ಗೇನೆ ತಿಂಡಿ ಮಾಡಿಕೊಟ್ಟಿದ್ದರು. ಹಸಿವೂ ಇಲ್ಲ. ಈಗತಾನೆ ಅಡಿಗೆ ಒಲೆ ಹಚ್ಚಿದ್ದಾರೆ"

"ಹೋಗ್ಲಿ, ನಮ್ಮನೇಲೇ ಊಟ ಮಾಡೇ ಸೀತು ಇವತ್ತು. ಅಡಿಗೆ ಆಗಿದೆ."

"ಇಲ್ಲ ಅಕ್ಕ, ಹಸಿವೇ ಇಲ್ಲ !"

"ನಿಮ್ಮ ತಂದೆ ಬಂದ್ರೇನೇ ?"

"ಇಲ್ಲಕ್ಕ ಇನ್ನೂ. ಸಾಯಂಕಾಲ ಬರಬಹುದು."

ವೆಂಕಮ್ಮ ಎರಡು ಕ್ಷಣ ಯೋಚಿಸಿ—

"ಸೀತೂ 'ಅವರ್ನ' ಊಟಕ್ಕೆ ಏಳು ಅಂತ ಹೇಳೆ"

"ಉಹ್ಞೂ....ನಾನು ಕರೆಯೋಲ್ಲಮ್ಮಾ!... ನೀನೇ ಕರಿ"

—ಎಂದು ರಾಗವಾಗಿ ಹೇಳಿದಳು ಸೀತೆ.

"ಇವತ್ತೊಂದು ದಿನ ಹಾಗಂತ ಕರೆದು ಬಿಡಮ್ಮ ನೀ ತುಂಬ ಜಾಣೆ."

ವೆಂಕಮ್ಮ ಮೃದುವಾಗಿ ಅಂಗಲಾಚಿದಳು ಸೀತು ಮರು ಮಾತನಾಡದೆ ಹೊರ ಅಂಗಳಕ್ಕೆ ಬಂದು, ನಾಗಪ್ಪನವರಕಡೆಗೆ ನೋಡಿ

"ಊಟಕ್ಕೆ ಬರಬೇಕಂತೆ"

ಎಂದಳು ನಾಗಪ್ಪನವರು ಸೀತುವನ್ನು ದುರುಗುಟ್ಟಿಕೊಂಡು ನೋಡಿದರು. ನುಂಗುವಂತಹ ಆ ನೋಟವನ್ನು ಸಹಿಸಲಾರದೆ, ಹೆದರಿದ ಸೀತು ಒಳಗೆ ಹೋಗದೆ, ಹಾಗೆಯೇ ಹೊರಕ್ಕೋಡಿದಳು.

ನಾಗಪ್ಪನವರು ಕೈಕಾಲು ತೊಳೆದು ಊಟಕ್ಕೆ ಕುಳಿತರು. ಮೌನವಾಗಿ ಸಾಗಿತು ಊಟ ಅನಂತರ ವೆಂಕಮ್ಮನೂ ಊಟ ಮಾಡಿದಳು. ಕೈತೊಳೆದುಬಂದು ನಾಗಪ್ಪನವರು—

"ಪಾತ್ರೆಗಳನ್ನೆಲ್ಲಾ ಬೇಗ ತೊಳೆದಿಡು"

—ಎಂದು ಹೆಂಡತಿಗೆ ಆಜ್ಞಾಪಿಸಿದರು.

ಮುಂದೇನಾಗುವುದೆಂಬುದನ್ನು ವೆಂಕಮ್ಮ ಊಹಿಸತೊಡಗಿದಳು.

ಸ್ವಲ್ಪ ಹೊತ್ತಿನ ನಂತರ—ಇನ್ನೊಂದು ಆಜ್ಞೆ!

"ಬಟ್ಟೆಬರೆ ಗಂಟು ಕಟ್ಟು"

ತನ್ನ ಊಹೆ ಸರಿ ಎಂದುಕೊಂಡಳು ವೆಂಕಮ್ಮ.

'ಏಕೆ' ಎಂದು ಪ್ರಶ್ನಿಸಲು ಆಕೆಗೆ ಬಾಯಿ ಬರಲಿಲ್ಲ.

ಮೌನವಾಗಿ ಗಂಡನ ಆಜ್ಞೆಯನ್ನು ಪರಿಪಾಲಿಸುವುದರಲ್ಲಿ ಉದ್ಯುಕ್ತಳಾದಳು.

"ಆಯ್ತೇ ಎಲ್ಲಾ?"

—ಗುಡುಗಿತು ನಾಗಪ್ಪನವರ ವಾಣಿ.

"ಹ್ಞೂ" ಎಂಬಂತೆ ತಲೆಯಲುಗಿಸಿದಳು ವೆಂಕಮ್ಮ

"ಸರಿ, ನಡಿ ಎಲ್ಲಾ ತೊಗೊಂಡು"

ವೆಂಕಮ್ಮ ನಿಂತೇ ಇದ್ದಳು.

"ನಿನಗೇ ಹೇಳಿದ್ದು ನಡಿಯೇ"

"ಎಲ್ಲಿಗೆ ?"

ಕೇಳಲೋ ಬೇಡವೋ ಎಂದು ಯೋಚಿಸಿ ಯೋಚಿಸಿ ಕೊನೆಗೆ ಒಮ್ಮೆ ಕೇಳಿಯೇ ಬಿಟ್ಟಳು.

"ಎಲ್ಲಿಗೋ-ಅದೆಲ್ಲಾ ನಿನಗ್ಯಾಕೆ ? ನಾ ಹೇಳಿದಷ್ಟು ಮಾಡು."

ಅವಳು ನಿಂತ ಜಾಗದಿಂದ ಕಾಲು ಕೀಳಲಿಲ್ಲ. ಅವರೂ ಎರಡು ನಿಮಿಷ ಸುಮ್ಮನೆ ನಿಂತಿದ್ದರು.

"ಹ್ಣು ಹೊತ್ತಾಯ್ತು, ನಡಿ ಬೇಗ"

ವೆಂಕಮ್ಮನ ಕಣ್ಣು ತುಂಬಿ, ಮೂಗಿನ ಪಕ್ಕದಿಂದ ಕಣ್ಣೀರ ಧಾರೆ ಹರಿಯಿತು.

"ಸಾಕು, ನಿನ್ನ ಗೋಳು. ಶನಿ ಬಂದಹಾಗೆ ಬಂದೆ ನನ್ನಪಾಲಿಗೆ"

"ನಾನೇನು ಮಾಡಿದೆ ಅಂದ್ರೆ. ನನ್ನ ತಪ್ಪು ಏನಾದರೂ ಇದ್ದರೆ ಹೇಳಿ. ಅದನ್ನು ತಿದ್ದಿಕೊಂಡು, ನೀವು ಹೇಳಿದ ಹಾಗೆ ಕೇಳಿಕೊಂಡು ನಿಮ್ಮ ಕಾಲಿನ ಕೆಳಗೆ ಬಿದ್ದಿರುತ್ತೇನೆ."

"ತಪ್ಪೂ ಇಲ್ಲ, ಒಪ್ಪೂ ಇಲ್ಲ. ಮುಖ್ಯ ನಿನ್ನ ಕೈಹಿಡಿದದ್ದು ನನ್ನ ತಪ್ಪು. ಬಿಟ್ಟಿ ಗಂಡು ಸಿಕ್ಕಿದಾಂತ ನಿಮ್ಮಪ್ಪ ವರದಕ್ಷಿಣೆ ಇಲ್ಲದೆ ನನ್ನ ಕುತ್ತಿಗೆಗೆ ಗಂಟ ಹಾಕಿದ ನಿನ್ನ. ನಾನೂ ಆತುರಪಟ್ಟು ಮೋಸ ಹೋದೆ."

"ಹೀಗೆ ಮಾಡಿದರೆ ನನ್ನ ಗತಿ ಏನೂ ಅಂದ್ರೆ ? ನನಗೆ ಯಾರು ದಿಕ್ಕು?"

"ನಿನಗೆ ನಿಮ್ಮಪ್ಪನೇ ದಿಕ್ಕು. ಅಮ್ಮ – ಮಹಾತಾಯಿ! ನೀನು ಯಾವಾಗ ನನ್ನ ಕೈಹಿಡಿದೆಯೋ ಆಗಲೇ ಬಂತು ನನ್ನ ಸಂಪಾದನೇಗೇ ಸಂಚ್ಕಾರ. ಅದಕ್ಕೇ ನಿನಗೀವಾಗ ಬಹಿಷ್ಕಾರ ! ನಿನ್ನ ಕೈಹಿಡಿದ ಪುಣ್ಯ ಇಷ್ಟಕ್ಕೇ ಸಾಕು! ಸದ್ಯ, ಇನ್ನೂ ಏನೇನಾಗಬೇಕೂಂತ ಕಾದಿದೆಯೋ"

"ನಿಮ್ಮ ದಮ್ಮಯ್ಯ"

ವೆಂಕಮ್ಮ ನಾಗಪ್ಪನವರ ಕಾಲುಗಳನ್ನು ಬಿಗಿಯಾಗಿ ಹಿಡಿದು ಕೊಂಡಳು. ಅದಕ್ಕೆ ಕಣ್ಣೀರಿನ ಅಭಿಷೇಕವಾಯಿತು.

ಕಲ್ಲುಹೃದಯ ಕರಗಲಿಲ್ಲ.

"ಬಿಡೇ ಕಾಲು.... ಅನಿಷ್ಟ"

ಕಾಲು ಝಾಡಿಸಿ ಒದೆದಾಗ ವೆಂಕಮ್ಮನ ಎದೆಗೆ ಪೆಟ್ಟು ತಗುಲಿ, ಚಿಮ್ಮಿದ ಕವಡೆ ಕೆಳಗೆ ಬೀಳುವಂತೆ ತುಸು ದೂರದಲ್ಲಿ ಹೊರಳಿ ಬಿದ್ದಳು. ಆ ರಭಸಕ್ಕೆ ಕೈಬಳೆಗಳು ಒಡೆದು ಪುಡಿಯಾದವು. ಹಣೆಯ ತುದಿಯಿಂದ ರಕ್ತ ಚಿಮ್ಮಿತು

ನಾಗಪ್ಪನವರು ಅದೊಂದನ್ನೂ ಗಮನಿಸದೆ, ಅರಳನ್ನು ಹುರಿಯುವ ತೆರದಲ್ಲಿ ಚಟಪಟಗುಟ್ಟಿದರು—

"ಬಿನ್ನಾಣಗಿತ್ತಿ! ದಮ್ಮಯ್ಯ ಅನ್ನುವುದು. ಕಾಲು ಹಿಡಿದು ಕೊಳ್ಳುವುದು-ಇವೆಲ್ಲಾ ನಿಮ್ಮಪ್ಪ ಹೇಳಿಕೊಟ್ಟನೋ? ಆ ಚಾಣಾಕ್ಷನ ಚಮತ್ಕಾರ ನನ್ನ ಹತ್ತಿರ ಏನೂ ನಡೆಯೋದಿಲ್ಲ. ನೀನಲ್ಲದಿದ್ದರೆ ಇನ್ನೊಬ್ಬಳನ್ನು ಕಟ್ಟಿಕೊಳ್ಳುವ ಧೈರ್ಯ ನನಗಿದೆ ಕೈತುಂಬ ವರ ದಕ್ಷಿಣೆ ಕೊಟ್ಟು, ಕಾಲು ತೊಳೆದು, ಕನ್ಯಾದಾನ ಮಾಡುವವರಿದ್ದಾರೆ. ಬುದ್ಧಿಯಿಲ್ಲದೆ ನಿನ್ನನ್ನು ಕಟ್ಟಿಕೊಂಡೆ ಅಷ್ಟೆ....ಹ್ಞ, ಏಳು"

ವೆಂಕಮ್ಮ ಕಷ್ಟದಿಂದ ಎದ್ದಳು. ಇನ್ನು ಇಲ್ಲಿರುವುದು ಸಾಧ್ಯವಿಲ್ಲವೆಂದು ಆಕೆಗೆ ಮನದಟ್ಟಾಯಿತು. ಮೆಲ್ಲನೆ ಬಚ್ಚಲು ಮನೆಗೆ ಹೋಗಿ, ರಕ್ತ ಬರುತ್ತಿದ್ದ ಕಡೆಗೆ ಸ್ವಲ್ಪ ನೀರು ಚಿಮುಕಿಸಿಕೊಂಡಳು. ಸ್ವಲ್ಪ ಮಟ್ಟಿಗೆ ಹಾಯೆನಿಸಿತು ಅನಂತರ ಹೊರಗೆ ಬಂದು ಕುಂಕುಮವನ್ನು ಗಾಯಕ್ಕೆ ಒತ್ತಿದಳು. ರಕ್ತ ನಿಂತಿತು. ಗಂಡನ ಆರ್ಭಟಕ್ಕೆ ಕಾಯದೆ ಬಟ್ಟೆಯ ಗಂಟನ್ನು ಕೈಗೆತ್ತಿಕೊಂಡಳು.

ನಾಗಪ್ಪನವರೂ ಕೋಟು ತಗುಲಿಸಿಕೊಂಡು ಹೊರಹೊರಟರು. ವೆಂಕಮ್ಮ ಅವರನ್ನು ಹಿಂಬಾಲಿಸಿದಳು. ಬಾಗಿಲಿಗೆ ಬೀಗ ಹಾಕಿ ಇಬ್ಬರೂ ಆ ಉರಿಬಿಸಿಲಿನಲ್ಲಿಯೇ ಮೂರು ಮೈಲಿಯ ದೂರದ ರೈಲ್ವೆ ಸ್ಟೇಷನ್ನಿಗೆ ನಡೆದರು.

ಸ್ಥೂಲಕಾಯದ ವೆಂಕಮ್ಮನಿಗೆ ಎಂದೂ ಅಷ್ಟು ದೂರ ನಡೆದ ಅಭ್ಯಾಸವಿಲ್ಲ. ಜೊತೆಗೆ ಹಣೆಯ ಗಾಯದ ಅಸಾಧ್ಯ ಉರಿ. ಹಾಗೆಯೇ ಹೃದಯಕ್ಕೆ ಉಂಟಾದ ಆಘಾತದ ನೋವು, ಎದೆಗೆ ಬಿದ್ದ ಗಂಡನ ಕಾಲಿನ ಒದೆ ಎಲ್ಲ ಒಟ್ಟುಗೂಡಿ ಅವಳನ್ನು ಹಣ್ಣು ಮಾಡಿದ್ದುವು.

ಇಬ್ಬರೂ ಶಾನುಭೋಗರ ಮನೆಯ ಮುಂದೆ ಹಾದು ಹೋದಾಗ, ಜಗುಲಿಯ ಮೇಲೆ ನಿಂತಿದ್ದ ಸೀತು ಅವರನ್ನು ನೋಡಿ

ದಳು. ಕೂಡಲೇ ಒಳಗೆ ಓಡಿ ತಾಯಿಗೆ ತಿಳಿಸಿ, ಅವರನ್ನೂ ಜೊತೆಯಲ್ಲಿ ಕರೆದುಕೊಂಡು ಬಂದಳು. ಅಷ್ಟರಲ್ಲಾಗಲೇ ದಂಪತಿಗಳು ಸ್ವಲ್ಪ ದೂರ ಹೊರಟು ಹೋಗಿದ್ದರು. ಆದರೂ ಅವರನ್ನೇ ನೋಡುತ್ತಾ ಲಕ್ಷ್ಮಮ್ಮನವರಿಗೆ ತುಂಬ ದುಃಖವಾಯಿತು.

ಊಟದ ಹೊತ್ತಿನಲ್ಲಿ ವೆಂಕಮ್ಮ ಅಳುತ್ತಿದ್ದುದನ್ನು ನೋಡಿದ ಸೀತು, ತಾಯಿಯ ಬಳಿ ಆ ಸಂಗತಿಯನ್ನು ಹೇಳಿದ್ದಳು. ಮತ್ತೆ ಈಗ ವೆಂಕಮ್ಮನ ಹಣೆಯ ಮೇಲಿನ ಪೆಟ್ಟನ್ನೂ ಗಮನಿಸಿದ್ದ ಆಕೆ, ಅದನ್ನು ಲಕ್ಷ್ಮಮ್ಮನವರಿಗೆ ವರ್ಣಿಸಿದಾಗ, ಆ ತಾಯಿಗೆ ಕರುಳೇ ಕಿತ್ತು ಬರುವಂತಾಯಿತು. ದಂಪತಿಗಳಿಬ್ಬರೂ ಕಣ್ಣು ಮರೆಯಾಗುವವರೆಗೂ ಆಕೆ ಬಾಗಿಲ ಬಳಿಯೇ ನಿಂತು ನೋಡುತ್ತಿದ್ದರು.

................

ವೆಂಕಮ್ಮ ತೂಗಾಡುತ್ತಾ, ಬಟ್ಟೆಯ ಗಂಟನ್ನು ಹೊತ್ತು ಮೆಲ್ಲ ಮೆಲ್ಲನೆ ನಡೆದಿದ್ದಳು. ನಾಗಪ್ಪನವರ ಬಿರುನಡಿಗೆಗೆ ಸಮನಾಗಿ ಹೆಜ್ಜೆ ಹಾಕುವುದು ಅವಳಿಂದ ಸಾಧ್ಯವಿರಲಿಲ್ಲ. ಭಾರವಾದ ಮೈ—ಭಾರವಾದ ಮನಸ್ಸು, ಧಾರೆ ಧಾರೆಯಾಗಿ ಹರಿಯುವ ಕಣ್ಣೀರು; ವೇದನಾತಪ್ತ ಹೃದಯವನ್ನು ಹೊತ್ತುಕೊಂಡು ಹೊರಬಿದ್ದ ವೆಂಕಮ್ಮನಿಗೆ ಇಷ್ಟರಲ್ಲಾಗಲೇ 'ಇನ್ನು ಬದುಕಿರಬಾರದು' ಎನ್ನಿಸಿಬಿಟ್ಟಿತ್ತು.

ಅಂತೂ ರೈಲು ನಿಲ್ದಾಣಕ್ಕೆ ಬಂದುದಾಯಿತು. ವೆಂಕಮ್ಮ ಗಂಟು ಕೆಳಗೆಹಾಕಿ, ಕಾಲು ಕುಸಿದು ಕುಳಿತಳು. ನಾಗಪ್ಪನವರು ಟಿಕೀಟು ಕೊಂಡು ವೆಂಕಮ್ಮನಿಗೆ ಸ್ವಲ್ಪ ದೂರದಲ್ಲಿ ನಿಂತರು. ಅವರಿಗೆ ಅವಳ ಮುಖವನ್ನು ನೋಡುವ ಸಹನೆಯೂ ಇರಲಿಲ್ಲ. ಮೊದಲೇ ಕೋಪದಿಂದ ಕೆಂಪಗಾಗಿದ್ದ ಅವರ ಮುಖ ಆ ಉಗ್ರ ಬಿಸಿಲಿನಲ್ಲಿ ನಡೆದುದರ ಫಲವಾಗಿ ಮತ್ತಷ್ಟು ಕೆಂಪೇರಿತ್ತು.

ಹೊತ್ತು ಕಳೆದಂತೆ ಪ್ರಯಾಣಿಕರು ನಿಲ್ದಾಣದಲ್ಲಿ ತುಂಬಿಕೊಂಡರು.

—"ರೈಲ್ ಬರೋ ಟೇಮಾಯ್ತಾ ?"

—"ಟಿಕೀಟು ಕೊಡ್ತಾ ಅವ್ರಾ ?"

ಎಂದು ಅವಸರವಸರವಾಗಿ ಬಂದ ಇಬ್ಬರು ಹಳ್ಳಿಗ ಪ್ರಯಾಣಿ

ಕರು ನಾಗಪ್ಪನವರನ್ನು ಕೇಳಿದಾಗ ಅವರು ಉತ್ತರಿಸಿದ್ದೂ ಕೋಪ ದಲ್ಲೇ !

"ಯಾರಿಗ್ಗೊತ್ತು ?"

—ಖಾರವಾದ ಮಾತನಾಡಿ, ಮುಖ ಓರೆಮಾಡಿ ವೆಂಕಮ್ಮನ ಸುತ್ತಮುತ್ತ ಶತಪಥ ಹಾಕಿದರು

ಸ್ವಲ್ಪ ಹೊತ್ತಿನ ನಂತರ ರೈಲು ಬಂದಿತು. ಇಬ್ಬರೂ ಹತ್ತಿ, ಕುಳಿತುಕೊಳ್ಳಲು ಸ್ಥಳಕ್ಕಾಗಿ ಸುತ್ತಮುತ್ತಲೂ ನೋಡಿದರು. ಮೂವರು ಹೆಂಗಸರು ಕುಳಿತಿದ್ದೆಡೆ ಸ್ವಲ್ಪ ಜಾಗವಿದ್ದುದರಿಂದ ವೆಂಕಮ್ಮ ಅಲ್ಲಿಗೆ ನಡೆದಳು. ಅವರೂ ಬದಿಗೆ ಸರಿದು ಕುಳಿತುಕೊಳ್ಳಲೆಡೆಯಿತ್ತರು. ಆದರೆ ವೆಂಕಮ್ಮನಿಗೆ ಕುಳಿತುಕೊಳ್ಳಲು ಏನೋ ಅನುಮಾನ— ಸಂಕೋಚ.

ತನ್ನ ಗಂಡ ನಿಂತಿರುವಾಗ, ತಾನು ಕುಳಿತುಕೊಳ್ಳುವುದು ಸರಿಯೇ—ಎಂಬ ಪ್ರಶ್ನೆ ಸುಳಿಯಿತು.

ಒಮ್ಮೆ ನಾಗಪ್ಪನವರಕಡೆಗೆ ನೋಟ ಬೀರಿ, ತನ್ನ ಬಳಿಗೆ ಬರುವಂತೆ ಕಣ್ಸನ್ನೆ ಮಾಡಿದಳು. ಅವರು ಬಂದರೆ, ಅಲ್ಲಿ ಅವರನ್ನು ಕೂಡಿಸಿ, ತಾನು ನಿಂತುಕೊಳ್ಳಬೇಕೆಂದು ನಿಶ್ಚಯಿಸಿದಳು. ಆದರೆ ಹೆಂಗಸರ ಪಕ್ಕದಲ್ಲಿ ಒಬ್ಬ ಗಂಡಸು ಕುಳಿತುಕೊಳ್ಳುವುದು ಸ್ವಲ್ಪ ಸಂಕೋಚದ ಪ್ರಸಂಗವೇ ಹಾಗೂ ಬಳಕೆಯಲ್ಲಿಲ್ಲದ ನಡವಳಿಕೆಯೇ ಎಂಬುದು ಆಕೆಗೆ ಕೂಡಲೇ ಹೊಳೆಯಲಿಲ್ಲ !

ನಾಗಪ್ಪನವರು ಹಾಗೆಯೇ ನಿಂತಿದ್ದರು. ವೆಂಕಮ್ಮ ಮತ್ತೊಮ್ಮೆ ಕಣ್ಸನ್ನೆ ಮಾಡಿದಾಗ, 'ಅಲ್ಲೇ ಕೂತುಕೋ' ಎನ್ನುವಂತೆ ಕೈಯಾಡಿಸಿ ಸೂಚಿಸಿದರು. ಆಕೆ ಮೆಲ್ಲನೆ ಆ ಹೆಂಗಸರ ಪಕ್ಕದಲ್ಲಿ ಕುಳಿತಳು.

ರೈಲು ವೇಗವಾಗಿ ಹೋಗುತ್ತಿದ್ದಿತು. ಅದಕ್ಕಿಂತಲೂ ವೇಗವಾಗಿ ನಾಗಪ್ಪನವರ ಮನಸ್ಸು ಓಡುತ್ತಿದ್ದಿತು. ನಿರ್ದಿಷ್ಟವಾದ ಗುರಿಯಿಟ್ಟುಕೊಂಡು ರೈಲು ಹೊರಟಿತ್ತೆಂಬುದು ನಾಗಪ್ಪನವರಿಗೆ ತಿಳಿದಿತ್ತು. ಆದರೆ ವೇಗವಾಗಿ ಹೊರಟಿದ್ದ ತಮ್ಮ ಮನಸ್ಸು ಯಾವ ಗುರಿಯತ್ತ ಧಾವಿಸುತ್ತಿದೆ ಎಂಬುದನ್ನು ಅವರು ಯೋಚಿಸಿರಲಿಲ್ಲ. ಹುಚ್ಚು ಕುದುರೆಯಂತೆ ವಿಷಯದಿಂದ ವಿಷಯಕ್ಕೆ ಹಾರಿ ವೃಥಾ ಹೆಚ್ಚು ಶ್ರಮಪಡು

ತ್ತಿರುವುದಾಗಿದೆಯೋ ಹೊರತು ಬೇರಾವ ಪ್ರಯೋಜನವೂ ಇಲ್ಲವೆಂದು ಅವರಿಗೆ ತಿಳಿಯಲಿಲ್ಲ.

ಕೆಲವೊಮ್ಮೆ ಎದುರಿಗೆ ಕುಳಿತಿದ್ದ ವೆಂಕಮ್ಮನ ಕಡೆಗೆ ದೃಷ್ಟಿ ಹರಿಸಿದಾಗ "ಇನ್ನು ಅವಳಿಗೂ ತನಗೂ ಯಾವ ಸಂಬಂಧವಿದೆ?" ಎಂದು ತಮ್ಮನ್ನು ತಾವೇ ಕೇಳಿಕೊಂಡರು ಹಾಗೆಯೇ ವಿಚಾರ ಸರಣಿ ಒಂದಕ್ಕೊಂದು ಸಂಬಂಧವಿಲ್ಲದಂತೆ ಬೆಳೆಯಿತು :

"ಒಂದು ಕಾಲದಲ್ಲಿ ಆಕೆ ಹೆಂಡತಿ—ನಾನು ಗಂಡ"

"ಈಗ ?"

"ತನಗೆ ಬೇಡವಾದ ಹೆಂಡತಿ !"

"ಏಕೆ ಬೇಡವಾದಳು ?"

"ಅವಳು ತನ್ನ ಪಾಲಿಗೆ ಮಾರಿಯಾಗಿ ಬಂದಳು ತನ್ನ ಸರ್ವ ನಾಶಕ್ಕಾಗಿಯೋ ಎಂಬಂತೆ ಕೊರಳಿಗೆ ಜೋತುಬಿದ್ದಳು."

"ಅವಳಿಂದ ತನಗೇನಾಯಿತು ?"

"ಆಗಬಾರದ್ದೆಲ್ಲ ಆಯಿತು ! ಯಾವ ತಂಟೆಯೂ ಇಲ್ಲದೆ ನಡೆದುಕೊಂಡು ಹೋಗುತ್ತಿದ್ದ ತನ್ನ ಉಪಾಧ್ಯಾಯ ನೌಕರಿಗೇ ಕೊಡಲಿ ಪೆಟ್ಟು ಬಿದ್ದಿದೆ. ತಿನ್ನುವ ಅನ್ನಕ್ಕೇ ಕಲ್ಲು ಬಿದ್ದಮೇಲೆ ಇನ್ನೇನಾಗಬೇಕು?"

"ಇದೆಲ್ಲಾ ಅವಳಿಂದ ಆಯಿತೇ ?"

"ಹೌದು ಇನ್ನಾರಿಂದ ? ಅವಳನ್ನು ಕೈ ಹಿಡಿಯುವ ಮುನ್ನ ತಾನು ಸುಖವಾಗಿರಲಿಲ್ಲವೇ ? ತನ್ನ ನೌಕರಿಗೆ ಎಂದಾದರೂ ಇಂತಹ ಆಕಸ್ಮಿಕ ವಿಪತ್ತು ಒದಗಿದ್ದಿತೇ ?....ಅವಳು ತನ್ನ ಮನೆಗೆ ಬಂದ ಮೇಲಲ್ಲವೇ ನೌಕರಿ ಹೋದದ್ದು—ಅಶಾಂತಿ ಏರ್ಪಟ್ಟುದು ?"

"ಅಶಾಂತಿಗೆ ಅವಳು ಹೇಗೆ ಕಾರಣಳಾದಳು ?"

"ಅವಳು ಕಾರಣಳೋ-ಅಥವಾ ಅವಳ ತಂದೆ ಕಾರಣರೋ. ಅಂತೂ ಆಕೆಯಿಂದಲೇ ಏರ್ಪಟ್ಟುದು ಈ ಅಶಾಂತಿ. ಸಾವಿರಗಟ್ಟಲೆ ವರದಕ್ಷಿಣೆ ಸುರಿದು ಕಾಲು ಕಟ್ಟಿ ಮಾಂಗಲ್ಯ ಕಟ್ಟಿಸುವ ಕನ್ಯಾ ಪಿತೃಗಳು ಲೆಕ್ಕವಿಲ್ಲದಷ್ಟು ಮಂದಿ ಸಿಕ್ಕುವಾಗ, ತನಗೆ ಮಂಕುಬೂದಿ ಎರಚಿ, ಕಿಲುಬು ಕಾಸನ್ನೂ ವರದಕ್ಷಿಣೆಯಾಗಿ ಕೊಡದೆ ತನ್ನ ಮಗಳ

ಕೊರಳಿಗೆ ಮಾಂಗಲ್ಯ ಕಟ್ಟಿಸಿದ ಆಕೆಯ ಭಂಡ ತಂದೆ ಹಾಗೂ ಬೆಳಕನ್ನೇ ಆರಿಸಲೆಂದು ಬಾಳಿಗೆ ಬಂದ ಆ ಮಗಳು—ಇವರಿಬ್ಬರಲ್ಲಿ ಯಾರು ಕಾರಣರಾದರೇನು—ಒಂದೇ ಪೀಳಿಗೆಯಲ್ಲವೇ ?"

"ಹಾಗಾದರೆ ಮುಂದೇನು ?"

"ಅವಳಿಗೆ ತೌರುಮನೆಯೇ ಗತಿ. ತನಗೆ...."

"ತನಗೆ....ತನಗೆ "

ಗುರಿಗಾಣದ ಹರಿಣಿಯಂತೆ ಹರಿದಾಡಿತು ಮನಸ್ಸು

ಕ್ಷಣ ಕಾಲದಲ್ಲಿ—ಎದುರಿಗೆ ಕುಳಿತಿದ್ದ ವೆಂಕಮ್ಮ ಮತ್ತು ಅವಳ ಬಟ್ಟೆಯ ಗಂಟಿನ ಚಿತ್ರ ಕಣ್ಮುಂದೆ ಕಟ್ಟಿತು

ಮತ್ತೆ—ಇನ್ಸ್‌ಪೆಕ್ಟರ್ ಸಾಹೇಬರ ಆರ್ಡರ್....

ಅದರಲ್ಲಿನ ಎಂದೆಂದೂ ಮರೆಯಲಾಗದ ಪದಸಮೂಹ—

"ಅನಿರೀಕ್ಷಿತವಾಗಿ ಈ ದಿನ ಸಿಂಗನಹಳ್ಳಿಯ ಶಾಲೆಗೆ ಭೇಟಿ ಕೊಟ್ಟಾಗ, ಶಾಲೆಯ ಬಾಗಿಲು ತೆರೆಯದೆ ಉಪಾಧ್ಯಾಯರು ಗೈರು ಹಾಜರಾಗಿದ್ದರು ರಜಾ ಅರ್ಜಿ ಬರೆಯದೆ ಅಕ್ರಮವಾಗಿ ಶಾಲೆಯ ಬಾಗಿಲು ಮುಚ್ಚಿದ್ದರಿಂದ ಉಪಾಧ್ಯಾಯರ ನಡವಳಿಕೆಯ ಬಗ್ಗೆ ತುಂಬ ಅತೃಪ್ತಿ ಕಂಡುಬಂದಿದೆಯಾದ್ದರಿಂದ, ಸದರೀ ಸ್ಥಳದ ಹೆಂಗಾಮಿ ಉಪಾಧ್ಯಾಯರಾದ ನಾಗಪ್ಪನವರನ್ನು ಇದೇ ತಾರೀಖಿನಿಂದ ಮೂರು ತಿಂಗಳ ಕಾಲ ಸಸ್ಪೆಂಡ್ ಮಾಡಲಾಗಿದೆ—ಶಾಲೆಗಳ ಇನ್ಸ್‌ಪೆಕ್ಟರ್"

—ಈ ಆಜ್ಞಾಪತ್ರದ ನೆನಪಾದೊಡನೆ ನಾಗಪ್ಪನವರ ಹಣೆಯ ಮೇಲೆ ಬೆವರು ಹನಿಗಳು ಮೂಡಿದವು

ಅದೇ ಸಮಯದಲ್ಲಿ ನೆನಪಿಗೆ ಬಂದ ವ್ಯಕ್ತಿ ಅನಂತಯ್ಯ

ಹಾಗೆಯೇ ಮದುವೆಯ ಮರುದಿನದ ಸಂಜೆ ತಿರುಗಾಡಲು ಹೊರಟು, ನಾರಾಯಣನೊಡನೆ ಆಡಿದ ಮಾತು ಕತೆ.

ನಾಗಪ್ಪನವರು ಕಣ್ಣು ಚಿಕ್ಕದು ಮಾಡಿ ಹಲ್ಲು ಕಡಿದರು. ಸಿಂತುಸಿಂತು ಕಾಲುಗಳೂ ಸೋಲುತ್ತಿದ್ದವು.

ಆದರೆ-ಎದುರಿಗೆ ಕುಳಿತಿದ್ದ ವೆಂಕಮ್ಮ ನೆಮ್ಮದಿಯಾಗಿದ್ದಳೇ ?

ಎಂತೆಂತಹ ಕನಸುಗಳು, ಗಂಡನೊಡನೆ ಹೇಗಿರಬೇಕೆಂದು

ತಾನು ಯೋಚಿಸಿದ್ದಳು? ಸೀತೆ ಸಾವಿತ್ರಿಯರ ಕಥೆ, ಶುಕ್ರವಾರದ ಹಾಡು, ತುಳಸೀಪೂಜೆ, ಮುಲತಾಯಿಯ ಬುದ್ಧಿವಾದದ ಹಾರೈಕೆ—ಇವೆಲ್ಲ ಈಗೇನಾದವು? ಅವುಗಳ ಫಲ ಇದೇನೇನು? ಇನ್ನು ತನ್ನ ಗತಿ....

"ರಮಣನಿಲ್ಲದ ನಾರಿ ಪರರ ಕಣ್ಣಿಗೆ ಮಾರಿ! ಹಡೆದವರ ಕೊರಳ ಕೊಯ್ವಂಥ ಚೂರಿ"

ಹರಿಕತೆ ದಾಸರು ಆಗಾಗ ಹಾಡುತ್ತಿದ್ದ ಆ ಹಾಡೇ ತನ್ನ ಗತಿಯೇ? ಆದರೆ ತಾನು ರಮಣನಿದ್ದೂ ಇಲ್ಲದ ನಾರಿ! ಕೈಹಿಡಿದವರ ಕಣ್ಣಿಗೆ ಮಾರಿ.........

ವೆಂಕಮ್ಮನ ಹೃದಯ ದುಃಖದಿಂದ ತುಂಬಿದ್ದಿತು. ಇನ್ನು ಕಣ್ಣೀರು ಹರಿಯುವುದೊಂದೇ ಉಳಿದಿತ್ತು. ಆದರೆ ಪ್ರಯಾಣಿಕರಿಂದ ತುಂಬಿದ ಆ ರೈಲಿನಲ್ಲಿ ತಾನು ಅಳುವುದನ್ನು ಪ್ರಾರಂಭಿಸುವುದು ಸರಿಯೆ?

ಯಾರ ಸುಖ-ದುಃಖವನ್ನೂ ಲೆಕ್ಕಿಸದೆ, ತನ್ನ ನೇರಕ್ಕೆ ತಾನು ಹೊರಟಿದ್ದ ರೈಲು, ನಿಲ್ದಾಣ ಬಂದಾಗ ನಿಂತು ಮತ್ತೆ ಹೊರಡುತ್ತಿತ್ತು. ಹಾಗೊಮ್ಮೆ ಅದು ನಿಂತ ನಿಲ್ದಾಣದಲ್ಲಿ ನಾಗಪ್ಪನವರೂ ವೆಂಕಮ್ಮನೂ ಕೆಳಗಿಳಿದರು.

ಸೂರ್ಯ ಮುಳುಗುವ ಹೊತ್ತಾಗಿದ್ದಿತು ಪಡುವಣ ದಿಗಂತದಲ್ಲಿ ತಿಳಿಹಳದಿಯ ಬಣ್ಣ ಹರಡಿ, ನಸುಗೆಂಪಿನ ಸಂಧ್ಯಾರಾಣಿ ರವಿರಾಜನಿಗೆ ಸ್ವಾಗತದ ಆರತಿ ಎತ್ತಲು ಸನ್ನಾಹ ಮಾಡಿಕೊಳ್ಳುತ್ತಿದ್ದಳು. ಆ ಸಡಗರದ ಸಮಾರಂಭದಲ್ಲಿ ತಾವೂ ಭಾಗಿಗಳಾಗಬೇಕೆಂದು ಬಯಸಿದ ಬಿಳಿಯ ಮುಗಿಲು ಮಾಲೆಗಳು ಬಾನಂಚಿನ ಅರಮನೆಗೆ ಬೇಗ ಬೇಗನೆ ಹೊರಟಿದ್ದವು ಆಹ್ಲಾದಕರವಾಗಿ ಬೀಸುತ್ತಿದ್ದ ಮಂದ ಮಾರುತ ಮನಸ್ಸಿನಮೇಲೆ ನಿರ್ಮಲಾಂಜನ ಹಚ್ಚಲು ಪ್ರಯತ್ನಿಸುತ್ತಿದ್ದ. ಹೀಗೆ ಸುಂದರ ಸನ್ನಿವೇಶಗಳನ್ನು ಸೃಜಿಸಿ ಸಂಧ್ಯಾರಾಣಿ ರಸಿಕತನದಿಂದ ರಾಜ್ಯಭಾರವನ್ನು ಹೊರಲು ಸಿದ್ಧಳಾಗುತ್ತಿದ್ದಳು.

ಆದರೆ ಆ ಸೌಮ್ಯ ಸುಂದರಮೂರ್ತಿಯ ಸೊಬಗನ್ನು ಸವಿಯಲು ನಾಗಪ್ಪನವರಿಗೆ ಮಲ್ಲಿಗೆಯ ಮನಸ್ಸಿದೆಯೇ? ಹೂವಿನ ಹೃದಯವಿದೆಯೇ?

ವೆಂಕಮ್ಮನಿಗೇನೋ ಅಂತಹ ಸನ್ನಿವೇಶಗಳನ್ನು ಕಂಡರೆ ತುಂಬ ಆಸೆ. ಹಳ್ಳಿಯಲ್ಲಿ ಹುಟ್ಟಿ ಬೆಳೆದು ನಿಸರ್ಗದ ಪ್ರತಿಕೃತಿಯೆಂಬಂತೆ ಪ್ರಕೃತಿಯೊಡನೆ ಜೊತೆಗೂಡಿ ಆಡಿದ್ದ ಹುಡುಗಿ ಆಕೆ. ಮಂದಾರ ಕುಸುಮದಂತಹ ಮನಸ್ಸು; ಕಸ್ತೂರಿಯಂತಹ ಹೃದಯ. ಆದರೆ....

ಬಾಡಿದ ಹೂ, ಕಸಕ್ಕೆ ಬಿದ್ದ ಕಸ್ತೂರಿ ಹೇಗಿರುತ್ತದೆ? ಹಾಗೆಯೇ ಆದಂತಿತ್ತು ವೆಂಕಮ್ಮನ ಸ್ಥಿತಿ.

ಇಬ್ಬರೂ ನಿಲ್ದಾಣದಿಂದ ಹೊರಟು ಅಷ್ಟಗ್ರಾಮದ ಮೂರು ಮೈಲಿಯ ಹಾದಿಯನ್ನು ನಡೆಯತೊಡಗಿದರು. ನಾಗಪ್ಪನವರು ಮುಂದೆ-ಹಿಂದೆ ವೆಂಕಮ್ಮ. ಇಬ್ಬರಿಗೂ ಮಧ್ಯೆ ಒಬ್ಬರಿಗೊಬ್ಬರಿಗೆ ಸಂಬಂಧವಿಲ್ಲವೆಂದು ಸೂಚಿಸುವ ಮೌನದ ತೆರೆ.

ಆಗಲೇ ಹಕ್ಕಿಗಳು ವಿಹಾರವನ್ನು ಮುಗಿಸಿಕೊಂಡು ಸಂತೋಷ ದಿಂದ ಗೂಡಿನೆಡೆಗೆ ಹಾರಿಬರುತ್ತಾ ಸಂಧ್ಯಾಗಾನವನ್ನು ಆರಂಭಿಸಿದ್ದವು. ಅಷ್ಟಗ್ರಾಮದ ಊರ ಮುಂದಿನ ವಯಸ್ಸಾದ ಅಶ್ವತ್ಥ ವೃಕ್ಷವಂತೂ ವಿಹಂಗಮವೃಂದದ ಸಂಗೀತಲೋಕವೇ ಆಗಿತ್ತು. ಆ ಪಕ್ಷಿಸಮೂಹದ ರಾಗಮಾಲಿಕೆಯನ್ನು ಆಲಿಸಲು ವೆಂಕಮ್ಮ, ಸನಿಯದಲ್ಲೇ ಇದ್ದ ತನ್ನ ಮನೆಯ ಜಗುಲಿಯ ಮೇಲೆ ತದೇಕಚಿತ್ತದಲ್ಲಿ ಕುಳಿತಿದ್ದ ದಿನಗಳು ಎಷ್ಟೋ ಇದ್ದುವು ಆದರೆ ಈಗ........?

ನಾಗಪ್ಪನವರೊಡನೆ ಅದೇ ಆಲದಮರದ ಬಳಿಗೆ ಬಂದಾಗ ಆಕೆಯ ತೌರಿನ ನೆನಪುಗಳು ಒಂದೊಂದಾಗಿ ಸುಳಿದವು. ಕೆಲವೊಮ್ಮೆ ಆಕೆ ಜಗುಲಿಯಮೇಲೆ ಕುಳಿತಿದ್ದಾಗ, ಈಗ ತನ್ನಹಾಗೆಯೇ ಸಂಜೆಯ ರೈಲಿಳಿದು ಬಂದವರನ್ನು ಕಂಡಾಗ – 'ಬನ್ನಿ ಬನ್ನಿ ನಮ್ಮೂರಿಗೆ' ಎನ್ನು ತ್ತಿವೆ ಈ ಹಕ್ಕಿಗಳೆಲ್ಲಾ–ಎಂದುಕೊಂಡಿದ್ದಳು. ಅವು ಸ್ವಾಗತಗೀತೆ ಹಾಡುತ್ತಿವೆಯೆಂದು ಅವಳ ಭಾವನೆ. ಹಾಗೆಯೇ ಈಗ ತಾನು ತನ್ನ ತವರೂರಿಗೆ ಬರುತ್ತಿರುವಾಗ ಆ ಪಕ್ಷಿಸಮೂಹದ ಸಂಗೀತ ಏನೆಂದು ಹಾಡುತ್ತಿದೆ?

"ಬನ್ನಿ ಬನ್ನಿ" ಎನ್ನುತ್ತಿವೆಯೋ?

ಇಲ್ಲ........

"ಯಾಕೆ ಬಂದೆ? ಯಾಕೆ ಬಂದೆ?"

–ಎಂದು ಕೀಚುದನಿಯಿಂದ ಕಿಚುಗುಟ್ಟುತ್ತಿವೆ ಎನಿಸಿತು ಆಕೆಗೆ.

ಮುಸುಕು ಕತ್ತಲೆಯಲ್ಲಿ ಇಬ್ಬರೂ ಮನೆ ಸೇರಿದರು. ಆಗಲೇ ಅಂಗಳದಲ್ಲಿ ಬುಡ್ಡಿಯ ದೀಪ ಉರಿಯುತ್ತಿತ್ತು. ಶಾಲೆಗೆ ಹೋಗುವ ಆಕೆಯ ಪುಟ್ಟ ತಮ್ಮಂದಿರು ಓದಿಕೊಳ್ಳುವ ಕುರುಹು ಕಾಣಿಸಲಿಲ್ಲ. ತನ್ನ ಮಲತಾಯಿಯ ಎಳೆಯಮಗು ಬುಡುಬುಡನೆ ಒಳಗೂಹೊರಗೂ ಓಡಾಡುವ ಕುರುಹೂ ಇಲ್ಲ. ಜಗುಲಿಯ ಮೇಲೆ ಕುಳಿತುಕೊಳ್ಳುತ್ತಿದ್ದ ಹೊಲದ ಕೆಲಸದ ಆಳುಗಳೂ ಇಲ್ಲ.

ವೆಂಕಮ್ಮನಿಗೆ ಇದನ್ನೆಲ್ಲಾ ಕಂಡು, ತನಗೆ ಇಲ್ಲಿಯೂ ಸ್ಥಾನವಿಲ್ಲದಂತೆ ಕಾಣುತ್ತಿದೆಯೆಂಬ ಭಾವನೆ ಮೂಡಿತು ನಾಗಪ್ಪನವರು ಜಗುಲಿಯ ಬಳಿಯೇ ನಿಂತರು ವೆಂಕಮ್ಮ ಅವರ ಮುಖವನ್ನೊಮ್ಮೆ ನೋಡಿ ಒಳಗೆ ನಡೆದಳು. ನೇರವಾಗಿ ಅಡಿಗೆಯ ಕೋಣೆಯ ಬಳಿಗೇ ಬಂದು ಇಣುಕಿದಳು.

ಹೌದು, ಅಲ್ಲಿ ತನ್ನ ಚಿಕ್ಕಮ್ಮ ಕುಳಿತಿದ್ದಾರೆ ಉರಿಯುತ್ತಿರುವ ಒಲೆಯ ಕೆಂಪು ಬೆಳಕಿನಲ್ಲಿ ಆಕೆಯ ಮುಖ ಸ್ಪಷ್ಟವಾಗಿ ಕಾಣುತ್ತಿದೆ. ಆ ಮುಖದಲ್ಲಿ ಎಂದಿನಂತೆ ಗೆಲುವಿಲ್ಲ, ಸದಾ ಕಾಣುವ ಮಂದಹಾಸವಿಲ್ಲ ; ಅದು ಚಿಂತಾಮಗ್ನವಾಗಿದೆಯೆಂದು ಕಾಣುತ್ತಿದೆ ಅದರಲ್ಲೇನೂ ಸಂದೇಹವಿಲ್ಲವೆಂದು ವ್ಯಾಕುಲಗೊಂಡ ಕಣ್ಣುಗಳೂ ಕಳಕಳಿಯಿಂದ ಹೇಳುತ್ತಿವೆ. ಇವಕ್ಕೆಲ್ಲಾ ಕಾರಣವಾದರೂ ಏನು ಎಂದುಕೊಂಡಳು ವೆಂಕಮ್ಮ.

ಎರಡು ಕ್ಷಣ ಮೌನವಹಿಸಿದ ಆಕೆಗೆ ಇನ್ನೂ ಹಾಗೆಯೇ ನಿಂತಿರಲು ಮನಸ್ಸಾಗಲಿಲ್ಲ ಚಿಕ್ಕಮ್ಮನ ಚಿಂತಾಪರಿಸ್ಥಿತಿಗೆ ಕಾರಣವನ್ನರಿಯುವ ಆತುರದಲ್ಲಿ—

"ಚಿಕ್ಕಮ್ಮಾ.... ಚಿಕ್ಕಮ್ಮಾ"

ಎಂದು ಕೂಗಿ, ಕುತೂಹಲದ ಕಣ್ಣೋಟವನ್ನು ಒಲೆಯ ಬಳಿಗೆ ಹರಿಸಿದಳು.

ಯಾವುದೋ ಲೋಕದಲ್ಲಿದ್ದವರನ್ನು ದರದರನೆ ಎಳೆದುಕೊಂಡು ಬಂದಂತೆ, ಚಿಕ್ಕಮ್ಮ ತಟ್ಟನೆ ತಿರುಗಿ ನೋಡಿದರು........

....ವೆಂಕಮ್ಮ ನಿಂತಿದ್ದಾಳೆ. ತನ್ನ ಪ್ರೀತಿಯ ಮಗಳು ನಿಂತಿ

ದ್ದಾಳೆ. ಗಂಡನ ಮನೆಗೆ ಹೋದ ಗೃಹಿಣಿ ತೌರಿಗೆ ಬಂದಿದ್ದಾಳೆ. ಆದರೆ ಅದೇನದು ಹಣೆಯ ಮೇಲೆ ದೊಡ್ಡ ಗಾಯ ?

ತನ್ನ ಚಿಂತೆಯನ್ನು ಬದಿಗಿರಿಸಿ, ಆನಂದದಿಂದ ವೆಂಕಮ್ಮನ ಬಳಿಗೆ ಓಡಿಬಂದ ಚಿಕ್ಕಮ್ಮ ಮೃದುವಾಗಿ ಆ ಗಾಯದ ಮೇಲೆ ಕೈಯ್ಯಾಡಿಸಿದರು. ವೆಂಕಮ್ಮನನ್ನು ಏನೋ ಕೇಳಬೇಕೆಂದು ಆಕೆ ಬಾಯಿತೆರೆದರು. ಅಷ್ಟರಲ್ಲಿ ವೆಂಕಮ್ಮನೆ ಮಾತಿಗೆ ಪ್ರಾರಂಭಿಸಿಬಿಟ್ಟಳು.

'ಚಿಕ್ಕಮ್ಮಾ, ಯಾಕೆ ಹೀಗಿದ್ದೀಯೇ ?"

"ನನಗೇನಮ್ಮಾ ಚೆನ್ನಾಗಿಯೇ ಇದ್ದೇನಲ್ಲ. ನೀನೇ ಇನ್ನೂ ಬಡಕಲಾಗಿರೋದು ?"

"ಮಗೂ ಎಲ್ಲಿ ಚಿಕ್ಕಮ್ಮ ?"

"ಎಂಟು ದಿನದಿಂದ ಒಂದೇ ಸಮ ಜ್ವರವಮ್ಮ. ರೂಮಿನಲ್ಲಿ ಮಲಗಿಸಿದ್ದೇನೆ."

"ಅಯ್ಯೋ ಪಾಪ !"

—ಎಂದು ವೆಂಕಮ್ಮ ಮರುಕ ಸೂಚಿಸಿ ಮತ್ತೆ ಮಾತು ಮುಂದುವರಿಸಿದಳು :

"ಆಳುಗಳೂ ಯಾರೂ ಕಾಣಲಿಲ್ಲ ? ಅಪ್ಪನ ಸದ್ದೂ ಇಲ್ಲ !"

"ಅವರು ರಂಗನ ಜಾತ್ರೆಗೆ ಹೋಗಿದ್ದಾರೆ–ಎತ್ತು ತರುವುದಕ್ಕೆ. ಒಬ್ಬ ಆಳೂ ಜೊತೆಯಲ್ಲಿ ಹೋಗಿದ್ದಾನೆ. ಇನ್ನೊಬ್ಬ ಪಂಡಿತರ ಮನೆಗೆ ಔಷಧ ತರೋದಿಕ್ಕೆ ಕಳಿಸಿದ್ದೀನಿ"

—ಎಂದರು ಚಿಕ್ಕಮ್ಮ. ವೆಂಕಮ್ಮ ನೆಲವನ್ನೇ ನೋಡುತ್ತ ನಿಂತಿದ್ದಳು.

"ನೀನೊಬ್ಬಳೇ ಬಂದೆಯೇನೇ ವೆಂಕು ? ನಿಮ್ಮ ಯಜಮಾನರು ಎಲ್ಲಿ ?"

"ಆಚೆ ನಿಂತಿದ್ದಾರೆ ಚಿಕ್ಕಮ್ಮ"

"ಇದೇನೇ ಅವರನ್ನ ಹೊರಗೇ ನಿಲ್ಲಿಸಿ ಬಂದಿದ್ದೀ ! ಒಳಗೆ ಕರೆಯೇ"

ವೆಂಕಮ್ಮ ಹೆಜ್ಜೆಯಮೇಲೆ ಹೆಜ್ಜೆಯಿಡುತ್ತಾ ಹೊರಗೆ ಬಂದಳು. ನಾಗಪ್ಪನವರು ಜಗುಲಿಯಮೇಲೆ ಕುಳಿತಿದ್ದರು.

"ಚಿಕ್ಕಮ್ಮ ಕರೆಯುತ್ತಿದ್ದಾರೆ. ಒಳಗೆ ಬನ್ನಿ."

—ಆ ಮಾತು ತನಗೆ ಕೇಳಿಸಲಿಲ್ಲವೆಂಬಂತೆ ನಾಗಪ್ಪನವರು ಕುಳಿತಿದ್ದರು. ಇನ್ನು ಹೆಚ್ಚು ಮಾತನಾಡಿದರೆ ಏನು ಅನಾಹುತವಾಗುತ್ತದೆಯೋ ಎಂದು ಹೆದರಿ ವೆಂಕಮ್ಮ ಸುಮ್ಮನಾದಳು. ಹಾಗೆಯೇ ರೂಮಿಗೆ ಬಂದು ಜ್ವರದಿಂದ ಮಲಗಿದ್ದ ಮಗುವನ್ನು ನೋಡುತ್ತಾ ನಿಂತಳು

ಅಳಿಯ ದೇವರು ಕರೆಸಿಕೊಳ್ಳದೆ ಬಂದುದನ್ನು ನೋಡಿ, ಚಿಕ್ಕಮ್ಮನಿಗೆ ವಿಸ್ಮಯವಾಗಿತ್ತು. ವೆಂಕಮ್ಮನ ಹಣೆಯ ಗಾಯ ಸಂದೇಹಕ್ಕೆಡೆಗೊಟ್ಟಿತ್ತು. ಗಂಡ ಹೆಂಡಿರ ಜಗಳವಾಗಿರಬೇಕೆಂದು ಕೊಂಡರು ಅವರು. ಆದರೆ ನಿಜವಾಗಿ ನಡೆದದ್ದೇನು ?

ಮರಳಿ ಅಡಿಗೆಯ ಕೋಣೆಗೆ ಬಂದ ವೆಂಕಮ್ಮ, ಚಿಕ್ಕಮ್ಮನ ಪಕ್ಕದಲ್ಲಿ ಕುಳಿತಳು.

"ಹುಡುಗರೆಲ್ಲ ಎಲ್ಲಿ ಚಿಕ್ಕಮ್ಮ ?"

"ಎಲ್ಲೋ ಆಡೋದಿಕ್ಕೆ ಹೋಗಿರಬೇಕು"

ಕ್ಷಣಕಾಲದ ಮೌನದ ನಂತರ, ಏನೋ ನೆನಪು ಮಾಡಿಕೊಂಡವಳಂತೆ ವೆಂಕಮ್ಮ ಕೇಳಿದಳು—

"ಬೆಂಗಳೂರಿಂದ ಚಂದ್ರಣ್ಣ ಬರಲೇ ಇಲ್ವೆ ಚಿಕ್ಕಮ್ಮ ?"

"ಇಲ್ಲ ಕಣೆ ಪಾಪ, ಅವನಿಗೆ ರಜವೇ ಸಿಕ್ಕೋಲ್ಲವಂತೆ. ಪೋಲೀಸ್ ಇಲಾಖೆಯ ಕೆಲಸವೇ ಹಾಗೆ – ಹೊತ್ತಿಲ್ಲ ಗೊತ್ತಿಲ್ಲ ರಜವಿಲ್ಲ !"

ಬೇಸರದಿಂದ ಉತ್ತರಿಸಿದಳು ಚಿಕ್ಕಮ್ಮ.

"ಚಿಕ್ಕಮ್ಮ, ಅವನಿಗೆ ಮದುವೆ ಯಾವಾಗ ಮಾಡುತ್ತೀ ಚಿಕ್ಕಮ್ಮ ?"

—ವೆಂಕಮ್ಮನ ಆ ಪ್ರಶ್ನೆಗೆ ಒಂದೆರಡು ಮಾತಿನಲ್ಲಿ ಉತ್ತರ ಹೇಳಿಬಿಡಲು ಚಿಕ್ಕಮ್ಮನಿಗೆ ಸಾಧ್ಯವಾಗಲಿಲ್ಲ. ಹಾಗೆ ಹೇಳುವುದೂ ಆಕೆಗೆ ಸಮಾಧಾನವಿಲ್ಲ. ಒಂದೊಂದನ್ನೇ ವರ್ಣಿಸಿ, ಮಗನ ಹಿರಿಮೆಯನ್ನೂ, ಮನೆಗೆ ಬರುವ ಸೊಸೆಯನ್ನೂ, ಆಕೆಯ ತೌರುಮನೆಯ ಸಂಗತಿಗಳನ್ನೂ ನಾಜೋಕಾಗಿ ಕಣ್ಣಿಗೆ ಕಟ್ಟುವಂತೆ ಬಣ್ಣಿಸಿದಳು.

ಬೆಂಗಳೂರಿನ ಇಂಜನಿಯರ್ ರಾಮಚಂದ್ರರಾಯರು ಎರಡು ಸಾವಿರ ವರದಕ್ಷಿಣೆ ಕೊಟ್ಟು, ಮಗಳಿಗೆ ಮೈತುಂಬ ಒಡವೆ ಹಾಕಿ, ಕಣ್ಣಿಗೊಪ್ಪುವ ಸೂಟ್ ಹೊಲಿಸಿ ಕನ್ಯಾದಾನ ಮಾಡುವರೆಂಬ ಸಂಗತಿ ವೆಂಕಮ್ಮನಿಗೆ ತಿಳಿಯಿತು. ತನ್ನ ಅಣ್ಣ ಎಂಥ ಭಾಗ್ಯವಂತ ಎಂದುಕೊಂಡಳು. ಹಾಗೆಯೇ ಆ ಹುಡುಗಿಯ ತೌರುಮನೆಯವರು ಎಷ್ಟು ಸಿರಿವಂತರಿರಬೇಕು ಎಂಬುದನ್ನು ಊಹಿಸಿಕೊಂಡಳು.

ತನ್ನ ಗಂಡನ ಹಾಗೆಯೇ ತನ್ನ ಅಣ್ಣನೂ ತಾನು ಕೈಹಿಡಿಯುವ ಆ ಹುಡುಗಿಯನ್ನು ಪ್ರೀತಿಸದೆ ಕ್ರೂರವಾಗಿ ಕಾಣುತ್ತಾನೆಯೇ? ಛೇ, ಆತನ ಗುಣ ಹಾಗಲ್ಲ. ಅವನದು ಹೆಂಗರುಳು. ಕಷ್ಟಪಡುವವರನ್ನೂ ನಿಸ್ಸಹಾಯಕರನ್ನೂ ಕಂಡರೆ ಮುಮ್ಮಲ ಮರುಗುವ ಮೃದು ಹೃದಯ. ಆತನ ಮುಖ ಎಷ್ಟು ಸೌಮ್ಯವಾಗಿದೆಯೋ ಅವನ ಮನಸ್ಸೂ-ಮಾತೂ ಅಷ್ಟೇ ಕೋಮಲವಾಗಿ-ಇಂಪಾಗಿದೆ. ಅವನನ್ನು ಕೈ ಹಿಡಿಯುವ ಹುಡುಗಿಯು ನಿಜವಾಗಿಯೂ ಭಾಗ್ಯವಂತಳೇ. ಆದರೆ ನಾಗಪ್ಪನವರ ಕೈ ಹಿಡಿದ ತಾನು....?

ಚಂದ್ರುವಿನ ಮದುವೆಯ ಮಾತಿನಲ್ಲಿ ಮೈಮರೆತಿದ್ದ ಚಿಕ್ಕಮ್ಮ ಅಡಿಗೆಯ ಕೋಣೆಯು ತುಂಬ ಹೊಗೆ ತುಂಬಿಕೊಂಡುದನ್ನು ಕಂಡು ತಟ್ಟನೆ ಒಲೆಯ ಬಳಿಗೆ ಧಾವಿಸಿದರು

ವೆಂಕಮ್ಮ ಮಾತ್ರ ಅಲ್ಲಿಯೇ ಕುಳಿತು ಮಾತು ಮುಂದುವರಿಸಿದಳು—

"ಹಾಗಾದರೆ ಮದುವೆ ಇನ್ನು ಇಪ್ಪತ್ತೇ ದಿನ ಅಲ್ವೆ ಚಿಕ್ಕಮ್ಮ?"

"ಹ್ಞೂ,"

"ಹಪ್ಪಳ ಸಂಡಿಗೆ ಎಲ್ಲಾ ಮಾಡಿಟ್ಟಿದ್ದೀಯಾ?"

"ಓಹೋ ಎಲ್ಲಾ ಮಾಡಟ್ಟಿದ್ದೇನಮ್ಮ. ಇಷ್ಟಕ್ಕೂ ನನ್ನಮೇಸಿದೆ ಖರ್ಚು ಹೇಳು" ಎಂದು ಮಾತು ಮುಗಿಸಿದ ಚಿಕ್ಕಮ್ಮ "ಅಂದಹಾಗೆ ನಿನ್ನ ಯಜಮಾನರಿಗೆ ಸಂಡಿಗೆ ಅಂದರೆ ಆಸೆ ಅಲ್ಲವೇ? ತಾಳು, ಒಂದಿಷ್ಟು ಕರಿಯುತ್ತೇನೆ" ಎನ್ನುತ್ತಾ ಹಲಗೆಯ ಮೇಲಿದ್ದ ಸಂಡಿಗೆಯ ಬುಟ್ಟಿಗೆ ಕೈ ಹಾಕಿದರು. ಅಷ್ಟರಲ್ಲಿ ಇಬ್ಬರು ಹುಡುಗರೂ-ವೆಂಕಮ್ಮನ ತಮ್ಮಂದಿರು—ಒಳಗೆ ಬಂದರು. ಬೀದಿಯ ಜಗುಲಿಯ ಮೇಲೆ

ಕುಳಿತಿದ್ದ ತಮ್ಮ ಭಾವನನ್ನು ಅವರು ಗಮನಿಸಿದಂತೆ ತೋರಲಿಲ್ಲ.

"ನೋಡೇ ಅಮ್ಮ, ಇವನು ನನ್ನ ಹೊಡೀತಾನೆ"

—ಎನ್ನುತ್ತಾ ಒಬ್ಬರ ಹಿಂದೊಬ್ಬರು ಅಡಿಗೆ ಮನೆಗೆ ಓಡಿ ಬಂದಾಗ ಅಲ್ಲೇ ಕುಳಿತಿದ್ದ ಅಕ್ಕ ವೆಂಕಮ್ಮನನ್ನು ಕಂಡು ತಮ್ಮ ಜಗಳವನ್ನು ಮರೆತು, ಆಕೆಯ ಎಡಬಲದಲ್ಲಿ ಕುಳಿತು ಬಿಡುವಿಲ್ಲದ ಮಾತಿಗೆ ತೊಡಗಿದರು

"ಜಗುಲಿ ಮೇಲೆ ನಿಮ್ಮ ಭಾವ ಕೂತಿದ್ದಾರೆ. ಒಳಗೆ ಕರೆದು ಕೈಕಾಲು ತೊಳೆದುಕೊಳ್ಳುವುದಕ್ಕೆ ನೀರು ಕೊಡ್ರೋ" ಎಂದು ಆಜ್ಞಾಪಿಸಿದರು ಚಿಕ್ಕಮ್ಮ ಹಾಗೆಯೇ ವೆಂಕಮ್ಮನನ್ನು ಉದ್ದೇಶಿಸಿ "ಏಳಮ್ಮ ಎಲೆ ಹಾಕು ಪಾಪ, ಬೆಳಿಗ್ಗೆ ಎಷ್ಟು ಹೊತ್ತಿನಲ್ಲಿ ಊಟಮಾಡಿ ರೈಲು ಹತ್ತಿದರೋ" ಎಂದರು

ಹುಡುಗರಿಬ್ಬರೂ ತಾನು ಮೊದಲು ತಾನು ಮೊದಲು ಎಂದು ಬೀದಿಗೆ ಓಡಿದರು. ನಾಗಪ್ಪನವರು ಮೌನವಾಗಿಯೇ ಕೈಕಾಲು ತೊಳೆದುಕೊಂಡು ಎಲೆಯ ಮುಂದೆ ಕುಳಿತರು. ಚಿಕ್ಕಮ್ಮ ಬಡಿಸಿದರು. ಊಟ ಮಾಡುವಾಗಲಾದರೂ ಅಳಿಯ ದೇವರು ಮಾತನಾಡುತ್ತಾರೇನೋ ಎಂದು ಚಿಕ್ಕಮ್ಮನ ಆಸೆ ಸಂಡಿಗೆ ಬಡಿಸುವಾಗ 'ಚಂದ್ರುವಿನ ಮದುವೆಗೆ ಮಾಡಿದ್ದು' ಎಂದು ಹೇಳಿ, ಅನಂತರ ಅವರೂ ಮಾತಿಗೆ ತೊಡಗಿದರೆ, ಚಂದ್ರುವಿನ ಮದುವೆಯ ಸಮಾಚಾರವನ್ನೆಲ್ಲಾ ಸಂಪೂರ್ಣವಾಗಿ ಪಾರಾಯಣ ಮಾಡಬೇಕೆಂದು ಅವರು ಬಯಸಿದ್ದರು.

ಆದರೆ ಅಳಿಯ ದೇವರು ತುಟಿ ತೆರೆಯಲಿಲ್ಲ. 'ಬೇಕು-ಬೇಡ' ಗಳನ್ನು ಕೈಯಿಂದಲೇ ಸೂಚಿಸಿದರು. ಬಡಿಸುವ ನೆಪದಲ್ಲಿ ಚಿಕ್ಕಮ್ಮ ಮಾತನಾಡಿದರೂ ನಾಗಪ್ಪನವರು ನಾಲಗೆಯನ್ನು ಬಿಗಿಹಿಡಿದಿದ್ದರು ! ತನ್ನ ಗಂಡನನ್ನು ಕಂಡು ವೆಂಕಮ್ಮನಿಗೆ, ಅಷ್ಟಗ್ರಾಮದ ಹೊಳೆಯ ತೀರದಲ್ಲಿದ್ದ 'ಮೌಳಿ ಹನುಮಂತರಾಯ'ನ ನೆನಪಾಗಿ, ಆ ಸಂಕಟ ಸ್ಥಿತಿಯಲ್ಲಿಯೂ ನಗು ಬಂದಿತು.

ಮೌನವಾಗಿಯೇ ಊಟ ಮುಗಿಯಿತು. ಮೊದ ಮೊದಲು ಸಲಿಗೆ ವಹಿಸಿದ್ದ ಇಬ್ಬರು ಹುಡುಗರೂ ಭಾವನ ಸ್ಥಿತಿಯನ್ನು ಕಂಡು ತಾವೂ ಗಂಭೀರರಾದರು. ನಾಗಪ್ಪನವರು ನಡು ಅಂಗಳದ ಗೋಡೆಗೆ

ಒರಗಿ ಕುಳಿತರು.

ವೆಂಕಮ್ಮ ಬೇಗ ಬೇಗ ಊಟ ಮುಗಿಸಿದಳು ಚಿಕ್ಕಮ್ಮನ ಆದೇಶದಂತೆ ಹೊರಗಿನ ಕೋಣೆಯಲ್ಲಿ ತನಗೂ-ತನ್ನ ಗಂಡನಿಗೂ ಹಾಸಿಗೆ ಹಾಸಿದಳು. ಹುಡುಗರಿಬ್ಬರೂ ಚಿತ್ರದ ತಟ್ಟೆಯಲ್ಲಿ ಭಾವನಿಗೆ ವೀಳ್ಯವನ್ನು ತಂದಿಟ್ಟು, ನಡು ಅಂಗಳದಲ್ಲಿ ತಮ್ಮ ತಮ್ಮ ಹಾಸಿಗೆಯನ್ನು ಹಾಸಿಕೊಂಡರು.

ನಾಗಪ್ಪನವರು ಅಡಕೆಯನ್ನು ಮಾತ್ರ ಬಾಯಿಗೆ ಹಾಕಿಕೊಂಡು ಮಲಗಲು ಹೊರಕೋಣೆಗೆ ಬಂದರು ವೆಂಕಮ್ಮ ಅಲ್ಲಿಂದ ಹೊರಗೆ ಬಂದು ಚಿಕ್ಕಮ್ಮನ ಮುಸುರೆ ಕೆಲಸಗಳಲ್ಲಿ ಸಹಾಯ ಮಾಡಲು ತೊಡಗಿದಳು

"ಬೇಡ ಹೋಗಮ್ಮ. ನಾನೇ ಮಾಡಿಬಿಡುತ್ತೇನೆ-ಎಷ್ಟು ಹೊತ್ತು"

ಎಂದು ಚಿಕ್ಕಮ್ಮ ಎಷ್ಟು ಹೇಳಿದರೂ ಕೇಳದೆ ವೆಂಕಮ್ಮ ಪಾತ್ರೆ ಉಜ್ಜಲು ಕುಳಿತಳು.

"ಹೌದು ಕಣೆ ವೆಂಕು, ಅಂದಹಾಗೆ ನಿನ್ನ ಹಣೆಯ ಮೇಲೆ ಯಾಕೇ ಅಷ್ಟೊಂದು ದೊಡ್ಡ ಗಾಯ?"

"ಬೆಳಿಗ್ಗೆ ಮನೆ ಹತ್ತಿರ ತಲೆ ತಿರುಗಿ ಬಿದ್ದುಬಿಟ್ಟೆ ಚಿಕ್ಕಮ್ಮ"

ಹಿಂದು ಮುಂದು ನೋಡದೆ ಉತ್ತರಿಸಿಬಿಟ್ಟಳು ವೆಂಕಮ್ಮ. ನಿಜ ಸಂಗತಿ ಹೇಳಲು ಆಕೆಗೆ ಮನಸ್ಸು ಕಸಿವಿಸಿಯಾಯಿತು.

"ತುಂಬ ರಕ್ತ ಸುರೀತೇನೇ ?"

"ಇಲ್ಲ ಚಿಕ್ಕಮ್ಮ. ಅಷ್ಟರಲ್ಲಿ 'ಅವರು' ಬಂದು, ಕುಂಕುಮ ಮೆತ್ತಿ ರಕ್ತ ನಿಲ್ಲಿಸಿದರು."

"ನೋವಾಗೋಲ್ವೇನೇ ವೆಂಕು ?"

"ಇಲ್ಲ ಚಿಕ್ಕಮ್ಮ. ಅದೇನು ಮಹಾ ಗಾಯ – ನೋವಾಗೋಕೆ"

–ಸುಳ್ಳಿನ ಸರಪಣಿಯಲ್ಲಿ ತಾನು ಮಾತು ಬಿಗಿಸುತ್ತಿರುವೆನೆಂಬುದು ಆಕೆಗೆ ತಿಳಿದಿತ್ತು. ಆದರೆ ನಿಜವನ್ನೇ ಹೇಳಿಬಿಟ್ಟರೆ, ಅದರಿಂದ ತನ್ನ ಗಂಡನ ಮೇಲೆ ಚಿಕ್ಕಮ್ಮನಿಗೆ ಎಂತಹ ಕೆಟ್ಟ ಅಭಿಪ್ರಾಯ ಮೂಡುತ್ತದೆ? ತಾನು ಹೇಳುತ್ತಿರುವ ಸುಳ್ಳಿನಿಂದ ಯಾರಿಗೂ

ತೊಂದರೆಯಿಲ್ಲವಲ್ಲ, ಅಷ್ಟೇ ಸಾಕು ಎಂದುಕೊಂಡಳು ವೆಂಕಮ್ಮ.

ಕೆಲಸವೆಲ್ಲಾ ಮುಗಿದ ಮೇಲೆ ಹಿತ್ತಿಲ ಬಾಗಿಲು ಮುಚ್ಚಿ, ಇಬ್ಬರೂ ಒಳಗೆ ಬಂದರು.

"ಇನ್ನು ನೀ ಮಲಗಿಕೋ ಹೋಗಮ್ಮ" ಎಂದರು ಚಿಕ್ಕಮ್ಮ.

"ನೀನು ?"

"ನಾನೂ ಮಲಗಿಕೊಳ್ತೀನೆ"

"ಔಷಧಕ್ಕೆ ಹೋದ ಆಳು ಇನ್ನೂ ಬರಲೇ ಇಲ್ವಲ್ಲ ಚಿಕ್ಕಮ್ಮ"

"ಇನ್ನೇನು ಬರ್ತಾನೆ. ಪಂಡಿತರು ಸಿಕ್ಕಿದರೋ ಇಲ್ವೋ?"

ಎಂದು ಚಿಕ್ಕಮ್ಮ ನುಡಿಯುವ ವೇಳೆಗೆ–"ಪಂಡಿತರು ಊರಾಗೆ ಇಲ್ಲ ಅಮ್ಮಣ್ಣಿ" ಎಂದು ರಾಗವೆಳೆಯುತ್ತಾ ಆಳು ಒಳಗೆ ಬಂದನು. ಅದನ್ನು ಕೇಳಿದ ಚಿಕ್ಕಮ್ಮನ ಮನಸ್ಸು ಗಾಳಿಗೆ ಸಿಕ್ಕಿದ ಪಟದಂತೆ ಓಲಾಡಿತು.

"ನಾನು ಜಗ್ಲೀಮ್ಯಾಗೇ ಮಲೀಕೊಳ್ತೀನಿ ಅಮ್ಮಾವ್ರೆ"ಎನ್ನುತ್ತಾ ಆಳು ಹೊರಗೆ ಹೋದನು ಅನಂತರ ಬಾಗಿಲುಹಾಕಿ, ಒಳ ಚಿಲಕ ವಿಟ್ಟು, ಮಲಗಲು ಹೋದಳು ವೆಂಕಮ್ಮ. ನಾಗಪ್ಪನವರು ಎಚ್ಚರ ವಾಗಿದ್ದರೂ ಕಣ್ಣುಮುಚ್ಚಿಕೊಂಡಿದ್ದರು! ದೀಪವಾರಿಸಿ ವೆಂಕಮ್ಮ ಮಲಗಿಕೊಂಡಳು ಅವಳ ಹೃದಯ, ತನ್ನ ಗಂಡ ಈಗಲಾದರೂ ಪ್ರಸನ್ನನಾಗುವನೇನೋ ಎಂದು ಕಾತರಿಸಿತು. ಮನಸ್ಸು ಸವಿಗನಸು ಕಟ್ಟುತ್ತಾ ಇನಿಯನ ಸ್ಪರ್ಶಕ್ಕಾಗಿ ಹಾತೊರೆಯಿತು. ಮಧ್ಯಾಹ್ನ ಬಿದ್ದ ಪೆಟ್ಟಿನಿಂದ ಎದೆಯನೋವು ಹೆಚ್ಚಾಗಿದ್ದರೂ ಸುಖಾನುಭವದ ಗುಂಗಿನಲ್ಲಿ ಅದೂ ಮರೆತುಹೋಗಿತ್ತು.

ಆದರೆ ನಾಗಪ್ಪನವರದು ಹಟವೇ ಹಟ! ಮೈಗೆ ಮೈಸೋಕದಂತೆ ಎಚ್ಚರ ವಹಿಸಿ, ಮುಖವನ್ನು ಬೇರೆ ಕಡೆಗೆ ತಿರುಗಿಸಿ ಮಲಗಿಕೊಂಡರು.

'ಇನ್ನು ಸ್ವಲ್ಪ ಹೊತ್ತಿಗೆ', 'ಇನ್ನೊಂದು ಕ್ಷಣದಲ್ಲಿ', 'ಈಗ', 'ಇನ್ನೇನು....', '....ಹೀಗೆ ತಿರುಗಿವಂತಿದೆ'–ಎಂದು ಸುಖಾನುಭವದ ಹುಮ್ಮಸ್ಸಿನಲ್ಲಿ, ನಾಗಪ್ಪನವರು ಪ್ರಸನ್ನರಾಗುವುದನ್ನೇ ನಿರೀಕ್ಷಿಸುತ್ತಿದ್ದ ವೆಂಕಮ್ಮನ ಬಯಕೆ ಬಯಲಾಯಿತು, ಆಶೆ ನಶಿಸಿತು.

ಬೆಳಗ್ಗೆ ಬೇಗನೆ ಎದ್ದವರು ನಾಗಪ್ಪ. ಹಿಂದಿನ ದಿನದ ಬಳಲಿಕೆಯಿಂದ ವೆಂಕಮ್ಮ ಹಾಸಿಗೆಯಮೇಲೆ ಮೈಮರೆತಿದ್ದಳು. ರಾತ್ರಿ ಒಂದು ಹೊತ್ತಿನಲ್ಲಿ ಪ್ರಾರಂಭವಾಗಿದ್ದ ಎದೆಯನೋವು ಬಹಳಹೊತ್ತಿನ ತನಕ ಬಾಧೆಪಡಿಸಿ ನಿದ್ರೆಗೆ ಅಡ್ಡಿ ತಂದಿದ್ದಿತು. ಹಾಸಿಗೆಯ ಮೇಲೆ ಬೋರಲಾಗಿ ಮಲಗಿಕೊಂಡು ನರಳಿ ನರಳಿ ಕೊನೆಗೆ ತನಗರಿಯದಂತೆಯೇ ನಿದ್ದೆಮಾಡಿದ್ದಳು ಆದರೆ ನಾಗಪ್ಪನವರು ಚಿಂತಾಚಿತ್ತರಾಗಿ ಹಾಸಿಗೆಯಮೇಲೆ ಒರಗಿದ್ದರೂ ಬೆಳಿಗ್ಗೆ ಬೇಗನೇ ಏಳಲೇಬೇಕೆಂಬ ಉದ್ದೇಶದ ಹಟದಿಂದ ಬಲವಂತವಾಗಿ ನಿದ್ರೆಮಾಡಿದ್ದರು. ಆದರೆ ಅದು ಶಾಂತಮಯವಾದ ಸುಖನಿದ್ರೆಯಲ್ಲ; ಮುಂದೆ ತಾವು ಅನುಸರಿಸಬೇಕೆಂದಿರುವ ಕಾರ್ಯಕ್ರಮಗಳ ಕನಸಿನ ನಿದ್ರೆ !

ಎಂತಲೇ ಅವರು ಬೇಗನೆ ಎದ್ದಿದ್ದರು. ಆಗಿನ್ನೂ ಗಂಟೆ ಐದೂವರೆಯಾಗಿದ್ದಿತು. ನಾಗಪ್ಪನವರು ತಮ್ಮ ಬಟ್ಟೆಗಳನ್ನೊಳಗೊಂಡ ಕೈಚೀಲವನ್ನು ಕೈಗೆ ತೆಗೆದುಕೊಂಡರು. ಮೆಲ್ಲನೆ ಹೆಜ್ಜೆಯಿಡುತ್ತಾ ಕೊಠಡಿಯಿಂದ ಹೊರಗೆ ಬಂದರು.

ಅಷ್ಟರಲ್ಲಾಗಲೇ ಅವರ ಅತ್ತೆಯೆನಿಸುವ-ವೆಂಕಮ್ಮನ ಚಿಕ್ಕಮ್ಮ ಮನೆಯ ಮುಂಗಡೆ ನೀರು ಚಿಮುಕಿಸಿ ರಂಗವಲ್ಲಿ ಹಾಕುತ್ತಿದ್ದರು. ನಾಗಪ್ಪನವರು ಅಳುಕುತ್ತ ಅಳುಕುತ್ತ ಬೀದಿಯ ಬಾಗಿಲಿನವರೆಗೂ ಬಂದರು. ಆದರೆ ಅವರೆದುರಿಗೇ ಬೀದಿಗೆ ಹೇಗಿಳಿಯುವುದು ? ಎರಡು ಕ್ಷಣ ನಿಂತು ಯೋಚಿಸಿದರು. ಮತ್ತೆ ಧೈರ್ಯಮಾಡಿ ಹೊಸಲು ದಾಟಿದರು.

ಚಿಕ್ಕಮ್ಮ ನೋಡಿಯೇ ನೋಡಿದರು ಅಳಿಯಂದಿರು ಹೊರಟು ನಿಂತಿದ್ದಾರೆ—ಕೈಯ್ಯಲ್ಲಿ ಚೀಲವಿದೆ. ಊರಿಗೇ ಹೊರಟಿರುವರೆಂದು ಊಹಿಸಲು ಅವರಿಗೆ ತಡವಾಗಲಿಲ್ಲ, ಆದರೆ ಅವರು ಹಾಗೆ ಹೋಗುತ್ತಿರುವುದನ್ನು ನೋಡುತ್ತ ನಿಂತಿರುವುದು ಸರಿಯಲ್ಲವೆನಿಸಿತು.

"ಇಷ್ಟು ಬೇಗ ಹೊರಟುಬಿಡಬೇಕೇ ?"

"ಹ್ಞಾಂ"

ಎಂದು ಗುಟುಕರಿಸಿದರು ನಾಗಪ್ಪ.

"ಒಂಭತ್ತು ಗಂಟೆ ರೈಲಿಗಾದರೂ ಹೋದರೆ....ಅಷ್ಟು ಹೊತ್ತಿಗೆ

ಕಾಫಿ-ತಿಂಡಿ ಮಾಡುತ್ತೇನೆ"

ನಾಗಪ್ಪನವರಿಗೆ ಆ ಮಾತು ಕೇಳಿಸಿತೋ ಇಲ್ಲವೋ-ಅವರಂತೂ ನಿಲ್ಲದೆ ಹೊರಟೇ ಹೋದರು.

ಅಳಿಯನ ಈ ವಿಚಿತ್ರ ವರ್ತನೆಯನ್ನು ಕಂಡು ಚಿಕ್ಕಮ್ಮನಿಗೆ ಆಶ್ಚರ್ಯವಾದರೂ ಗಾಬರಿಯಾಯಿತು. ಅವರು ಕೋಪ ಮಾಡಿ ಕೊಂಡಿರುವರೆಂದು ಹಿಂದಿನ ರಾತ್ರಿಯೇ ಊಹಿಸಿಕೊಂಡಿದ್ದರು ಚಿಕ್ಕಮ್ಮ. ನಾಗಪ್ಪನವರ ಮೌನ, ಗಂಟಿಕ್ಕಿದ ಮುಖ, ತಿರಸ್ಕಾರ ವನ್ನು ಸೂಚಿಸುವ ಕಣ್ಣುಗಳು—ಎಲ್ಲಾ ಅವರ ಊಹೆಯನ್ನು ನಿಜವೆಂದು ಸಾರುತ್ತಿದ್ದವು.

ಆದರೆ ಈ ಕೋಪಕ್ಕೆ ಕಾರಣವೇನು ?

ಗಂಡ ಹೆಂಡಿರ ಜಗಳವೇ ?

ಅದು ಉಂಡು ಮಲಗುವವರೆಗೆ ಎನ್ನುತ್ತಾರೆ. ಹಾಗಿದ್ದರೆ, ಈ ವೇಳೆಗಾಗಲೇ ಪರ್ಯವಸಾನವಾಗಬೇಕಿತ್ತಲ್ಲ !

ವೆಂಕುವಿನ ಹಣೆಯ ಮೇಲೆ ದೊಡ್ಡ ಪೆಟ್ಟಾಗಿದೆ.

ಅದಕ್ಕೆ ಕಾರಣ ತಲೆ ತಿರುಗಿ ಬಿದ್ದುದೆಂದು ಹೇಳುತ್ತಾಳೆ ವೆಂಕಮ್ಮ. ಹಾಗೆ ಇದ್ದಕ್ಕಿದ್ದಂತೆ ತಲೆ ತಿರುಗಿ ಬೀಳಬೇಕಾದ ಪ್ರಸಂಗವೇನು ? ಆಕೆ ಗಂಡನ ಮೇಲಿನ ಅಭಿಮಾನದಿಂದ ಸುಳ್ಳು ಹೇಳಿರಬಹುದೇ ?

ಇದ್ದಕ್ಕಿದ್ದಂತೆ ಗಂಡ ಹೆಂಡತಿಯರು ಹೊರಟು ಬಂದಿದ್ದಾರೆ ಕರೆಸಿಕೊಳ್ಳದೆ ಬರುವುದು ತುಂಬ ಅನಿರೀಕ್ಷಿತ ವೈಚಿತ್ರ್ಯವಲ್ಲವೇ ? ಅಳಿಯನ ಬಿಗುಮಾನ ಸಡಿಲಾಗುವುದೆಂದರೆ ಸೋಜಿಗವೇ ! ಅದೂ ಬಂದವರು ಯಾರೊಡನೆಯೂ ಮಾತನಾಡಲಿಲ್ಲ—ಅಳಿಯದೇವರು. ವೆಂಕಮ್ಮನೊಡನೆಯೂ ಮಾತನಾಡಿದುದನ್ನು ತಾವು ನೋಡಲಿಲ್ಲ.

ಇದಕ್ಕೆ ಬಲವಾದ ಕಾರಣವೇನೋ ಇರಬೇಕು. ಅದೇನು....? ಅದೇನು....? ಅದನ್ನು ಯಾರು ಹೇಳುವವರು ?

ಚಿಕ್ಕಮ್ಮನ ಮನಸ್ಸು ಪರಿಪರಿಯಾಗಿ ಚಿಂತಿಸಿತು. ರಂಗೋಲೆ ಯಿಟ್ಟು ಮುಗಿಸಿ, ಅವರು ಒಳಗೆ ಬಂದು ಕಾಫಿಯ ಒಲೆ ಹೊತ್ತಿಸಿದರು.

ಹುಡುಗರೆಲ್ಲ ಒಬ್ಬೊಬ್ಬರಾಗಿ ಎದ್ದರು ಚಿಕ್ಕಮ್ಮ ಏನೋ

ನೆನಪು ಮಾಡಿಕೊಂಡವರಂತೆ ರೂಮಿಗೆ ಹೋಗಿ ಎಳೆಯ ಮಗುವಿನ ಮೈ ಮುಟ್ಟಿ ನೋಡಿದರು. ಎಂಟು ದಿನಗಳಿಂದ ಒಂದೇ ಸಮನಾಗಿ ಸುಡುತ್ತಿದ್ದ ಜ್ವರ ಅಂದು ಬಿಟ್ಟಿತ್ತು. ಅವರ ಮನಸ್ಸಿಗೆ ಸ್ವಲ್ಪ ಸಮಾಧಾನವೆನಿಸಿತು ಹಾಗೆಯೇ ಹೊರಗಿನ ಕೊಠಡಿಗೆ ತೆರಳಿದರು. ಬಾಗಿಲು ತೆರೆದು ನೋಡಿದರೆ ವೆಂಕಮ್ಮ ಇನ್ನೂ ಮಲಗಿದ್ದಾಳೆ. ಎಬ್ಬಿಸಲೇ ಎಂದುಕೊಂಡರು ಚಿಕ್ಕಮ್ಮ. ಮರುಕ ಹುಟ್ಟಿಸುವ ಅವಳ ಮುಗ್ಧ ಮುಖವನ್ನು ಕಂಡು–ಎಬ್ಬಿಸಲು ಮನಸ್ಸಾಗದೆ ಅಲ್ಲಿಂದ ಹೊರಟರು.

ಕಾಫಿ ಸಮಾರಾಧನೆ ಆಗುವ ವೇಳೆಗೆ ವೆಂಕಮ್ಮ ಎದ್ದಳು. ಪಕ್ಕದ ಹಾಸಿಗೆಯಲ್ಲಿ ಗಂಡನಿಲ್ಲದುದನ್ನು ಕಂಡು, ಅವರು ಆಗಲೇ ಎದ್ದಿರಬಹುದೆಂದುಕೊಂಡಳು. ಒಂದು ಬಾರಿ ಆಕಳಿಸಿ ಕಿಟಕಿಯ ಕಡೆಗೆ ಸಿಟ್ಟಿಸಿದಾಗ ಹೊತ್ತು ಬಹಳವಾಗಿದೆಯೆನ್ನಿಸಿತು. ಹಾಸಿಗೆಗಳನ್ನು ಸುತ್ತಿಟ್ಟು ಮುಖ ತೊಳೆಯಲು ಹೊರಟಳು. ಆದರೆ ನಡೆಯುವುದಕ್ಕೇ ಆಗದಷ್ಟು ನಿಶ್ಶಕ್ತಿ; ಬಳಲಿದ ಮೈ—ಬಳಲಿದ ಮನಸ್ಸು. ಎರಡು ಹೆಜ್ಜೆ ಇಡುವ ವೇಳೆಗೆ ಕಣ್ಣು ಮಂಜಾದಂತಾಯಿತು. ಅವು ಮುಚ್ಚಿ ಹೋದಂತಾದಾಗ ಆಕೆ ಉಪಾಯಗಾಣದೆ ಕುಸಿದು ಕುಳಿತಳು ಅಷ್ಟರಲ್ಲಿ ಬಂದ ಚಿಕ್ಕಮ್ಮ—

"ವೆಂಕು ವೆಂಕು"

ಎಂದು ಗಾಬರಿಯಿಂದ ಕೂಗುತ್ತಾ ಅವಳ ಬಳಿಗೋಡಿ ಬಂದರು.

ವೆಂಕಮ್ಮನ ಕಣ್ಣು ಮುಚ್ಚಿದ್ದುದನ್ನು ಕಂಡು, ಅವಳ ಭುಜ ಅಲುಗಿಸಿ, ಮತ್ತೊಮ್ಮೆ ಕೂಗಿದರು :

"ವೆಂಕು, ವೆಂಕು, ನನ್ ಪುಟ್ಟ"

ಮೆಲ್ಲನೆ ಕಣ್ಣು ತೆರೆದಳು ವೆಂಕಮ್ಮ. ಕ್ಷೀಣವಾದ ಧ್ವನಿಯಲ್ಲಿ—

"ಚಿಕ್ಕಮ್ಮ...." ಎಂದಳು.

"ಏನಾಯ್ತಮ್ಮ ಪುಟ್ಟ ?"

ವೆಂಕಮ್ಮ ಮಾತನಾಡಲಿಲ್ಲ. ಮೆಲ್ಲನೆ ಅಲ್ಲಿಂದೇಳಲು ಪ್ರಯತ್ನಿಸಿದಳು. ಚಿಕ್ಕಮ್ಮ ರಟ್ಟೆ ಹಿಡಿದು ನಿಲ್ಲಲು ಅವಳಿಗೆ ಸಹಾಯ ಮಾಡಿದರು. ಇಬ್ಬರೂ ಬಚ್ಚಲು ಮನೆಗೆ ಬಂದಾಗ—

"ನಾನು ಮುಖ ತೊಳಕೊಂಡು ಬರ್ತೀನಿ. ನೀನು ಹೋಗು ಚಿಕ್ಕಮ್ಮ."

ಎಂದಳು ವೆಂಕಮ್ಮ, ಆದರೆ ಮಗಳನ್ನು ಆ ಸ್ಥಿತಿಯಲ್ಲಿ ಬಿಟ್ಟು ಹೋಗುವಂಥ ಕೆಟ್ಟಮನಸ್ಸಿನವಳೇ ಚಿಕ್ಕಮ್ಮ? ಮಲತಾಯಿ ಯಾದರೂ ಆಕೆಗೆ ಆ ಸವತಿಯ ಮಗಳನ್ನು ಕಂಡರೆ ಎಷ್ಟು ಪ್ರೇಮ!

ವೆಂಕಮ್ಮ ಮುಖ ತೊಳೆದು ಹೊರ ಬಂದಳು. ಚಿಕ್ಕಮ್ಮ ನೊಡನೆ ಅಡಿಗೆ ಮನೆಗೆ ಬಂದು ಕಾಫಿ ಕುಡಿಯುತ್ತ ಕುಳಿತಳು. ಒಂದೊಂದೇ ಗುಟುಕು ಹೀರುವುದರ ಜೊತೆಗೆ ಮಾತೂ ಆರಂಭ ವಾಯಿತು.

"ಚಿಕ್ಕಮ್ಮ 'ಅವರಿ'ಗೆ ಕಾಫಿ ಆಯಿತೇ?"

ಆ ಪ್ರಶ್ನೆಗೆ ಉತ್ತರಿಸುವುದು ಹೇಗೆ?

ನಾಗಪ್ಪನವರು ಬೆಳಗ್ಗೆಯೇ ರೈಲಿಗೆ ಹೊರಟು ಹೋದರೆಂದು ವೆಂಕಮ್ಮನಿಗೆ ತಿಳಿದರೆ ಆಕೆ ಎಷ್ಟು ದುಃಖಿಸುವಳು? ಕುಡಿಯು ತ್ತಿರುವ ಕಾಫಿಯನ್ನು ಅಷ್ಟಕ್ಕೇ ನಿಲ್ಲಿಸಿ ಕಣ್ಣೀರು ಹರಿಸಲು ಪ್ರಾರಂಭಿ ಸುವಳು? ಹೇಳದಿದ್ದರೆ ಅವಳಿಗೆ ತಿಳಿಯುವುದು ಹೇಗೆ?

ಉಭಯ ಸಂಕಟಕ್ಕಿಟ್ಟುಕೊಂಡಿತು ಅವರಿಗೆ. ಎಂತಲೇ ಉತ್ತರಿಸದೆ—"ಬಂದೆ ತಾಳು" ಎಂದು, ಏನೋ ನೆಪ ಹೂಡಿ ಅಲ್ಲಿಂದ ಐದುನಿಮಿಷ ಮರೆಯಾದರು. ಮರಳಿ ಬರುವಷ್ಟರಲ್ಲಿ ವೆಂಕಮ್ಮ ಬರಿದಾದ ಕಾಫಿಯ ಬಟ್ಟಲನ್ನು ಕೆಳಗಿಟ್ಟಳು

"ಚಿಕ್ಕಮ್ಮ ಹುಡುಗರೆಲ್ಲ ಎಲ್ಲಿ?"

"ಎಲ್ಲೋ ಜಗುಲಿಯ ಮೇಲಿರಬೇಕು"

"ನೀರು ಕಾದಿದೆಯಲ್ಲ, 'ಅವರ'ನ್ನು ಸ್ನಾನಕ್ಕೆಬ್ಬಿಸಲು ಹೇಳ ಬೇಕಾಗಿತ್ತು" ಎಂದಳು ವೆಂಕಮ್ಮ.

"ನಿನ್ನ ಗಂಡನನ್ನೇ ವೆಂಕು?"

"ಹ್ಞಾಂ ಚಿಕ್ಕಮ್ಮ"

"ಅವರೆಲ್ಲಿದ್ದಾರೆ? ಬೆಳಗ್ಗೆಯೇ ರೈಲಿಗೆ ಹೊರಟು ಹೋದರಲ್ಲಾ! ನಿನಗೆ ಹೇಳಲಿಲ್ಲವೇ?"

ಇಲ್ಲವೆಂಬಂತೆ ತಲೆಯಾಡಿಸಿದಳು ವೆಂಕಮ್ಮ.

"ಒಂಭತ್ತು ಗಂಟೆ ರೈಲಿಗಾದರೂ ಹೋಗಿ ಎಂದು ಹೇಳಿದೆ. ಮಾತನಾಡದೆ ಹೊರಟು ಹೋದರು"

ವೆಂಕಮ್ಮ ದಿಕ್ಕು ತೋಚದವಳಂತೆ ಮಂಕಾಗಿ ಕುಳಿತು ಬಿಟ್ಟಿದ್ದಳು ಕಣ್ಣು ಕೂಡ ಅಲುಗಿಸದಷ್ಟು ಗಂಭೀರವಾಗಿ ಕುಳಿತಿದ್ದ ಅವಳನ್ನು ಕಂಡು, ಚಿಕ್ಕಮ್ಮ ಬಳಿಗೈದು, ತಲೆಯ ಮೇಲೆ ಕೈಯ್ಯಾಡಿಸುತ್ತಾ—

"ಪುಟ್ಟ, ವೆಂಕು" ಎಂದರು ಮೃದುವಾಗಿ.

ವೆಂಕಮ್ಮ ಅವರೆಡೆಗೆ ನೋಡಿದಳು. ಚಿಕ್ಕಮ್ಮನ ಮುಖದಲ್ಲಿ ಮೂಡಿದ್ದ ಮನಕರಗುವ ಮಮತಾಮಯ ಮಾರ್ದವ ಭಾವ ಅವಳ ಹೃದಯವನ್ನು ತುಂಬಿತು. 'ಆಸರೆಗಾಗಿ ತೆರೆದಿದೆ ಈ ತಾಯ್ ಮಡಿಲು —ಬಾ ಮಗಳೆ' ಎಂದು ಕರೆಯಿತು ಆ ಕಾರುಣ್ಯಮಯಿಯ ಕಣ್ಣು. ಆಕೆ ಮಲತಾಯಿಯೋ, ತಾಯಿಯೋ ಇಲ್ಲವೇ ದೇವತೆಯೋ ಎನ್ನುವ ಸಂದೇಹದಿಂದ ಮಿಡುಕಿದ ವೆಂಕಮ್ಮನ ಮನಸ್ಸು ಉತ್ತರಕ್ಕಾಗಿ ಹುಡುಕಿತು. ತೀರವನ್ನಪ್ಪಿದ ದೋಣಿಯಂತೆ ಆಕೆ ಚಿಕ್ಕಮ್ಮನನ್ನು ಆಲಂಗಿಸಿಕೊಂಡಳು. ಅವರೂ ಪ್ರೀತಿಯಿಂದ ತಬ್ಬಿಕೊಂಡು ಮಗಳ ಬೆನ್ನಿನ ಮೇಲೆ ಕೈಯ್ಯಾಡಿಸುತ್ತಾ—

'ಏನಾಯಿತು ಪುಟ್ಟ ?"

ಬಿಕ್ಕಿ ಬಿಕ್ಕಿ ಬಂದ ಅಳುವೇ ಆ ಪ್ರಶ್ನೆಗೆ ಉತ್ತರವಾಯಿತು. ಚಿಕ್ಕಮ್ಮ ಮತ್ತೆ ಮತ್ತೆ ರಮಿಸಿ ಕೇಳಿದರು ಸೆರಗಿನ ತುದಿಯಿಂದ ಮಗಳ ಕಣ್ಣೀರನ್ನು ಒರಸಿ, ಅವಳನ್ನು ತಮ್ಮ ಎದೆಗೆ ಒರಗಿಸಿಕೊಂಡು ಮುಂಗುರುಳು ನೇವರಿಸುತ್ತಾ ಹಣೆಯ ಮೇಲಿನ ಗಾಯವನ್ನು ಮೃದುವಾಗಿ ಮುಟ್ಟಿದರು.

ನೋವಿನಿಂದ 'ಹ್ಹಾ' ಎಂದಳು ವೆಂಕಮ್ಮ

"ತುಂಬ ನೋಯುತ್ತ್ಯಾ ವೆಂಕು ?"

"................"

"ತಲೆ ತಿರುಗಿ ಬಿದ್ದರೆ ಇಷ್ಟೊಂದು ದೊಡ್ಡ ಗಾಯವಾಗುತ್ತ್ಯೇನೆ ಪುಟ್ಟ ?"

"................"

"ನಿಜ ಹೇಳಮ್ಮ ಏನಾಯ್ತೂಂತ?"

ವೆಂಕಮ್ಮ ತಾಯಿಯಕಡೆಗೆ ತಿರುಗಿ, ಅವರ ಎದೆಯಲ್ಲಿ ಮುಖ ವನ್ನು ಹುದುಗಿಸಿ—

"ಚಿಕ್ಕಮ್ಮ ಚಿಕ್ಕಮ್ಮ" ಎಂದಳು

ಆ ಧ್ವನಿಯಲ್ಲಿದ್ದ ಅಪಾರ ಯಾತನೆಯನ್ನು ಕಂಡುಕೊಳ್ಳಲು ಆ ತಾಯಿಗೆ ಕಷ್ಟವಾಗಿರಲಿಲ್ಲ ಅವರ ಕಣ್ಣುಗಳೂ ಹಸಿಗೂಡಿದವು.

ವೆಂಕಮ್ಮ ಬಿಕ್ಕಿ ಬಿಕ್ಕಿ ಅಳುತ್ತಾ, ಅಗ್ರಹಾರದಲ್ಲಿ ನಡೆದುದ ನ್ನೆಲ್ಲಾ ವರದಿ ಮಾಡಿದಳು. ನಾಗಪ್ಪನವರು ಶಾಲೆಗೆ ರಜ ಬರೆಯದೆ ಬೆಂಗಳೂರಿಗೆ ಹೋದಾಗ ಇನ್ಸ್‌ಪೆಕ್ಟರ್ ಸಾಹೇಬರು ಬಂದು ಮೂರು ತಿಂಗಳು ಕೆಲಸದಿಂದ ಸಸ್ಪೇಂಡ್ ಮಾಡಿದುದು, ತನ್ನನ್ನು ವರದಕ್ಷಿಣೆ ಯಿಲ್ಲದೆ ಮದುವೆಯಾಗಿ ಬಂದವಳೆಂದು ಬೈದು ನೂಕಿದುದು-ಸಾವಿರ ಗಟ್ಟಲೆ ವರದಕ್ಷಿಣೆ ಸುರಿದು ಹೆಣ್ಣು ಕೊಡಲು ಎಷ್ಟೋ ಜನ ಕಾದಿದ್ದಾ ರೆಂದು ಹೇಳಿದುದು, ತಾನು ಅವರ ಕಾಲುಹಿಡಿದುಕೊಂಡಾಗ ಅವರು ಒದೆದು ತನಗೆ ಗಾಯವಾದುದು—ಎಲ್ಲವನ್ನೂ ವೆಂಕಮ್ಮ ಮುಚ್ಚು ಮರೆಯಿಲ್ಲದೆ ಚಿಕ್ಕಮ್ಮನಿಗೆ ಹೇಳಿದಳು. ಆ ಒಂದೊಂದು ಮಾತಿ ನಲ್ಲಿಯೂ ತುಂಬಿದ್ದ ಗೂಢಾರ್ಥವನ್ನು ಯೋಚಿಸಿದರು ಚಿಕ್ಕಮ್ಮ. ಕ್ಷಣಕಾಲ ಅವರ ಹೃದಯ ಭೀತಿಯಿಂದ ಕಳವಳಗೊಂಡಿತು. ಎದುರಿಗೆ ಕುಳಿತಿದ್ದ ಮಗಳ ಭವಿಷ್ಯ ಕಣ್ಣಿಗೆ ಕಟ್ಟಿತು. ಹೀಗಾಗುವುದೆಂದು ತಾವು ಎಂದಾದರೂ ನೆನಸಿದ್ದರೇ?

"ಅಂದರೆ ಅವರಿಷ್ಟ ಏನು ವೆಂಕು?"

ಅದು ತನಗೆ ಹೇಗೆ ತಿಳಿಯಬೇಕು ಎಂದುಕೊಂಡಳು ವೆಂಕಮ್ಮ. ಅಂತೂ ಒಟ್ಟಿನಲ್ಲಿ ತಾನು ಅವರಿಗೆ ಬೇಡವಾದಳು ಗಂಡ ಬಿಟ್ಟು ಬಿಟ್ಟ ಹೆಂಡತಿ....ಅವರೇನು-ಗಂಡಸರು, ಇನ್ನೊಬ್ಬಳನ್ನು ಮದುವೆ ಯಾಗುತ್ತಾರೆ.

'ನಿನ್ನನ್ನು ಮದುವೆಯಾದ ಹಾಗೆಯೇ ಅವಳನ್ನೂ ಮದುವೆ ಯಾಗುತ್ತಾರೆಯೇ?'

ಅವಳ ಮನಸ್ಸು ಕೇಳಿತು.

"ಎಲ್ಲಾದರೂ ಉಂಟೇ? ಹಾಗಾಗುವುದಾಗಿದ್ದರೆ ತಾನೇಕೆ

ಅವರಿಗೆ ಬೇಡವಾದವಳಾಗಬೇಕಿತ್ತು ? ತನ್ನಂತೆಯೇ ವರದಕ್ಷಿಣೆ ಯಿಲ್ಲದ ಹುಡುಗಿಯನ್ನು ಅವರು ಖಂಡಿತ ಕೈಹಿಡಿಯುವುದಿಲ್ಲ"

"ಅಂದರೆ, ವರದಕ್ಷಿಣೆ ಕೊಟ್ಟರೆ ಯಾವ ಹುಡುಗಿಯನ್ನಾದರೂ ಮದುವೆಯಾಗುತ್ತಾರೆ ಅಲ್ಲವೇ ?"

"ಓಹೋ ! ಅವರಿಗೆ ಬೇಕಾದ್ದು ಬರಿಯ ಹೆಣ್ಣಲ್ಲ; ಹೆಣ್ಣಿನ ಜೊತೆಗೆ ಸಾವಿರಗಟ್ಟಲೆ ಹಣ!!"

"ಹಾಗಾದರೆ ನಿನ್ನ ತಂದೆಯೂ ವರದಕ್ಷಿಣೆ ಕೊಟ್ಟರೆ, ನೀನೂ ಅವರಿಗೆ–ನಿನ್ನ ಗಂಡನಿಗೆ–ಬೇಕಾದವಳಾಗಬಹುದಲ್ಲವೇ ?"

"ಅದರಲ್ಲೇನು ಸಂದೇಹ?"

"ಕೈಹಿಡಿದ ನಿನ್ನನ್ನು ಚೆನ್ನಾಗಿ ಬಾಳಿಸುತ್ತಾರಲ್ಲವೇ ?"

"ನಿಜ, ನಿಜ"

ವಿಚಾರಾವಲೋಕನದಲ್ಲಿ ಮುಟ್ಟಿದ ಗುರಿ ಅದು ಚಿಕ್ಕಮ್ಮನ ಪ್ರಶ್ನೆಗೆ ಉತ್ತರ ಅದು. ತನ್ನ ಬಾಳನ್ನು ಬೆಳಗುವ ಸಂಜೀವಿನಿ ಅದು– ವರದಕ್ಷಿಣೆ....ವರದಕ್ಷಿಣೆ .. ಸಾವಿರಗಟ್ಟಲೆ ವರದಕ್ಷಿಣೆ !

ವಿಚಿತ್ರ ಸೊಬಗಿನ ವಿಚಾರತರಂಗದಲ್ಲಿ ಮೈಮರೆತಿದ್ದ ಆಕೆ ಚಿಕ್ಕಮ್ಮನ ಪ್ರಶ್ನೆಗೆ ಉತ್ತರವಿತ್ತಿರಲಿಲ್ಲ. ಅದನ್ನು ಕಂಡು ಮತ್ತೊಮ್ಮೆ ತಾನೇ ಮಾತನಾಡಿದರು ಚಿಕ್ಕಮ್ಮ :

"ಮುಖ್ಯ ವರದಕ್ಷಿಣೆ ಕೊಡಲಿಲ್ಲವೆಂದು ತಾನೇ ಇಷ್ಟು ರಂಪ?"

ಅವರು ಯೋಚಿಸಿ ಯೋಚಿಸಿ ಆ ಉತ್ತರವನ್ನು ಕಂಡು ಹಿಡಿದಿದ್ದರೇನೋ ?

"ಹೌದು ಚಿಕ್ಕಮ್ಮ"

ತಾಯಿ-ಮಗಳು ಮೌನವಾದರು. ಚಿಕ್ಕಮ್ಮನ ಮನಸ್ಸು ನೆನಪಿನ ಲೋಕಕ್ಕೆ ಓಡಿತು....

ತಾರುಣ್ಯದ ಲಾವಣ್ಯದಲ್ಲಿ ಲಜ್ಜೆಯಮೂರ್ತಿಯಾಗಿ ಹೆಜ್ಜೆಯ ಮೇಲೆ ಹೆಜ್ಜೆಯಿಡುತ್ತಾ, ಗಂಡನಾಗಿದ್ದವನ ಮುಂದೆ ಬಾಗಿ ಉದ್ಧಂಡ ನಮಸ್ಕಾರ ಮಾಡಿದ್ದ ಆ ದಿನ........

... ಅನಂತಯ್ಯ ಹೆಣ್ಣು ನೋಡಲು ಬಂದಿದ್ದರು, ಕಾಲಕ್ಕೆ ತಕ್ಕ ಹಾಗೆ ಕಿವಿಯಲ್ಲಿ ಕನಕದ ಕಡಕು, ಕೊರಳಿಗೆ ಹಾಕಿಕೊಂಡಿದ್ದ ಖಣ

ಖಣ ಮಿಂಚುವ ಭಂಗಾರದ ಚೈನು, ಜರತಾರಿಯ ಪಂಚೆಯುಟ್ಟು, ಬಿಳಿಯ ಕೋಟು ತೊಟ್ಟು, ಅಂಗೈ ಅಗಲ ಜರೀಪಟ್ಟಿಯ ರುಮಾಲು ಇಟ್ಟುಕೊಂಡು, ಮದುವೆಯ ಗಂಡಾಗಲಿದ್ದ ತಾನು ಜಮೀನುದಾರರ ಮಗನೆಂದು ತಮ್ಮ ವಸ್ತ್ರಭೂಷಣಗಳಿಂದಲೇ ಸಾರುತ್ತಿದ್ದರು ಅನಂತಯ್ಯ. ಹುಡುಗಿಯ ಬಾಯಲ್ಲಿ ಹಾಡು ಹೇಳಿಸಿ ಎಂದು ಅವರು ಕೇಳಲಿಲ್ಲ. ಮನೆಕೆಲಸ ಬರುತ್ತದೆಯೇ?–ಎಂದೂ ಅವರು ಪ್ರಶ್ನಿಸಲಿಲ್ಲ. ಅವರು ಕೇಳಿದ್ದು ಒಂದೇ ಒಂದು ಮಾತು....

"ವರದಕ್ಷಿಣೆ........"

ಅದೂ ಎಷ್ಟು? ನೂರೇ–ಸಾವಿರವೇ?"

–ಮೂರು ಸಾವಿರ !

ಅದು ತೀರ ಕಮ್ಮಿ ಎಂದೇ ಅನಂತಯ್ಯನವರ ಭಾವನೆ. ತನ್ನ ಸಿರಿವಂತಿಕೆಗೆ ಆ ಹಣ ಅತಿ ಕಡಿಮೆಯ ಗೌರವವೆಂದು ಅವರ ವಾದ. ಆದರೆ ಹುಡುಗಿ ಚೆನ್ನಾಗಿದ್ದಳು ಅವಳನ್ನು ಬಿಡುವ ಮನಸ್ಸಿಲ್ಲ. ಇನ್ನು ಹೆಚ್ಚು ವರದಕ್ಷಿಣೆ ಕೇಳಿದರೆ ಹೆಣ್ಣಿನ ತಂದೆ ಕೊಡಲು ಶಕ್ತನಲ್ಲ. ಎಂತಲೇ ಅವರು ಯೋಚಿಸಿ ಯೋಚಿಸಿ ಮೂರೇ ಮೂರು ಸಾವಿರ ಕೇಳಿದ್ದರು !

ತಂದೆಗೆ ಒಬ್ಬಳೇ ಮಗಳಾಗಿ ಹುಟ್ಟಿದ್ದಳು ಆಕೆ. ಬೇರೆ ಗಂಡು ಮಕ್ಕಳೂ ಇಲ್ಲ. ಚಿಕ್ಕಂದಿನಲ್ಲಿಯೇ, ತಾಯಿಯನ್ನು ಕಳೆದುಕೊಂಡಿದ್ದ ಹುಡಗಿಯನ್ನು ಕೊರಗು ತಟ್ಟದೆ ಒಳ್ಳೆಯ ಶಿಕ್ಷಣದಲ್ಲಿಯೇ ಬೆಳಸಿದ್ದರು. ತಮಗೆ ಸರ್ವಸ್ವವೂ ಅವಳೇ. ಅವಳು ಚೆನ್ನಾಗಿ ಬಾಳಿ ಬದುಕುವುದೇ ಅವರಿಗೆ ಬೇಕಾಗಿರುವುದು. ತಮ್ಮದೇನು ಒಂಟಿ ಜೀವ ; ಎಲ್ಲೋ ಕಳೆದರಾಯಿತು ಎಂದು ಪರಿಪರಿಯಾಗಿ ಆಲೋಚಿಸಿದರು

ಅನಂತಯ್ಯನವರಿಗೆ ಅದು ಎರಡನೆ ಮದುವೆ ಎಂದು ಆ ತಂದೆಗೆ ತಿಳಿದಿತ್ತು. ಮೊದಲನೆ ಹೆಂಡತಿಯ ಇಬ್ಬರು ಮಕ್ಕಳನ್ನು ನೋಡಿ ಕೊಳ್ಳುವುದು ತಮ್ಮ ಮಗಳಿಂದ ಸಾಧ್ಯವೇ ಎಂದೂ ಯೋಚಿಸಿದರು. ಚಿಕ್ಕಂದಿನಿಂದ ಶಿಕ್ಷಣದಲ್ಲಿ ಬೆಳೆದಿದ್ದ ಮಗಳ ಸತ್ವಗುಣ ಸವತಿಯ ಮಕ್ಕಳ ಪೋಷಣೆ ಸಾಧ್ಯವೆಂದು ಭರವಸೆ ನೀಡಿತು

ಆದರೆ ಮೂರು ಸಾವಿರ ವರದಕ್ಷಿಣೆ ?

ಅದೇ ದೊಡ್ಡ ಪ್ರಶ್ನೆ!

ಕೊಟ್ಟರೆ ಮಗಳು ಚೆನ್ನಾಗಿ ಬದುಕುತ್ತಾಳೆ ತಪ್ಪಿದರೆ ಈ ಸಂಬಂಧ, ಬೇರೊಂದು ಕೈಗೂಡುವುದು ಯಾವಾಗಲೋ ಏನೋ? ಹುಡುಗಿ ಬೆಳೆದು ನಿಂತಿದ್ದಾಳೆ. ಮದುವೆಯಿಲ್ಲದೆ ಮೈ ನೆರೆದುನಿಂತಿರುವ ಮಕ್ಕಳನ್ನು ಕಂಡರೆ ಮಠದವರ ಕಣ್ಣು ಸುಮ್ಮನಿರುವುದಿಲ್ಲ. 'ಧರ್ಮ ಧರ್ಮ' ಎಂದು ಎದೆಯಿರಿಯುವಂತೆ ಕೂಗಿ ಕರ್ಮದ ಕಡೆಗೆ ಕೈತೋರಿಸುತ್ತಾರೆ; ಬಹಿಷ್ಕಾರ ಎನ್ನುತ್ತಾರೆ! ಸಮಾಜದ ಸೋಗಲಾಡಿ ಸಭ್ಯರ ಕಣ್ಣು ಆ ಹೆಣ್ಣಿನಮೇಲೆ ಬೀಳುತ್ತದೆ. ಅವರ ಹೊರೆ ಹೊರೆ ಹೊನ್ನಿನ ಆಸೆ ಹೆಣ್ಣಿನ ಬಾಳಿನ ಬಣ್ಣವನ್ನು ಕೆಡಿಸಿ ಮಣ್ಣಿನ ಪಾಲು ಮಾಡುತ್ತದೆ.

....ಹೆಣ್ಣು ಹೆತ್ತವರ ಪಾಡು....ಮಣ್ಣಿಗೆ ಕರೆಯುವ ಹಾಡು.

ತಂದೆ ತುಂಬ ಯೋಚಿಸಿದರು. ಕೊನೆಗೆ ಹೊಲಗದ್ದೆ ಮಾರುವುದೆಂದು ನಿಶ್ಚಯವಾಯಿತು

"ಮದುವೆ ವಿಜೃಂಭಣೆಯಿಂದ ಚೆನ್ನಾಗಿ ಮಾಡಬೇಕು"

ಎರಡನೇ ಸಂಬಂಧ ಬೆಳೆಸಲು ಬಂದ ಅನಂತಯ್ಯ ಸಿದ್ಧಾರ್ಕ್ಷಿಣ್ಯವಾಗಿ ಷರತ್ತು ಹಾಕಿದರು

ದಿಕ್ಕುಗಾಣದ ತಂದೆ ಎಲ್ಲ ಆಸ್ತಿಯನ್ನೂ ಮಾರಿದರು ಮೂರು ಸಾವಿರ ಕೇಳಿದ ವರನಿಗೆ ನಾಲ್ಕು ಸಾವಿರ ಕೊಟ್ಟರು ಇದ್ದ ಮನೆಯನ್ನೂ ವಿಕ್ರಯಮಾಡಿ ಮದುವೆಯನ್ನು ವಿಜೃಂಭಣೆಯಾಗಿಯೇ ಮಾಡಿಬಿಟ್ಟರು

ಆದರೆ ಗಂಡನ ಮನೆಗೆ ಬಂದ ಹುಡುಗಿ ಸುಖಪಟ್ಟಳೇ? ಹೆಸರಿಗಾಗಿ ಹೆಂಡತಿಯಾದರೂ ಕೈಹಿಡಿದವನ ಕಣ್ಣಿಗೆ ಕೆಸರಾಗಿಯೇ ಕಂಡಳು. ಸಿರಿವಂತಿಕೆಯ ಅಟ್ಟಹಾಸದ ತುಟ್ಟತುದಿಯನ್ನೇರಿದ ಅನಂತಯ್ಯ, ಊರಿನ ನಾಯಕಸಾನಿಯ ನಟನೆಗೆ ವಿಟರಾಗಿದ್ದರು. ವರದಕ್ಷಿಣೆಯ ಆ ನಾಲ್ಕು ಸಾವಿರ ನಾಣ್ಯ ಝಣಂಕರಿಸುತ್ತಾ 'ಗಿಲು ಗಿಲು' ಗೆಜ್ಜೆಯ ನಾದಕ್ಕೆ ಪ್ರತಿಫಲವಾಗಿ ಹೋಯಿತು ಜೊತೆಗೆ ಅನಂತಯ್ಯನವರ ಆಸ್ತಿಯೂ ಕರಗುತ್ತಾ ಬಂತು.

ಕೈಹಿಡಿದ ಹುಡುಗಿ ಕಣ್ಣೀರು ಸುರಿಸುವಂತಾಯಿತು. ಹೆಣ್ಣು

ಕೊಟ್ಟ ಸೂವ ಅಳಿಯನ ಬಣ್ಣ ಬಯಲಾದಾಗ ಭೂಮಿಗಿಳಿದು ಹೋದರು. ಮಗಳ ಬಾಳು ಬಾಡಿದ ಕುಸುಮದಂತಾದುದನ್ನು ಕಂಡು ಕೊರಗಿ ಕೊರಗಿ ಕಣ್ಣು ಮುಚ್ಚಿಕೊಂಡರು.

ಆದರೆ ಅಷ್ಟರಲ್ಲಿ ಅನಂತಯ್ಯನವರ ಕಣ್ಣು ತೆರೆಯಿತು. ಇದ್ದಕ್ಕಿದ್ದಂತೆ ಒಂದು ರಾತ್ರಿ ನಡೆದ ನಾಯಕಸಾನಿಯ ಕೊಲೆ, ಅವರಿಗೆ ಕೈಹಿಡಿದವಳ ನೆನಪು ತಂದುಕೊಟ್ಟಿತು. ಶಾಪಗ್ರಸ್ತರಾಗಿ ದೀಪವಿಲ್ಲದ ಪಾಪಕೂಪದಲ್ಲಿ ಬಿದ್ದು, ಅಪರಾಧದ ಹೊರೆಹೊತ್ತು ಎಚ್ಚರತಪ್ಪಿದ್ದ ಅವರು ಕೈಹಿಡಿದವಳ ಕಾರುಣ್ಯಭಾವದ ಪ್ರೇಮಪೂರ್ಣೆಯ ಸುಗಂಧ ಯುಕ್ತ ಧೂಪದಿಂದ ಎಚ್ಚೆತ್ತರು. ಮಂಗಳಸೂತ್ರದ ಕೊರಳಿನೊಳಡಗಿದ್ದ ವಾತ್ಸಲ್ಯದ ಕರುಳು ಅವರನ್ನಪ್ಪಿಕೊಂಡ ಆದಿನ ಅವರು ಆಕೆಯ ಕಣ್ಣುಗಳಲ್ಲಿ ಹೊಸ ಸಂದೇಶದ ಬೆಳಕು ಕಂಡರು.

ಹೊಸ ಮನುಷ್ಯರಾದರು ಅನಂತಯ್ಯ

ತಾನು ಮದುವೆಯಾಗುವ ಮುನ್ನವೇ-ಅದೇ ಹೊಸತನ ಅವರಲ್ಲಿದ್ದಿದ್ದರೇ ?

ಅವರು ವರದಕ್ಷಿಣೆ ಕೇಳುತ್ತಿದ್ದರೇ ?

ತನ್ನ ತಂದೆ ಇದ್ದಬದ್ದ ಆಸ್ತಿಯನ್ನೆಲ್ಲಾ ಮಾರುತ್ತಿದ್ದರೇ ?

ದರಿದ್ರರಾಗಿ ಕೊರಗಿ ಕೊರಗಿ ಕಣ್ಣು ಮುಚ್ಚಿಕೊಳ್ಳುತ್ತಿದ್ದರೇ ?

ಇದಾವುದೂ ಆಗುತ್ತಿರಲಿಲ್ಲವೆಂದೇ ಆಕೆಯ ನಂಬಿಕೆ. ತಲೆತಲಾಂತರಗಳಿಂದ ಈ ವರದಕ್ಷಿಣೆಯ ಪದ್ಧತಿ ತಲೆಗಳುರುಳಿಸುವ ಹೊಲೆಗೆಲಸದವರೆಗೂ ಮಲೆತು ಬಲಿತಿವೆಯೆಂಬುದನ್ನು ಯೋಚಿಸಿ, ಯೋಚಿಸಿ ತೀರ್ಮಾನಿಸಿಕೊಂಡರು ಚಿಕ್ಕಮ್ಮ

ಹೌದು, ಈಗ ಅದೇ ವರದಕ್ಷಿಣೆಯ ವಕ್ರವದನವೇ ತನ್ನ ಮಗಳ ಬಾಳನ್ನು ಕಾಳರಾತ್ರಿಯನ್ನಾಗಿ ಮಾಡುತ್ತಿದೆ. ಒಲ್ಮೆಯಿಂದ ಬಳುಕುತ್ತಿರುವ ಬಕುಳ ಪುಷ್ಪವಾಗಬೇಕಾದ ಬಾಳನ್ನು ವರದಕ್ಷಿಣೆಯ ಬಳುವಳಿಯ ಬಿಸಿಲಿನ ಬೇಗೆ ಬಾಡಿಸುತ್ತಿದೆ ಹೀಗೆಯೇ ಬಿಟ್ಟರೆ ಅದು ಬಾಡುವುದು ಖಂಡಿತ. ಅದಕ್ಕೆ ನೆಳು ಕಟ್ಟಬೇಕು-ತರಳೆಯ ಬಾಳು ತರಗಾಗದಂತೆ ನೆರಳು ಕಟ್ಟಲೇಬೇಕು

ನೆನಪಿನ ಲೋಕದಿಂದ ನಿಜಲೋಕಕ್ಕೆ ನಡೆದು ಬಂದರು

ಚಿಕ್ಕಮ್ಮ. ಕ್ಷಣಕಾಲ ಬೇಡಾಗಿದ್ದ ಹೂವಿನ ಹೃದಯ ಮರಳಿ ಪರಿಮಳಿಸುವ ಹೂವೇ ಆಯಿತು; ಆದರೊಡನೆ ಮಧುರ ಸೌರಭದ ಮಲ್ಲಿಗೆಯ ಮನಸ್ಸು ಜತೆಗೂಡಿ ಅಪಾರ ವಾತ್ಸಲ್ಯದ ಅಪೂರ್ವ ಮಾಲೆಯಾಗಿ ಶೋಭಿಸಿತು.

"ಆಗಲಿ, ಏಳಮ್ಮ ಪುಟ್ಟ"

ಎಂದರು ತುಂಬಿದ ಹೃದಯದಿಂದ. ವೆಂಕಮ್ಮ ತಾಯಿಯ ಎದೆಯಲ್ಲಿ ಹುದುಗಿಸಿದ್ದ ಮುಖವನ್ನು ಹೊರತೆಗೆದು, ಆಕೆಯ ಮುಖವನ್ನು ನೋಡಿದಳು ಅಲ್ಲಿ ಆಕೆಗೆ ಕಂಡುದು ತಾಯಿಯಲ್ಲ—ವರದಾಯಕಿಯಾದ ದೇವಿ!

"ನಿಮ್ಮ ತಂದೆ ಊರಿಗೆ ಬರಲಿ, ಯೋಚಿಸೋಣ. ನೀನೇನೂ ಚಿಂತಿಸಬೇಡ. ನಾನಿರುವಾಗ ನೀನೇಕೆ ದುಃಖಿಸಬೇಕು?"

ಚಿಕ್ಕಮ್ಮನ ಮಾತು ಕೇಳಿದಾಗ—

"ಹೌದು, ನಿನ್ನಂತಹ ದೇವಿಯ ಸಮಾನಳಾದ ತಾಯಿ ಇರುವಾಗ ನಾನೇಕೆ ಅಳಬೇಕು?"

ಎಂದು ತನ್ನಷ್ಟಕ್ಕೆ ತಾನೇ ಅಂದುಕೊಂಡಳು ವೆಂಕಮ್ಮ. ಚಿಕ್ಕಮ್ಮನ ಮಾತು ಇನ್ನೂ ಮುಂದುವರೆಯಿತು:

"ನಿನ್ನ ಕಷ್ಟ ನನ್ನ ಕಷ್ಟವೇ ಅಲ್ಲವೇ ವೆಂಕು. ನಾನು ಬೇರೆ-ನೀನು ಬೇರೆ ಎಂದು ತಿಳಿದುಕೊಂಡೆಯಾ? ದೇವರ ಮೇಲೆ ಭಾರ ಹಾಕಿ ಸುಮ್ಮನಿರು. ಎಲ್ಲಾ ಒಳ್ಳೆಯದಾಗುತ್ತದೆ."

ಅದೇ ಸರಿ ಎಂದುಕೊಂಡಳು ವೆಂಕಮ್ಮ

ಆದರೆ ಆಕೆಗೆ ಇನ್ನೂ ಸಂದೇಹವಿತ್ತು-ಗಂಡನಂತಹ ಗಂಡಸರ ಮೇಲೆ!

"ನಿಮ್ಮ ತಂದೆ ಊರಿಗೆ ಬರಲಿ" ಎಂದಿದ್ದರು ಚಿಕ್ಕಮ್ಮ. ಅವರು ಬಂದರೆ ತನ್ನ ಸ್ಥಿತಿಯನ್ನು ನೋಡಿ ಏನನ್ನಬಹುದು? ಹೇಗೆ ಯೋಚಿಸಬಹುದು?

ಅವರೂ ಗಂಡಸರೇ ಅಲ್ಲವೇ? ತನ್ನಂತಹ ಹೆಣ್ಣಿನ ಮನಸ್ಸನ್ನು ಅರ್ಥಮಾಡಿಕೊಳ್ಳುವ ತಾಳ್ಮೆಯ ಹೃದಯ ಅವರಿಗಿದೆಯೇ? ಅದೂ ತನ್ನ ತಂದೆ ಅನಂತಯ್ಯ.... ಚಮತ್ಕಾರ ಚತುರರಾದರೂ ಒರಟು

ಸ್ವಭಾವದವರು. ಸೇರಿಗೆ ಸವ್ವಾಸೇರು ಎಂದು ಸವಾಲುಹಾಕುವ ಸಮ ಮೀರಿದ ಶಕ್ತಿಯ ವ್ಯಕ್ತಿ. ಹಣ ಎಣಿಸಲು ಗೋಣಗಾಡುತ್ತ, ಹಿಂದು ಮುಂದು ನೋಡದೆ ರಣಾಂಗಕ್ಕಿಳಿಯಲೂ ಹೆದರದ ಒಣ ಹೃದಯದ ಕಠಿಣಾತ್ಮ....ಅನಂತಯ್ಯ !

ತೊಳಲಾಡುತ್ತಿದ್ದಳು ವೆಂಕಮ್ಮ.

ಪತಿದೇವರು ಅಗ್ರಹಾರದಲ್ಲಿ-ತಾನು ಇಲ್ಲಿ !

ಇಬ್ಬರಿಗೂ ನಲವತ್ತು ಮೈಲಿಯ ನಿಡುಹಾದಿ !

ದೂರದಲ್ಲಿದ್ದರೂ ಒಲವಿದ್ದ ಹೃದಯಗಳಾದರೆ ಹತ್ತಿರದಲ್ಲಿ ಇದ್ದಷ್ಟೇ ಸುಖದಿಂದ ಆನಂದಿಸುವುವು. ಆದರೆ ತನಗೆ ಅವರಲ್ಲಿ ಒಲವಿಲ್ಲವೇ ?

ಇಲ್ಲದೆ ಉಂಟೆ ? ತಾನು ಅವರಿಗಾಗಿ ಏನು ಮಾಡಲೂ ಸಿದ್ಧಳಾಗಿದ್ದೇನೆ. ಆದರೆ ಅವರಿಗೇ ತನ್ನ ಬಗ್ಗೆ ಒಲವಿಲ್ಲ. ಹೃದಯದಿಂದ ಬರಬೇಕಾದ ಒಲವು-ಪ್ರೀತಿ ಹಣದಿಂದ ಬರುತ್ತದೆ ಎನ್ನುತ್ತಾರೆ ಅವರು.

ಆ ಹಣ....ವರದಕ್ಷಿಣೆ....ಅದೇ ವರದಕ್ಷಿಣೆ ! ಸಿರಿಯಿಂದ ಪ್ರೀತಿ!

ಹಣ ಹಣ ಎನ್ನುತ್ತ ಝಣ ಝಣ ಎನ್ನುತ್ತ ಪರಿಪರಿ ಮೆರೆದಾಡುವ ಸಿರಿಯಿಂದ ಪ್ರೀತಿ !

–ವ್ಯಂಗ್ಯವಾಗಿ ನಕ್ಕಳು ವೆಂಕಮ್ಮ.

ಎರಡು ದಿನ ಹೀಗೆಯೇ ಮನೋಹೋರಾಟದಲ್ಲಿ ಕಳೆಯಿತು.

ಅದು ತೌರಿಗೆ ಬಂದ ಮೂರನೇ ದಿನ.

ಆ ಸಂಜೆ ಅನಂತಯ್ಯ ಒಂದು ಜೊತೆ ಎತ್ತುಗಳನ್ನು ಹೊಡೆಸಿಕೊಂಡು ಆಳಿನೊಡನೆ ಊರಿಗೆ ಬಂದರು. ಮಗಳನ್ನು ಕಂಡು ಸಂತೋಷಗೊಂಡರು. ಆದರೆ ಆ ಸಂತೋಷ ಎಷ್ಟುಹೊತ್ತಿನವರೆಗೆ ಇದ್ದಿತು ?

ರಾತ್ರಿ ಊಟವಾಗಿ ತಾಂಬೂಲ ಚರ್ವಣ ಮಾಡುತ್ತಿರುವಾಗ ವೆಂಕಮ್ಮನ ವಿಷಯ ವಿಸ್ತೃತವಾಯಿತು. ಚಿಕ್ಕಮ್ಮ ಮಗಳ ಬಾಳುವೆಯನ್ನು ಬಣ್ಣಿಸಿದರು. ಅಳಿಯದೇವರ ಕ್ರೋಧದ ಕಾರಣವನ್ನು ವಿವರಿಸಿದರು.

ಅನಂತಯ್ಯನವರ ಕಣ್ಮುಂದೆ ನಿಚ್ಚಳವಾಗಿ ನಿಂತು ಅಣಕಿಸಿತು

ವರದಕ್ಷಿಣೆಯ ಭೂತ ! ಮಗಳನ್ನು ಕಂಡಾಗ ಆದ ಸಂತೋಷ ಇದೀಗ ಮಾಯವಾಯಿತು. ಚಿತ್ತದಲ್ಲಿ ನೆರೆದ ಚಿಂತೆಯ ಸಂತೆ ಗುಜುಗುಜು ಗೊಂದಲವೆಬ್ಬಿಸಿತ್ತು. ಅದರ ಪರಿಣಾಮ ಅವರ ತಾಳ್ಮೆಯ ನೆಲೆಗಟ್ಟು ಒಡೆಯಿತು; ರೋಷದ ಬುಗ್ಗೆ ಚಿಮ್ಮಿತು. ಮುಖದಲ್ಲಿ ರೌದ್ರತೆ ಲಾಸ್ಯವಾಡಿತು.

"ಮದುವೆಗೆ ಮೊದಲೇ ಹೇಳಿದ್ದೆನಲ್ಲ–ವರದಕ್ಷಿಣೆ ಕೊಡುವುದಿಲ್ಲ ವೆಂದು. ಆಗ ಒಪ್ಪಿಕೊಂಡಿದ್ದೇನು ?–ಈಗ ಹೀಗೆ ಹೇಳುವುದೇನು ?"

"ಆಡಿದ ಮಾತನ್ನು ಎಷ್ಟು ಜನ ಉಳಿಸಿಕೊಳ್ಳುತ್ತಾರೆ ?"

ಚಿಕ್ಕಮ್ಮ ಸಹಾನುಭೂತಿಯ ಸಮಾಧಾನವನ್ನು ಉಭಯರಿಗೂ ಅನ್ವಯಿಸುವಂತೆ ನುಡಿದರು.

"ಇದೇ ಮಾತನ್ನು ಅವನು ಆಗಲೇ ಹೇಳಿದ್ದರೆ, ನಾನು ಅವನಿಗೆ ಹೆಣ್ಣನ್ನೇ ಕೊಡುತ್ತಿರಲಿಲ್ಲ"

"ನೀವು ಹಾಗೆ ಮಾಡುತ್ತೀರೆಂದೇ ಅವರು ಆಗ ಕೇಳಲಿಲ್ಲ."

"ಅಯೋಗ್ಯ! ತಾಲಿ ಕಟ್ಟುವಾಗ ಎಲ್ಲಿಗೆ ಹೋಗಿತ್ತು ಈ ಬುದ್ಧಿ ?"

"ಇನ್ನು ಏನು ಹೇಳಿದರೆ ಏನು ಪ್ರಯೋಜನ ?"

ಚಿಕ್ಕಮ್ಮನ ಮಾತು ನಿರಾಸೆಯಿಂದ ತುಂಬಿತ್ತು. ಅನಂತಯ್ಯ ನವರಿಗೆ ಆ ಮಾತು ನಿಜವೆನಿಸಿತು ಆದರೂ ಮನಸ್ಸಿನಲ್ಲಿ ಏನನ್ನೋ ಸಾಧಿಸುವುದು ಸಾಧ್ಯವಿದೆ ಎಂದು ಹಂಚಿಕೆ ಹೂಡುತ್ತಿತ್ತು.

"ನಾಳೆಯೇ ಅವನಿಗೆ ಕಾಗದ ಬರೆಯುತ್ತೇನೆ" ಎಂದು ಅವರು ಮಾತು ಮುಗಿಸಿದರು. ಆದರೆ ಅವರ ಮನಸ್ಸು ಇನ್ನೂ ಮಾತ ನಾಡುತ್ತಿತ್ತು—ಅವರೊಬ್ಬರಿಗೆ ಮಾತ್ರ ಕೇಳಿಸುವಂತೆ !

ಆ ರಾತ್ರಿಯೆಲ್ಲಾ ಅದೇ ಚಿಂತೆ....

ವೆಂಕಮ್ಮ—ನಾಗಪ್ಪ—ವರದಕ್ಷಿಣೆ !

ಯಾರು ಮೊದಲು ? ಯಾವುದು ಕೊನೆ ?

ವರದಕ್ಷಿಣೆ—ನಾಗಪ್ಪ—ವೆಂಕಮ್ಮ

ಹೊನ್ನು—ಹೆಣ್ಣು ; ಅದನ್ನಾಳಲು ಒಬ್ಬ ದಣಿ.

ವಿಚಿತ್ರ ದ್ವೀಪದ ಮೂರು ಮೂಲೆ ! ನಿದ್ರೆಯಿಲ್ಲದೆ ಅನಂತಯ್ಯ ಹೊರಳಾಡಿದರು.

ವೆಂಕಮ್ಮನಿಗಂತೂ ಗಂಡನ ಚಿಂತೆಯೇ—

ಪಾಪ ಅವರೇನಾದರೋ—ಎಲ್ಲಿ ಮಲಗಿದ್ದಾರೋ, ಊಟಕ್ಕೇನು ಮಾಡಿಕೊಂಡರೋ ಎಂದುಕೊಂಡಳು ಆಕೆ.

ಆದರೆ ನಾಗಪ್ಪನಿಗೇನೂ ವೆಂಕಮ್ಮನ ಚಿಂತೆಯಿರಲಿಲ್ಲ. ಅಷ್ಟ ಗ್ರಾಮದಿಂದ ಮರಳಿದ ದಿನವೇ ಗೌಡರೂ, ಶಾನುಭೋಗರೂ ನಾಗಪ್ಪನನ್ನೇ ಹುಡುಕಿಕೊಂಡು ಅವರ ಮನೆಗೆ ಬಂದೇಬಂದರು.

ರಜ ಬರೆಯದೆ ಬೆಂಗಳೂರಿಗೆ ಹೋದುದು ತಪ್ಪೆಂದು ಒಪ್ಪಿಕೊಂಡರು ನಾಗಪ್ಪ. ಹೆಂಡತಿಯನ್ನು ತೌರಿಗೆ ಬಿಟ್ಟು ಬಂದುದನ್ನೂ ಹೇಳಿದರು. ಆದರೆ ಅದಕ್ಕೆ ಕಾರಣವನ್ನು ಮಾತ್ರ ಹೇಳಲಿಲ್ಲ ಶಾನುಭೋಗರಿಗಾಗಲಿ—ಗೌಡರಿಗಾಗಲಿ ಆ ವಿಷಯವನ್ನು ಹೆಚ್ಚು ಕೆದಕಿ ಕೇಳುವ ಮನಸ್ಸೂ ಇರಲಿಲ್ಲ; ನಾಗಪ್ಪನವರಿಗೆ ಹೇಳುವ ಧೈರ್ಯವೂ ಇರಲಿಲ್ಲ!

ಕೊನೆಗೆ 'ಮುಂದೇನು?' ಎಂಬ ಪ್ರಶ್ನೆ ಬಂದಿತು. ಮೂರು ತಿಂಗಳ ಜೀವನ ಹೇಗೆ ಎಂಬ ಸಮಸ್ಯೆ ಸುಳಿಯಿತು.

ಮೂವರೂ ಯೋಚಿಸಿದರು....

ಗೌಡರೂ ಶಾನುಭೋಗರೂ ಮೊದಲೇ ಪರಿಹಾರ ಹುಡುಕಿಟ್ಟಿದ್ದರು ಆದರೆ ನಾಗಪ್ಪನವರು ಆ ವಿಷಯದ ಬಗ್ಗೆ ಏನು ಯೋಚಿಸಿದ್ದಾರೆಂದು ತಿಳಿಯುವ ಕುತೂಹಲ ಅವರಿಗೆ.

ನೌಕರಿ ಹೋದ ವಿಷಯವನ್ನೂ, ಅದನ್ನು ಮತ್ತೆ ದೊರಕಿಸಿಕೊಳ್ಳುವ ಉಪಾಯವನ್ನೂ ಕುರಿತು ಯೋಚಿಸುವುದಕ್ಕೆ ಅವರಿಗೆ ಬಿಡುವೆಲ್ಲಿದೆ?–ವರದಕ್ಷಿಣೆ ವಸೂಲು ಮಾಡುವ ಉಪಾಯವೇ ಇನ್ನೂ ಸಂಪೂರ್ಣ ಬಗೆಹರಿಯದಿರುವಾಗ!

ಅವರು ಮಾತನಾಡದೆ ತಲೆ ತಗ್ಗಿಸಿ ಕುಳಿತಿದ್ದರು ಮರುದಿನ ನಿಂಗನ ಹಳ್ಳಿಯ ನಾಲ್ಕು ಮಂದಿ ಗಣ್ಯ ಗ್ರಾಮಸ್ಥರನ್ನು ಕರೆದುಕೊಂಡು ಇನ್ಸ್‌ಪೆಕ್ಟರ್ ಸಾಹೇಬರನ್ನು ಕಾಣುವುದೆಂದು ನಿಶ್ಚಯಿಸಿದರು ಗೌಡರು. ಶ್ಯಾನುಭೋಗರು ತಾವೂ ಜೊತೆಗೆ ಬರುವುದಾಗಿ ಮಾತುಕೊಟ್ಟರು. ನಾಗಪ್ಪನವರಿಗೆ ತಮ್ಮ ನೌಕರಿಯ ಬಗ್ಗೆ ಒಣಗಿ ಹೋಗಿದ್ದ ಆಸೆ ಮತ್ತೆ ಚಿಗುರಿತು.

ಅದೇ ರಾತ್ರಿ ಅಲ್ಲಿನ ವಿದ್ಯಮಾನಗಳನ್ನೆಲ್ಲ ವಿವರಿಸಿ, ವೆಂಕಮ್ಮ ನನ್ನು ತೌರಿನಲ್ಲಿ ಬಿಟ್ಟು ಬಂದ ಸಂಗತಿಯನ್ನೂ ಸೇರಿಸಿ, ಬೆಂಗಳೂರಿನಲ್ಲಿದ್ದ ನಾರಾಯಣನಿಗೊಂದು ಕಾಗದ ಬರೆದರು. ಮರುದಿನ ಅದನ್ನು ಅಂಚೆಗೆ ಹಾಕುವ ನಿಶ್ಚಯಮಾಡಿ ಮಲಗಿದರು

ಹೋದ ನೌಕರಿ ಮತ್ತೆ ಸಿಕ್ಕುವ ಹಾಗಿದೆ–ಆದರೆ ಬಿಟ್ಟುಬಂದ ಹೆಂಡತಿ ಮತ್ತೆ ಬರುವಳೇ ? ಬಂದರೆ ಅವಳೊಡನೆ ವರದಕ್ಷಿಣೆಯೂ ಬರುವುದೇ ? ವರದಕ್ಷಿಣೆ ಬಂದರೆ ಸುಮಾರು ಎಷ್ಟು ಬರಬಹುದು ?

ತನಗೆ ಎರಡು ಸಾವಿರ ಸಾಕು !

ನಾಗಪ್ಪನವರ ಬಾಯಲ್ಲಿ ನೀರೂರಿತು. ಅವರು ತೃಪ್ತಿಯಿಂದ ಇನ್ನೆರಡು ಬಾರಿ ಜಪಿಸಿದರು... ...

"ಎರಡು ಸಾವಿರ–ಎರಡು ಸಾವಿರ !"

ಕುರುಡುಕಾಸು ಕೊಡುವುದಕ್ಕೂ ಯೋಚಿಸುವ ಅನಂತಯ್ಯ ಈಗ ಎರಡು ಸಾವಿರ ಕೊಡುವನೇ ?

ಧರ್ಮಕ್ಕೆ ಕೊಡುತ್ತಾನೆಯೇ ? ತಾನು ಅವನ ಮಗಳನ್ನು ಕಟ್ಟಿಕೊಳ್ಳುವುದಿಲ್ಲವೇ ! ಆಜೀವ ಪರ್ಯಂತ ತಾನು ಅವಳನ್ನು ಪೋಷಿಸುವುದಿಲ್ಲವೇ? ಅವಳಿಗೆ ಬೇಕಾದುದನ್ನು ತಂದು ಕೊಟ್ಟು ಸುಖಪಡಿಸುವುದಿಲ್ಲವೇ? ಅದಕ್ಕೆ ಅವನು ಕೊಡುವ ಎರಡು ಸಾವಿರ ಬಹಳ ಹೆಚ್ಚೇನು ? ಅವಳಿಗೆ ಅನ್ನ ಹಾಕಿ, ಬಟ್ಟೆಕೊಟ್ಟು ಬದುಕಿರುವವರೆಗೂ ಕಾಪಾಡುವುದಕ್ಕೆ ಎರಡು ಸಾವಿರ ರೂಪಾಯಿ ಮಾತ್ರ ಖರ್ಚಾಗುತ್ತದೆಯೆ ? ಅದರ ಎಂಟು–ಹತ್ತರಷ್ಟಾದರೂ ಬೇಕು. ಆದರೆ ತಾನು ಅಷ್ಟು ಹೆಚ್ಚು ಹಣ ಕೇಳುತ್ತಿಲ್ಲವಲ್ಲ ! ಬರೀ ಎರಡು ಸಾವಿರ–ಬಹಳ ಕಡಿಮೆ ?

ಅದನ್ನು ಕೊಡುವುದಕ್ಕೂ ಭಂಡಾಟವಾಡುತ್ತಾನೆ ಅನಂತಯ್ಯ ...... .ಆದರೆ ತಾನು ಬಿಡಬೇಕಲ್ಲ !

ನಾಗಪ್ಪ ತಮ್ಮ ವಾದವನ್ನು ಸರಿಯೆಂದು ತಾವೇ ಒಪ್ಪಿಕೊಂಡರು ತಾವು ಯಾವ ತಪ್ಪನ್ನೂ ಮಾಡಿಲ್ಲವೆಂದೇ ಅವರ ದೃಢ ನಿಶ್ಚಯ. ಅನಂತಯ್ಯ ತಮಗೆ ಅನ್ಯಾಯ ಮಾಡಿರುವರೆಂದೇ ಅವರ ನಂಬಿಕೆ. ಒಂದಲ್ಲ ಒಂದು ದಿನ ವೆಂಕಮ್ಮನಲ್ಲದಿದ್ದರೆ ಇನ್ನೊಬ್ಬ ಹುಡುಗಿ ಕೈತುಂಬ ಹಣ ಕೊಟ್ಟು ಕೈಹಿಡಿಯುವಳೆಂದೇ ಅವರ ಅಚಲ ವಿಶ್ವಾಸ;

ಗಣ್ಯ ಗೃಹಸ್ಥನಾಗಿ, ಸಮಾಜದ ಸಭ್ಯರಲ್ಲೊಬ್ಬನಾಗಿ ಮೆರೆಯುವೆನೆಂಬ ಸವಿಗನಸು........

ಮರುದಿನ ಇನ್ಸ್‌ಪೆಕ್ಟರ್ ಸಾಹೇಬರ ಭೇಟಿಯಾಯಿತು. ನಿಂಗನಹಳ್ಳಿಯ ನಿಯೋಗದವರು ನಾಗಪ್ಪನವರ ಪರವಾಗಿ ನಯವಾಗಿ ನಿವೇದಿಸಿಕೊಂಡರು. ಇದೊಂದುಬಾರಿ ಕ್ಷಮಿಸಬೇಕೆಂದು ಬೇಡಿಕೊಂಡರು. ನಾಗಪ್ಪನವರೂ ವಿನೀತರಾಗಿ ಕೈಜೋಡಿಸಿ ಬಾಗಿದರು.

ಬಡ ಉಪಾಧ್ಯಾಯನಾದರೂ ಸರ್ಕಾರಿ ನೌಕರಿ. ತಿಂಗಳು ತಿಂಗಳಿಗೆ ಸರಿಯಾಗಿ ಸಂಬಳ ಕಷ್ಟವೋ ಸುಖವೋ ಸಂಸಾರ ಸಾಗಿಸಲು ಅದೊಂದು ಆಸರೆ. ಸದ್ಯಕ್ಕೆ ಕೆಲಸ ಹಂಗಾಮಿಯಾಗಿದ್ದರೂ ಮುಂದೆ ಖಾಯಂ ಆಗುವ ಸಂಭವವಿದೆ. ಅಂತಹ ನೌಕರಿಯನ್ನು ಅವಿವೇಕದಿಂದ ಕಳೆದುಕೊಳ್ಳುವುದೇ ?

ಗೌಡರೂ ಶ್ಯಾನುಭೋಗರೂ ಹೀಗೆ ಯೋಚಿಸಿ ಯೋಚಿಸಿ ಈ ನಿಯೋಗದ ಉಪಾಯವನ್ನು ಹುಡುಕಿದ್ದರು ಅವರು ಎಣಿಸಿದ್ದಂತೆ ಅದು ಸಫಲವೇ ಆಯಿತು ಇನ್ಸ್‌ಪೆಕ್ಟರ್ ಸಾಹೇಬರು ನಿಯೋಗದವರ ಮೇಲೆ ವಿಶ್ವಾಸವಿಟ್ಟು ತಮ್ಮ ಆಜ್ಞೆಯನ್ನು ರದ್ದುಗೊಳಿಸಿದರು. ನಾಗಪ್ಪನವರಿಗೆ ಮರಳಿ ದೊರೆಯಿತು ನೌಕರಿ

ಇನ್ನು ದೊರೆಯಬೇಕಾಗಿರುವುದು - ವರದಕ್ಷಿಣೆ. ಅದರ ಜೊತೆಗೆ ವೆಂಕು....ಆಗಲೇ ಸಂಸಾರ !

ಎಂದಿನಂತೆ ಮೊದಲಾಯಿತು ಶಾಲೆಯ ಕೆಲಸ. ಅಗ್ರಹಾರದಿಂದ ನಿಂಗನಹಳ್ಳಿಗೆ, ನಿಂಗನಹಳ್ಳಿಯಿಂದ ಅಗ್ರಹಾರಕ್ಕೆ ನಡಿಗೆಯ ರೈಲು ! ಅಡಿಗೆ ಮಾಡಿಕೊಂಡರೆ ಮಾಡಿಕೊಂಡರು – ಇಲ್ಲದಿದ್ದರೆ ಉಪವಾಸ. ಗೌಡರ ಮನೆಯಲ್ಲಿ ರಾಮಕ್ಕ ನೀಡುವ ಹಾಲೇ ಕೆಲವೊಮ್ಮೆ ಆಹಾರ, ಯಾರಿಗೂ ಗೊತ್ತಾಗದಂತೆ ಅವಳು ಕೊಡುವ ಸುಖವೇ ಸಂಗಸುಖ.

ಅದೇ ಸುಖವೇ ವೆಂಕಮ್ಮನಿಂದಲೂ ಸಿಕ್ಕಿತ್ತು ರಾಮಕ್ಕನಿಗಿಂತ ಆಕೆಯೊಡನೆ ಕಳೆದ ರಾತ್ರಿಗಳು ಹೊಸ ಅನುಭವಗಳನ್ನು ಕೊಟ್ಟಿದ್ದುವು. ಇದು ಗೌಡರು ತಿಂದು ಮಿಕ್ಕ ಎಂಜಲು–ಅದು ತನಗಾಗಿಯೇ ಸೃಷ್ಟಿಯಾದ ಮೃಷ್ಟಾನ್ನ !

ಆದರೆ ವೆಂಕಮ್ಮನೊಡನೆ ಅನುಭವಿಸಿದ ಸುಖಕ್ಕೆ ಸಂತೋಷದ ಮೆರುಗಿರಲಿಲ್ಲ. ನಗೆಬೆಳದಿಂಗಳ ಸಮಯದಲ್ಲಿ ಕೋಪದ ಕತ್ತಲೆ ಮುಚ್ಚಿಕೊಂಡುಬಿಟ್ಟಿತ್ತು. ಅದಕ್ಕಾದರೂ ಕಾರಣ ವರದಕ್ಷಿಣೆ !

ಅದನ್ನು ತರಲಿಲ್ಲವೆಂದೇ ಆಕೆಯ ಮೇಲೆ ಕೋಪ ಆ ಕೋಪವೇ ಸಂತೋಷಕ್ಕೆ ಪರದೆ ಹಿಡಿಯಿತು. ಬೇಗ ಸರಿಯದ ಆ ಪರದೆ ತಮ್ಮಿಬ್ಬರನ್ನೂ ದೂರಮಾಡಿತು.

ಆಕೆ ಅಲ್ಲಿ-ತಾನು ಇಲ್ಲಿ !

ನಾಗಪ್ಪನವರು ಹಲವಾರು ಬಾರಿ ಯೋಚಿಸಿದ್ದರು. ವೆಂಕಮ್ಮನ ಮೇಲೆ ಅತಿಯಾದ ಕೋಪವಿದ್ದರೂ ಅವರ ಮನಸ್ಸು ಅವಳನ್ನು ಬಯಸುತ್ತಿತ್ತು. ಅದರಲ್ಲಿಯೂ ರಾಮಕ್ಕನೊಡನೆ ಮಲಗಿ, ಆಕೆಯನ್ನು ಆಲಂಗಿಸಿಕೊಳ್ಳುವಾಗ ವೆಂಕಮ್ಮ ಕಣ್ಣೆದುರೇ ಬಂದು ನಿಲ್ಲುತ್ತಿದ್ದಳು. ಇದ್ದಕ್ಕಿದ್ದಂತೆ ಅವರ ಮನಸ್ಸು ಅಷ್ಟಗ್ರಾಮಕ್ಕೆ ಓಡಿ, ಅವಳೊಡನೆ ಮಲಗಿ, ಅವಳ ಕೆನ್ನೆಯನ್ನು ರಮಿಸುತ್ತಿತ್ತು. ಆ ಗುಂಗಿನಲ್ಲಿ ಸದಾ ವೀಳ್ಯವನ್ನು ಜಗಿಯುವ ರಾಮಕ್ಕನ ಬಾಯಿಯ ದುರ್ವಾಸನೆಯೂ ಪರಿಮಳಯುಕ್ತವಾಗಿ ಪರಿವರ್ತಿತವಾಗುತ್ತಿತ್ತು. ಪಕ್ಕದಲ್ಲಿ ಮಲಗಿರುವವಳು ರಾಮಕ್ಕನಾದರೂ, ಆಕೆ ವೆಂಕಮ್ಮನೆಂದೇ ನಾಗಪ್ಪನವರ ಭಾವನೆ

ದಿನಗಳೆದಂತೆ ಹೆಂಡತಿಯ ಕಡೆಗೆ ಮನಸ್ಸು ಓಡುತ್ತಿತ್ತು. ಹೊತ್ತು ಹೊತ್ತಿಗೆ ಆಹಾರವಿಲ್ಲದೆ ಕೃಶರಾಗುತ್ತಿದ್ದರು ನಾಗಪ್ಪ. ರಾಮಕ್ಕನ ತಾಯ್ತನದ ದಾಹ ಅವರ ರಕ್ತವನ್ನು ಹೀರುತ್ತಿತ್ತು.

ಎರಡು ವಾರಗಳ ನಂತರ ಒಂದು ಕಾಗದ ಬಂದಿತು. ಅದು ಅನಂತಯ್ಯನವರ ಕಾಗದ ಸಣ್ಣಕ್ಷರದಲ್ಲಿ ಒತ್ತೊತ್ತಾಗಿ ಕೊರೆದಿದ್ದ ಕೈಬರಹ.

ನಾಗಪ್ಪನವರು ತುಂಬ ಆಸಕ್ತಿಯಿಂದ, ಹುಮ್ಮಸ್ಸಿನಿಂದ ಓದ ತೊಡಗಿದರು ಮುಖದಲ್ಲಿ ಮೂಡುತ್ತಿತ್ತು ಅಸಹನೆ. ಅವಹೇಳನವನ್ನು ಸಹಿಸಲಾರದೆ ಅಸಹ್ಯದೃಷ್ಟಿ ಬೀರಿತು ಕಣ್ಣು. ಸಹಿಸಲಾರದ ಅವಮಾನವಾಗುತ್ತಿದೆಯೆಂದು ಹಣೆಯಮೇಲಿನ ಬೆವರುಹನಿ ಹೇಳಿತು; ಏಕೋ ಕಿವಿಗಳು ಬೆಚ್ಚಗಾದವು.

ಅಂತೂ ಓದಿ ಮುಗಿಸಿದರು ನಾಗಪ್ಪ–ಕಾಗದವನ್ನು. ಅದರಲ್ಲಿನ ವಾಕ್ಯಗಳು ಅವರ ಕಿವಿಯಲ್ಲಿ ಇನ್ನೂ ಗುಯ್‌ಗುಡುತ್ತಿದ್ದುವು........

"....ಭಂಡತನದಿಂದ ಹೆಂಡತಿಯನ್ನು ತೌರಿನಲ್ಲಿ ಬಿಟ್ಟು ಬಂದ ವನು ಬಾಳಲಾರದ ಹೇಡಿ. ಮದುವೆಯಾಗುವ ಮೊದಲೇ ವರದಕ್ಷಿಣೆ ಕೊಡುವುದಿಲ್ಲವೆಂದು ಹೇಳಿದ್ದರೂ, ಅದನ್ನೊಪ್ಪಿಕೊಂಡು, ಮಗಳ ಕೊರಳಿಗೆ ತಾಲಿ ಬಿಗಿದು, ಈಗ ಮಾತ್ರ ವರದಕ್ಷಿಣೆಯ ನೆಪ ಹೂಡಿ ಕೈ ಹಿಡಿದವಳನ್ನು ಹೊರದೂಡಿರುವುದು ನಿನ್ನ ಅಯೋಗ್ಯತನವನ್ನು ಹೇಳುತ್ತದೆ. ನಿನ್ನ ಯೋಗ್ಯತೆ ಇಷ್ಟರ ಮಟ್ಟಿಗೆ ಎಂದು ತಿಳಿದಿದ್ದರೆ, ನಾನು ಹೆಣ್ಣನ್ನೇ ಕೊಡುತ್ತಿರಲಿಲ್ಲ ಶುದ್ಧ ಮೋಸಗಾರ. ನಿನಗೆ ವರದಕ್ಷಿಣೆ ಕೊಡುವುದಕ್ಕೆ ನಾನೇನು ಲಕ್ಷಗಟ್ಟಲೆ ಆಸ್ತಿಮಾಡಿಟ್ಟು ಕೊಂಡಿದ್ದೇನೆಯೆ? ಕನಸು ಮನಸಿನಲ್ಲಿಯೂ ನನ್ನಿಂದ ಒಂದು ಕುರುಡು ಕಾಸು ಬರುವುದೆಂದು ನೆಚ್ಚಬೇಡ ಇಷ್ಟವಿದ್ದರೆ ಬಂದು ನಿನ್ನ ಹೆಂಡತಿಯನ್ನು ಕರೆದುಕೊಂಡು ಹೋಗು ಇಲ್ಲದಿದ್ದರೆ, ಅವಳೂ ಒಂದು ಗಂಡು ಮಗು ಎಂದು ತಿಳಿದುಕೊಂಡು ನಾವೇ ಸಾಕುತ್ತೇವೆ. ನಮಗೇನೂ ಅವಳು ಭಾರವಿಲ್ಲ... . .."

ಎಂದಿತ್ಯಾದಿಯಾಗಿ ಬರೆದಿದ್ದರು ಅನಂತಯ್ಯ ಕೂಡಲೇ ಉತ್ತರ ಬರೆದು ಹಾಕಲು ಕುಳಿತರು ನಾಗಪ್ಪ. ಆದರೆ ಏನೆಂದು ಬರೆಯುವುದು? ಹೇಗೆ ಬರೆಯುವುದು?

ಮುಷಿಕುಡಿಕೆಯಲ್ಲಿ ಅದ್ದಿದ ಲೇಖಣಿ ಒಣಗಿತು. ಹಾಗೆಯೇ ಅವರ ಗಂಟಲೂ ಬತ್ತಿತ್ತು.

ನಾರಾಯಣನಿಂದಲಾದರೂ ತನ್ನ ಕಾಗದಕ್ಕೆ ಉತ್ತರ ಬಂದಿದ್ದರೆ ಚೆನ್ನಾಗಿತ್ತು ಎಂದುಕೊಂಡರು. ಕೊನೆಗೆ ಅನಂತಯ್ಯನವರಿಗೆ ಉತ್ತರ ಬರೆಯಲು ತೋಚದೆ ಸುಮ್ಮನಾದರು

ಒಂದುವಾರ ಕಳೆಯಿತು ಯಾರಿಂದಲೂ ಕಾಗದವಿಲ್ಲ. ನಿತ್ಯ ಜೀವನದಲ್ಲಿ ಸಂತೋಷವೂ ಇಲ್ಲ; ಸುಖವೂ ಇಲ್ಲ. ಯಾವ ವಿಷಯ ದಲ್ಲಿಯೂ ಆಸಕ್ತಿ ವಹಿಸುವ ಮನಸ್ಸಿಲ್ಲ. ತಮಗೆ ಏನು ಬೇಕೆಂಬುದೂ ತಿಳಿಯದಂತೆ ಚಡಪಡಿಸುತ್ತಿದ್ದರು ನಾಗಪ್ಪ.

ಆ ದಿನ ಅವರಿಗೆ ಅನಿರೀಕ್ಷಿತವಾಗಿ ಕರೆಬಂದಿತು. ಜಮೀನ್ದಾರ್

ಗೋಪಾಲಯ್ಯನವರ ಮನೆಯ ಆಳು ಬಂದು, "ಬುದ್ಧಿ, ನಿಮ್ಮನ್ನ ಕರೀತಾರೆ ಯಜಮಾನ್ರು" ಎಂದ ನಾಗಪ್ಪನವರಿಗೆ ಆಶ್ಚರ್ಯವೇ ಆಯಿತು. ತಡಮಾಡದೆ ಭುಜದ ಮೇಲೊಂದು ಶಲ್ಯ ಹಾಕಿಕೊಂಡು ಹೊರಟರು. ಏಕೆ ಕರೆ ಕಳುಹಿಸಿರಬಹುದೆಂದು ಊಹಿಸಲೂ ಅವರಿಗೆ ಸಾಧ್ಯವಿರಲಿಲ್ಲ.

ಗೋಪಾಲಯ್ಯನವರ ಜಗುಲಿಯ ಮೇಲೆ ರೈತನೊಬ್ಬ ಕುಳಿತಿದ್ದನು ನಾಗಪ್ಪನವರು ದಿಂಬಿಗೆ ಒರಗಿದ್ದ ಗೋಪಾಲಯ್ಯನವರನ್ನು ಕಂಡೊಡನೆಯೇ ನಮಸ್ಕರಿಸಿದರು.

"ಬನ್ನಿ ಮೇಷ್ಟ್ರೆ ಹೀಗೆ—ಮೇಲೆ ಬನ್ನಿ"

ಸಕ್ಕರೆಯಷ್ಟು ಸಿಹಿಮಾತಿನಲ್ಲಿ ಜಮೀನ್ದಾರರು ಸ್ವಾಗತಿಸಿದರು. ನಾಗಪ್ಪನವರು ಉಬ್ಬಿಹೋದರು. ತಮ್ಮ ಪಕ್ಕದಲ್ಲಿಯೇ ಕುಳ್ಳಿರಿಸಿಕೊಂಡು ಅತಿ ಮೆಲ್ಲನಿಯಲ್ಲಿ—ಸ್ವಲ್ಪ ದೂರದಲ್ಲಿ ಕುಳಿತಿದ್ದ ಆ ರೈತನಿಗೂ ಕೇಳಿಸದಷ್ಟು ಮೆಲ್ಲನೆ ಹೇಳಿದರು :

"ಮೇಷ್ಟ್ರೇ, ಪತ್ರ ಬರೆಯುವುದಕ್ಕೆ ಬರುತ್ತೋ ನಿಮಗೆ ?"

ನಾಗಪ್ಪನವರು ನಾಚಿಕೆಯಿಂದ ಕಣ್ಣು ಬಿಡುತ್ತಾ "ಇಲ್ಲ" ಎಂದರು. ಜಮೀನುದಾರರು ಅಷ್ಟಕ್ಕೇ ಸುಮ್ಮನಾಗದೆ ಮಾತು ಮುಂದುವರಿಸಿದರು—

"ಈಗೊಂದು ಸಾಲದ ಪತ್ರ ಬರೆಯಬೇಕು. ನಾನು ಹೇಳುತ್ತೇನೆ ಬರೆಯಿರಿ"

"ಆಗಬಹುದು"

ಎಂದರು ನಾಗಪ್ಪ. ಮರುಕ್ಷಣದಲ್ಲಿಯೇ ಏನೋ ನೆನಪಾದಂತೆ "ಶಾನುಭೋಗರ ಕೈಯ್ಯಲ್ಲೇ ಬರೆಸಿದ್ದರೆ ಚೆನ್ನಾಗಿರುತ್ತಿತ್ತು. . "

"ಅವರು ಏನೋ ಕೆಲಸದಲ್ಲಿದ್ದಾರೆ. ನೀವೇ ಬರೆಯಿರಿ ಮೇಷ್ಟ್ರೆ"

ಎಂದರು ಗೋಪಾಲಯ್ಯ. ಆ ಧ್ವನಿಯಲ್ಲಿ ದರ್ಪ ತಾಂಡವವಾಡಿತು. ತನಗೆ ಮನೆ ಕೊಟ್ಟ ಪುಣ್ಯಾತ್ಮ. ಈಗ ಪತ್ರ ಬರೆಯುವುದನ್ನು ಕಲಿಸಿ ಆ ಮೂಲಕ ನಾಲ್ಕು ಕಾಸು ಸಂಪಾದನೆಯಾಗುವ ದಾರಿ ಮಾಡಿಕೊಡುತ್ತಿದ್ದಾರೆ. ಇಂತಹವರ ಆಶ್ರಯ ದೊರಕುವುದು

ತನ್ನಂತಹ ಬಡ ಉಪಾಧ್ಯಾಯನ ಪುಣ್ಯವಲ್ಲವೆ?—ಎಂದುಕೊಂಡರು ನಾಗಪ್ಪ.

"ಹ್ಞಾ, ಬರೆಯಿರಿ ಮೇಷ್ಟ್ರೆ"

ಎಂದು ಗೋಪಾಲಯ್ಯ ನುಡಿದು, ಮತ್ತೆ ರೈತನ ಕಡೆಗೆ ತಿರುಗಿ

"ಐವತ್ತೇ ರೂಪಾಯಿ ಸಾಕೋ ಮುದ್ದೇಗೌಡ?"

"ಸಾಕು ಬುದ್ಧಿ"

—ರೈತ ಮುದ್ದೇಗೌಡ ಉತ್ತರಿಸಿದ. ನಾಗಪ್ಪನವರಿಗೆ ಇನ್ನಷ್ಟು ಆಶ್ಚರ್ಯವೇ ಆಯಿತು—ಬರಿ ಐವತ್ತು ರೂಪಾಯಿಗೆ ಪತ್ರ ಬರೆಯಿಸಿ ಕೊಳ್ಳಬೇಕೆ ಎಂದು.

ಗೋಪಾಲಯ್ಯ ಹೇಳಿದಂತೆ ಬರೆಯತೊಡಗಿದರು ನಾಗಪ್ಪ ಐವತ್ತು ರೂಪಾಯಿ ಎಂದು ಬರೆಯುವಕಡೆ—ಗೋಪಾಲಯ್ಯನವರು ಬೇರೊಂದು ಸಣ್ಣ ಕಾಗದದಲ್ಲಿ 'ನೂರೈವತ್ತು ಎಂದು ಬರೆಯಿರಿ' ಎಂಬುದಾಗಿ ಬರೆದು ನಾಗಪ್ಪನವರಿಗೆ ತೋರಿಸಿದರು. ಆದರೆ ಬಾಯಲ್ಲಿ ಗಟ್ಟಿಯಾಗಿ 'ಐವತ್ತು ರೂಪಾಯಿ' ಎಂದು ಎರಡು ಬಾರಿ ಹೇಳಿದರು. ಚೀಟಿ ಮಾತ್ರ ನೂರೈವತ್ತು ಎಂದು ಬರೆಯಲು ನಾಗಪ್ಪನವರಿಗೆ ಹೇಳುತ್ತಿತ್ತು.

ಅಂತೂ ಕೊನೆಗೊಮ್ಮೆ ಬರೆದು ಮುಗಿಸಿದರು. ಪತ್ರದ ಕೊನೆಯಲ್ಲಿ 'ಬಿಕ್ಕಲಂ ನಾಗಪ್ಪ' ಎಂದು ಸಹಿ ಹಾಕಿದ್ದಾಯಿತು ಹಣ ತೆಗೆದುಕೊಂಡುದಕ್ಕೆ ಮುದ್ದೇ ಗೌಡನೂ ಸಹಿ ಹಾಕಿದ. ಗೋಪಾಲಯ್ಯ ಅವನಿಗೆ ಐವತ್ತು ರೂಪಾಯಿ ಎಣಿಸಿದರು. ಎರಡು ಕೈಯೊಡ್ಡಿ ತೆಗೆದು ಕೊಂಡ ಮುದ್ದೇಗೌಡ, ಅದರಲ್ಲಿ ಒಂದು ರೂಪಾಯಿನ ಬೆಳ್ಳಿ ನಾಣ್ಯ ವನ್ನು ನಾಗಪ್ಪನವರ ಕೈಯ್ಯಲ್ಲಿಟ್ಟು ನಮಸ್ಕರಿಸಿ ಹೊರಟು ಹೋದ.

ನಾಗಪ್ಪನವರಿಗೆ ಅಷ್ಟರಿಂದಲೇ ತೃಪ್ತಿಯಾಗಿತ್ತು. ಸಂತೋಷ ದಿಂದಲೇ ಅವರೂ ಎದ್ದು ಹೊರಡಲನುವಾದರು. ಆದರೆ ಗೋಪಾಲಯ್ಯ

"ಪತ್ರ ಬರೆಯೋದು ಹೇಗೆ ಅನ್ನೋದು ಗೊತ್ತಾಯಿತೆ ಮೇಷ್ಟ್ರೆ?"

"ಗೊತ್ತಾಯಿತು ಸ್ವಾಮಿ"

ಗೋಪಾಲಯ್ಯ ಐದು ರೂಪಾಯಿಯ ನೋಟೊಂದನ್ನು ತೆಗೆದು ಅವರ ಕೈಗಿತ್ತು—

"ವಿಷಯ ನಿಮ್ಮಲ್ಲೇ ಇರಲಿ"

ಎಂದು ಎಚ್ಚರಿಸಿ ಅವರನ್ನು ಕಳುಹಿಸಿದರು. ಆ ದಿನ ನಾಗಪ್ಪನವರಿಗೆ ತುಂಬ ಸಂತೋಷವಾಗಿದ್ದಿತು. ಕೇವಲ ಒಂದು ಗಂಟೆಯಲ್ಲಿ ಆರು ರೂಪಾಯಿ ಸಂಪಾದನೆ ಮಾಡಿದ್ದರು. ಆದರೆ ತಾವು ಮಾಡಿದ್ದು ಸರಿಯೋ-ತಪ್ಪೋ ಎಂದು ಯೋಚಿಸುವ ಗೋಜಿಗೆ ಹೋಗಿರಲಿಲ್ಲ. ಐವತ್ತು ರೂಪಾಯಿ ಸಾಲ ತೆಗೆದುಕೊಂಡು ಹೋದ ರೈತನ ಹೆಸರಿನಲ್ಲಿ ನೂರೈವತ್ತು ರೂಪಾಯಿ ಸಾಲ ಬರೆದುದು ಅಷ್ಟೇನೂ ದೊಡ್ಡ ತಪ್ಪಲ್ಲವೆಂದು ಸೂಕ್ಷ್ಮವಾಗಿ ತಿಳಿದುಕೊಂಡರು

ಆರು ರೂಪಾಯಿಯ ಸಂಪಾದನೆ ನಾಗಪ್ಪನವರ ಮನಸ್ಸನ್ನೇ ಬದಲಾಯಿಸಿ ಬಿಟ್ಟಿತು. ತಿಂಗಳೆಲ್ಲಾ ದುಡಿದರೆ ಮೂವತ್ತೇಳು ರೂಪಾಯಿ ಸಂಬಳ ಬರುವ ಕೆಲಸಕ್ಕಿಂತ, ಸ್ವತಂತ್ರವಾಗಿದ್ದುಕೊಂಡು, ಹೀಗೆ ಪತ್ರಬರೆದು ಹೆಚ್ಚು ಸಂಪಾದಿಸುವುದು ಲೇಸೆಂದೆನಿಸಿತು. ಉಪಾಧ್ಯಾಯ ನೌಕರಿ ಇಲ್ಲದಿದ್ದರೆ ಸಂಪಾದಿಸುವುದು—ಜೀವನಮಾಡುವುದು ಏನೇನೂ ಕಷ್ಟವಿಲ್ಲವೆಂದು ಅವರ ಮನಸ್ಸಿಗೆ ಬೋಧೆಯಾಯಿತು. ತಮ್ಮಲ್ಲಿ ಇನ್ನು ಯಾವ ದಾರಿಯಿಂದು ರೀತಿಯಿಂದ ಸಂಪಾದಿಸುವ ಶಕ್ತಿ ಇದೆ ಎಂದು ವಿಶ್ವಾಸ ತಳೆದರು ಆ ದಿನ ಅಂತೂ ಆ ವಿಚಾರ ಸರಣಿಯೂ ಮುಕ್ತಾಯವಾದುದು ವರದಕ್ಷಿಣೆಯ ವಿಷಯದಲ್ಲಿಯೋ !

—ಇಂತಹ ಬುದ್ಧಿಶಕ್ತಿಯುಳ್ಳ ಗಂಡಸು ಅಳಿಯನಾಗುವುದೆಂದರೆ, ಮಾವನಾಗುವವನು ಎಷ್ಟು ಸುಕೃತ ಮಾಡಿರಬೇಕು ?

--ಹೆಂಡತಿಯಾಗುವವಳು ಎಷ್ಟು ಜನ್ಮದಲ್ಲಿ ಬಯಸಿರಬೇಕು?

—ತಮ್ಮ ಮಗಳ ಕೈ ಹಿಡಿಯಲು ಇಂತಹವನಿಗೆ ಎಷ್ಟು ವರದಕ್ಷಿಣೆ ಸುರಿದರೆ ತಾನೆ ಸಾಕು ?

ನಾಗಪ್ಪನವರು ಮನಸ್ಸಿನಲ್ಲಿಯೇ ನಕ್ಕರು.

ಅವರ ಭಾಗ್ಯದ ಬಾಗಿಲು ತೆರೆಯಿತೆಂಬಂತೆ ಮರುದಿನವೇ ನಾರಾಯಣನ ಕಾಗದ ಬಂದಿತು ಅದೇ ದಿನವೇ ತನ್ನ ಮಾವ ಕಳುಹಿಸಿದ ಚಂದ್ರುವಿನ ಮದುವೆಯ ಲಗ್ನಪತ್ರಿಕೆಯೂ ಕೈ ಸೇರಿತು.

ಮೊದಲು ಲಗ್ನಪತ್ರಿಕೆ ನೋಡಿದರು. ಹಿಂದೊಮ್ಮೆ ನಾರಾಯಣ ಹೇಳಿದ್ದಂತೆ, ತಮ್ಮ ಭಾವಮೈದ ಚಂದ್ರುವಿಗೆ ಬೆಂಗಳೂರಿನ ಇಂಜನಿ

ಯರ್ ರಾಮಚಂದ್ರರಾಯರ ಮಗಳು ಪದ್ಮಳನ್ನು ಕೊಟ್ಟು ಮದುವೆ. ಆದರೆ ಇಷ್ಟು ಬೇಗ ಈ ವಿವಾಹ ನಡೆಯುವುದೆಂದು ನಾಗಪ್ಪನವರು ನೆನಸಿರಲಿಲ್ಲ. ನಾರಾಯಣ ಹೇಳಿದ್ದಂತೆ ಗೌರಿಯ ಹಬ್ಬ ಆದನಂತರ ಚಂದ್ರುವಿನ ಮದುವೆ ನಡೆಯಬಹುದೆಂದು ಅವರು ಊಹಿಸಿದ್ದರು.

ಹಾಗೆಯೇ ನಾರಾಯಣನ ಕಾಗದವನ್ನೂ ಓದಿದರು. ಕಾರ್ಡಿನ ಒಂದೇ ಕಡೆ ಬಿಡಿಬಿಡಿಯಾಗಿ ಹತ್ತು ಸಾಲು ಬರೆದಿದ್ದ ಆತ--

"ನಿನ್ನ ಮಾವನವರಿಗೆ ಕಾಗದ ಬರೆಯ ಬೇಡ. ಇನ್ನು ಎಂಟು ದಿನಗಳೊಳಗೆ ಚಂದ್ರುವಿನ ಮದುವೆ ನಡೆಯುತ್ತದೆ. ಅದಕ್ಕೂ ನೀನು ಹೋಗಬೇಡ. ಅಷ್ಟಗ್ರಾಮದ ಮೇಲೆ ಆಸಕ್ತಿಯನ್ನೇ ತೋರಿಸದಿರುವುದು ಒಳ್ಳೆಯದು"

ಎಂದು ಮುಂತಾಗಿ ಬರೆದಿದ್ದ ಆ ಕಾಗದವನ್ನು ನಾಗಪ್ಪ ನಾಲ್ಕಾರು ಬಾರಿ ಓದಿ ನೋಡಿದರು. ಇನ್ನೊಮ್ಮೆ ಲಗ್ನಪತ್ರಿಕೆಯನ್ನು ಮೊದಲಿನಿಂದ ಕೊನೆಯವರೆಗೂ ಒಂದಕ್ಷರವನ್ನೂ ಬಿಡದೆ ಓದಿದರು.

"ಎರಡು ಸಾವಿರ ವರದಕ್ಷಿಣೆ—ಸೊಸೆಗೆ ಮೈ ತುಂಬ ಬಂಗಾರದ ಹೊರೆ"

ನಾರಾಯಣ ಹಿಂದೊಮ್ಮೆ ಹೇಳಿದ್ದ ಆ ಮಾತು ನೆನಪಾಯಿತು.

ಅನಂತಯ್ಯ ತನ್ನ ಮಗನಿಗೆ ಹೀಗೆ ಕೇಳಬಹುದು-ಅದು ತಪ್ಪಲ್ಲ; ಆದರೆ, ಹಾಗೆಯೇ ತನ್ನ ಮಗಳನ್ನು ಮದುವೆಯಾಗುವ ಗಂಡಿಗೂ ಕೊಡಬೇಕಲ್ಲವೇ? ತಾವು ಕೊಡದೆ, ಇನ್ನೊಬ್ಬರಿಂದ ಸುಲಿಯುವುದು ಅನ್ಯಾಯವಲ್ಲವೇ? ಇನ್ನೊಬ್ಬರಿಗೆ ಹೇಳಿ, ಅದನ್ನು ತಾವೇ ಅನುಸರಿಸದಿರುವುದು ತಪ್ಪಲ್ಲವೇ?-ಎಂದು ನಾಗಪ್ಪನವರು ತಮ್ಮಷ್ಟಕ್ಕೆ ತಾವೇ ಪ್ರಶ್ನಿಸಿಕೊಂಡರು.

ಕೆಲಸವಿಲ್ಲದ ತಲೆ ವರದಕ್ಷಿಣೆಯ ವಿಚಾರವನ್ನೇ ಯೋಚಿಸುವುದಕ್ಕೆ ಮೊದಲು ಮಾಡಿತು. ಆ ರಾತ್ರಿ ಹಾಸಿಗೆಯ ಮೇಲೆ ಉರುಳಿಕೊಂಡಾಗ ವೆಂಕಮ್ಮನ ನೆನಪು ಕಲ್ಪನಾ ಚಿತ್ರವಾಗಿ ಕಣ್ಮುಂದೆ ಸುಳಿಯಿತು ಮೌನದ ಮನೋನ್ಮಣಿಯಾದ ಆಕೆ ಈಗ ಏನು ಮಾಡುತ್ತಿರಬಹುದು ಎಂದುಕೊಂಡರು

ತಮ್ಮ ಹಾಗೆಯೇ ಆಕೆಯೂ ಕೋಣೆಯಲ್ಲಿ ಮಲಗಿರಬಹುದು.

ನಿದ್ದೆ ಬಾರದೆ ಹೊರಳಾಡುತ್ತಿರಬಹುದು. ತಮ್ಮ ನೆನಪಾಗಿ ಮೂಗು ಮುರಿದಿರಬಹುದು....ಆಮೇಲೆ....ಆಮೇಲೆ........... ?

... ನಿದ್ರೆ ಮಾಡಿರಬಹುದು !

ನಾಗಪ್ಪನವರ ಕಣ್ಣೂ ಎಳೆಯಿತು ಅವರಿಗರಿವಿಲ್ಲದಂತೆಯೇ ನಿದ್ರೆಯೂ ಬಂದಿತು.

ಆದರೆ ಅಷ್ಟಗ್ರಾಮದಲ್ಲಿದ್ದ ವೆಂಕಮ್ಮನಿಗೆ ನಿದ್ರೆ ಬರುವುದು ಹೇಗೆ ?

ಆಕೆಯ ಕಿವಿಯಲ್ಲಿ ಹರಿಕತೆ ದಾಸರ ಹಾಡು ಗುಯ್‌ಗುಡುತ್ತಿದೆ..

'ರಮಣನಿಲ್ಲದ ನಾರಿ ಪರರ ಕಣ್ಣಿಗೆ ಮಾರಿ |

ಹಡೆದವರ ಎದೆಗೂರಳ ಕೊಯ್ವಂಥ ಚೂರಿ||'

ಒಂದು ಕಾಲದಲ್ಲಿ ದಾಸರಾಯ ಶ್ರೀಪುರಂದರದಾಸರು ಹಾಡಿದ ಹಾಡು, ನೆಚ್ಚಿನ ಪರಿಚಯದ ಹರಿಕತೆ ದಾಸರು ಆಗಾಗ ಹಾಡುವ ಆ ಹಾಡು ತನ್ನ ವಿಷಯದಲ್ಲಿ ಅಕ್ಷರಶಃ ನಿಜವಾಗಿದೆ. ಆದರೆ ತನ ಗಿಂತಲೂ ಆ ಹುಡುಗಿ-ಪಾರ್ವತಿಗೆ ಆ ಹಾಡು ಎಷ್ಟು ಸರಿಯಾಗಿ ಒಪ್ಪುತ್ತದೆ?

ಪಾರ್ವತಿ....

ಆಕೆ ಅನಂತಯ್ಯನವರ ಸೆರಿಮನೆಯ ಹುಡುಗಿ ಸುಮಾರು ಹದಿನೆಂಟು ವಯಸ್ಸಿರಬಹುದು ಮದುವೆಯಾಗಿ ಎರಡು ವರ್ಷ ವಾಗಿತ್ತು. ಆದರೆ ಆಕೆ ಗಂಡನ ಮನೆಯಲ್ಲಿದ್ದು ಸಂಸಾರ ಮಾಡಿದ ವಳಲ್ಲ. ಆಕೆಗೇನೋ ಒಳ್ಳೆಯ ಗೃಹಿಣಿಯಾಗಿ ಬಾಳಬೇಕೆಂದು ಆಸೆಯಿತ್ತು. ಆದರೆ ಆ ಆಸೆಗೆ ಕಲ್ಲು ಹಾಕಿದ್ದು ವರದಕ್ಷಿಣೆ

ಮದುವೆಯಾಗುವಾಗ, ನಾಲ್ಕುನೂರು ಕೊಟ್ಟರೆ ಸಾಕೆಂದು ಗಂಡಾದವನು ಒಪ್ಪಿದ್ದ ಅಷ್ಟು ಹಣ ಕೊಡುವುದೇ ಆ ಕನ್ಯಾಪಿತೃವಿಗೆ ಕಷ್ಟವಾಗಿತ್ತು. ಸಾಲದ ಹೊರೆ ಹೊತ್ತು, ನಾಲ್ಕು ನೂರು ತೆತ್ತು, ಕನ್ಯಾಸೆರೆ ಬಿಡಿಸಿಕೊಂಡರು.

ಮದುವೆಯಾಯಿತು. ಮೂರು ತಿಂಗಳ ನಂತರ ಪ್ರಸ್ತವಾಯಿತು. ಹುಡುಗಿ ಗಂಡನ ಮನೆಗೆ ಹೋದಳು. ನೂರು ಕನಸುಗಳನ್ನು ನಿರ್ಮಿಸಿ ಕೊಂಡು ಬಾಳಭವನದಲ್ಲಿ ಅಡಿಯಿಟ್ಟಳು. ಆ ಅಡಿಯೇ ಕುಸಿಯಿತು !

ಅಲ್ಲಿ ಅವಳಿಗಾಗಿ ಕಾದಿದ್ದುವು–ಎರಡು ಭೂತಗಳು ಅತ್ತೆ–ಮಾವ!

ಮಗನಿಗೆ ಬೇರೊಂದು ಕಡೆಯಿಂದ ಹೆಚ್ಚು ವರದಕ್ಷಿಣೆ ಪಡೆದು ಹೆಣ್ಣು ತರಬೇಕೆಂದು ನಿಶ್ಚಯಿಸಿದ್ದವು ಆ ಧನ ಪಿಶಾಚಿಗಳು. ಆದರೆ ಪಾರ್ವತಿಯ ಚೆಲುವಿಗೆ ಸೋತಿದ್ದ ಮಗ ತಂದೆತಾಯಿಯರನ್ನು ಬಲವಂತದಿಂದ ಒಪ್ಪಿಸಿ ಆಕೆಯನ್ನೇ ಮದುವೆಯಾಗಿದ್ದ. ಅದರಿಂದಾಗಿ ಆ ಅಸುರಕುಲ ಅಸಮಾಧಾನಗೊಂಡಿತ್ತು.

ಸೊಸೆ ಗೃಹಪ್ರವೇಶ ಮಾಡಿದ ದಿನವೇ ಪಿಶಾಚಿಗಳ ಪೀಡನೆ ಆರಂಭವಾಯಿತು. ಕೂತರೆ ತಪ್ಪು, ನಿಂತರೆ ತಪ್ಪು, ಗಂಡನೊಡನೆ ಮಾತನಾಡಿದಾಗಲಂತೂ ದಂಡಸೇವೆಯೇ ಆಕೆಗೆ ಬಹುಮಾನ.

ಮನೆ ಬೆಳಗಲು ಬಂದ ಹುಡುಗಿ ಅತ್ತೆಯ ಕೈಯಲ್ಲಿ ಪೆಟ್ಟು ತಿಂದಳು; ಮಾವನ ಬಾಯಿಂದ ಅವಾಚ್ಯ ಶಬ್ದಗಳನ್ನು ಕೇಳಿದಳು.

"ಅರಿಯದವನನ್ನು ಮರುಳುಮಾಡಿ ಮದುವೆಯಾದೆಯಲ್ಲೆ ಮಾಯಾಂಗನೆ ?"

ತಮ್ಮ ಮಗ ಬಂದಾಗ, 'ಮಾಯಾಂಗನೆ'ಗೆ 'ವಾರಾಂಗನೆ'ಯ ಪಟ್ಟಕಟ್ಟಿ, ಸುಳ್ಳು ಕಥೆಯನ್ನು ಬಣ್ಣಿಸಿ ಬಣ್ಣಿಸಿ ಹೇಳಿದ ದಿನ ಪಾರ್ವತಿ ಆತ್ಮಹತ್ಯೆ ಮಾಡಿಕೊಳ್ಳಲು ಸಿದ್ಧಳಾಗಿದ್ದಳು.

ಆ ಮರುದಿನವೇ ವಿನಾಕಾರಣವಾಗಿ ಸಿಟ್ಟಿಗೊಂಡ ಆ ರಾಕ್ಷಸಿ ಅತ್ತೆ, ಒಲೆಯಲ್ಲಿ ಉರಿಯುತ್ತಿದ್ದ ಕೊಳ್ಳಿಯನ್ನು ತಂದು ನಿರ್ದಯೆ ದಿಂದ ಪಾರ್ವತಿಯ ಮುಖದ ಮೇಲೆ ಬಲವಾಗಿ ಎಸೆದಿದ್ದರು.

ಹುಡುಗಿ ಚೀರಿ ಕೆಳಗೆ ಬಿದ್ದಳು. ಅಲ್ಲಿಂದ ಆಸ್ಪತ್ರೆಗೆ ಸಾಗಿಸ ಲಾಯಿತು ಅವಳ ಎಡಗಣ್ಣು ಸುಟ್ಟು ಕುರುಡಾಯಿತು. ಎಡಗೆನ್ನೆಯ ಮೇಲೆ ಸುಟ್ಟಗಾಯದ ಅಗಲವಾದ ಪಟ್ಟಿ ಗುರುತಾಗಿ ನಿಂತಿತು. ಚೆಲುವಿನ ಮೂರ್ತಿಯಾಗಿದ್ದ ಪಾರ್ವತಿ ಸ್ವರೂಪವನ್ನೇ ಬದಲಾಯಿಸಿ ಕೊಂಡ ಕುರೂಪಿಯಾದಳು. ಅಷ್ಟಕ್ಕೇ ಆ ಅತ್ತೆ ಮಾವಂದಿರಿಗೆ ಸಂತೋಷವಾಯಿತು ಇನ್ನಾದರೂ ತಮ್ಮ ಮಗನಿಗೆ ಅವಳ ಮೇಲಿನ ಮೋಹ ಕಡಿಮೆಯಾಗುತ್ತದೆಂದು ಅವರು ನಂಬಿದರು. ಸಿರಿವಂತರ ಮನೆಯ, ಕಣ್ಣು ಮೂಗುಗಳಿದ್ದ ಕನ್ಯೆಯೊಬ್ಬಳು ಮಂಗಳಸೂತ್ರ ಕಟ್ಟಿಸಿಕೊಳ್ಳಲು ಆಗಲೇ ಸಿದ್ಧಳಾಗಿ ನಿಂತಿದ್ದಳು. ಮಗ ಒಪ್ಪಿದರೆ ಆ

ಐಶ್ವರ್ಯದ ಬೊಂಬೆ ತಮ್ಮ ಸೊಸೆಯಾಗುವಳೆಂದು ಆ ತಂದೆ–ತಾಯಿಯರ ಆಸೆ.

ಬೇಗನೆ ನೆರವೇರಿತು ಆ ಆಸೆ........

ಚೆಲುವಿನ ಚೆನ್ನೆಯಾಗಿದ್ದ ಪಾರ್ವತಿ ಕಣ್ಣು ಕಳೆದುಕೊಂಡು ಕುರೂಪಿಯಾದಾಗ ಅವನ ಮನಸ್ಸು ಬದಲಿತು. ತನಗೆ ಅವಳು ಬೇಡವೆಂದ. ಅದೇ ಅವನ ತಂದೆ–ತಾಯಿಯರಿಗೂ ಬೇಕಾಗಿತ್ತು!

ಸಂಪತ್ತಿನ ಲೋಕದಲ್ಲಿ ಬೆಳೆದ ಹುಡುಗಿ ಸಂಪತ್ತನ್ನೇ ಹೊತ್ತುಕೊಂಡು ಬಂದು ಅವನ ಕೊರಳಿಗೆ ಹೂಮಾಲೆ ಹಾಕಿದಳು ... ಅದು ಪಾರ್ವತಿಯ ಕೊರಳಿಗೆ ಹಾವಿನ ಮಾಲೆ !

ಇನ್ನು ಅವಳಿಗೂ–ಅವನಿಗೂ ಸಂಬಂಧವೆಲ್ಲಿ ?

ಪಾರ್ವತಿ ತೌರುಮನೆ ಸೇರಿದಳು. ತಂದೆ ಬೇಡನೆಂದು ಬಿಟ್ಟಲಿಲ್ಲ. ಆದರೆ ಆಕೆಯ ಜೀವನಾಂಶಕ್ಕಾಗಿ ಕೋರ್ಟಿಗೆ ಹೋಗುವೆನೆಂದು ಆರ್ಭಟಿಸಿದರು. ಪಾರ್ವತಿ 'ಬೇಡ'ವೆಂದು ತಡೆದಳು.

ಆಕೆಯ ಮನಸ್ಸು ಒಳ್ಳೆಯದು. ತನ್ನ ಗಂಡನಾದವನು ಹೇಗೋ ಸುಖವಾಗಿದ್ದರೆ ಸಾಕು. ಆತನೂ ತನ್ನ ಹಾಗೆಯೇ ಬೇರೊಂದು ರೀತಿಯಲ್ಲಿ ಕಷ್ಟಪಡಬಾರದು ಕೋರ್ಟು ಕಚೇರಿಯ ಮೆಟ್ಟಲು ಹತ್ತಿ ಆಸ್ತಿಪಾಸ್ತಿಯನ್ನು ಕಳೆಯಬಾರದು ಎಂಬುದೇ ಅವಳು ತಂದೆಯನ್ನು ತಡೆದ ಕಾರಣ.

ತೌರಿಗೆ ಹೊರೆಯಾಗವಂತೆ, ನ್ಯೈಮುರಿದು ಮನೆಗೆಲಸಮಾಡಿ, ಹೊಲದ ಕೆಲಸವನ್ನೂ ಮಾಡುತ್ತಿದ್ದಳು ಪಾರ್ವತಿ. ಯೌವ್ವನದಲ್ಲಿ ಅಡಿಯಿಡುತ್ತಿದ್ದ ಆಕೆ ಕುರೂಪಿಯಾಗಿದ್ದರೂ ಆಕರ್ಷಕವಾಗಿದ್ದಳು. ಮುಖಕ್ಕಿಂತ ಆ ದೇಹ ನೋಡುವವರ ಮನಸ್ಸಿನಲ್ಲಿ ಆಸೆ ಮೂಡಿಸುತ್ತಿತ್ತು.

ಹಾಗೆ ಆಸೆಪಟ್ಟವರು ಹತ್ತಿರ ಬಂದು ಬಲೆಗೆ ಕೆಡುಹಲು ಪ್ರಯತ್ನಿಸಿದಾಗ ಪಾರ್ವತಿ ದುರ್ಗಿಯಾಗುತ್ತಿದ್ದಳು. ಕೆಲವರಿಗೆ ಅವಳ ಕೈರುಚಿಯನ್ನು ನೋಡುವ ಭಾಗ್ಯವೂ ಒದಗಿತ್ತು.

ಆದರೆ ಆ ಶಿವು........

ಪಾರ್ವತಿಯ ಮೇಲೆ ಇನ್ನೂ ಆಸೆ ಇಟ್ಟುಕೊಂಡಿದ್ದವನು ಆತ.

ಒಂದು ಸಂಜೆ ಪಾರ್ವತಿ, ಜೋಳವಕಡ್ಡಿ ಹೊತ್ತುಕೊಂಡು ಹೊಲದಿಂದ ಮನೆಗೆ ಬರುತ್ತಿದ್ದಳು. ಮುಸುಕು ಕತ್ತಲೆಯಲ್ಲಿ ಬೇಗ ಬೇಗನೆ ಹೆಜ್ಜೆ ಹಾಕುತ್ತಿದ್ದಳು. ಶಿವು ಅವಳ ಹಿಂದೆಯೇ ಹೊಂಚುತ್ತಾ ಬಂದ.

ಆಕೆ ಗುಂಪಾಗಿದ್ದ ಹೊಂಗೆಯ ಮರಗಳ ಬಳಿಗೆ ಬಂದಾಗ, ಹಿಂದಿನಿಂದ ಅವಳ ತಲೆಯ ಮೇಲಿನ ಜೋಳದ ಕಡ್ಡಿಯ ಹೊರೆಯನ್ನು ಕೆಳಗೆನೂಕಿ, ತಟ್ಟನೆ ಅವಳ ಮುಂದೆ ಬಂದುನಿಂತ ಶಿವು.

"ಎಷ್ಟು ದಿನದಿಂದ ಕಾದಿದ್ದೇನೆ ಪಾರ್ವತಿ"

ಮಾತನಾಡುತ್ತಲೇ ಅವಳ ನಡುವಿಗೆ ಕೈಹಾಕಿದ ಶಿವು. ಅಷ್ಟರಲ್ಲಿ ಫಟೇರನೆ ಅವನ ಕೆನ್ನೆಗೆ ಹೊಡೆದಳು ಪಾರ್ವತಿ. ಎಡೆಬಿಡದೆ ಎರಡು ಕೆನ್ನೆಗೂ ಎರಡೆರಡು ಬಾರಿ ಹೊಡೆದಾಗ ಶಿವು ತಲೆ ತಿರುಗಿ ಕೆಳಗೆ ಬಿದ್ದ. ಪಾರ್ವತಿ ಮನೆಗೆ ಬಂದು, ತನ್ನ ಬಾಳನ್ನು ನೆನೆನೆನೆದು ಅತ್ತು ಗೋಳಾಡಿದಳು–ಯಾರಿಗೂ ಗೊತ್ತಾಗದಂತೆ.

ಇದು ಪಾರ್ವತಿಯ ಕತೆ ಆಕೆಯೇ ಹೇಳಿಕೊಂಡ ಆತ್ಮಕತೆ. ಹರಿಕತೆ ದಾಸರು ಹಾಡುವ ಆ ಹಾಡಿನ ಉದಾಹರಣೆಯೊಂದು ಸಾರುವ ಅನುಭವದ ಕತೆ. ತನ್ನ ಕತೆಯೂ ಈಗ ಹಾಗೆಯೇ ಆಗಿದೆಯಲ್ಲವೆ ?

ವೆಂಕಮ್ಮ ವಿಷವರ್ತುಲದ ಚಕ್ರಗತಿಯಲ್ಲಿ ಸುತ್ತುತ್ತಿದ್ದಳು. ಗಂಡನಿಗೆ ಬೇಡವಾದ ಹೆಂಡತಿಯಾಗಿ ತೌರಿನಲ್ಲಿ ಬಾಳುವುದೂ ಕಷ್ಟವೆನಿಸಿತು ಆಕೆಗೆ.

ಅದಕ್ಕೆ ಕಾರಣ ಶಿವು !

ಪಾರ್ವತಿಯ ಪೆಟ್ಟಿಗೆ ತಲೆ ತಿರುಗಿ ಬಿದ್ದ ಅದೇ ಶಿವು ಮತ್ತೆ ತಲೆಯೆತ್ತಿ ತನ್ನನ್ನು ನೋಡುತ್ತಿದ್ದಾನೆ........

ಬಟ್ಟೆ ಒಗೆಯಲು ವೆಂಕಮ್ಮ ಹೊಳೆಗೆ ಹೋಗುತ್ತಿದ್ದಳು. ಸಮಯ ಸಾಧಿಸುತ್ತ ಶಿವು ಹೊಂಚುಹಾಕುತ್ತಿದ್ದ. ಆದರೆ ಅದು ವೆಂಕಮ್ಮನಿಗೆ ತಿಳಿಯದು. ಒಂದು ಮಧ್ಯಾಹ್ನ, ಸುತ್ತುಮುತ್ತ ಯಾರೂ ಇಲ್ಲದುದನ್ನು ಕಂಡು ಧೈರ್ಯಮಾಡಿ ಅವನು ಅವಳ ಬಳಿಗೆ ಬಂದು, ಚಿನ್ನದ ಸರವನ್ನು ತೋರಿಸುತ್ತಾ—

"ವೆಂಕು, ನಿನಗೆ ಬೇಕಾ ಇದು ? ನೋಡು ಎಷ್ಟು ಚೆನ್ನಾಗಿದೆ"

ಎಂದು ಅವಳ ಕಣ್ಣೆದುರಿಗೆ ಹಿಡಿದಿದ್ದ. ವೆಂಕಮ್ಮನಿಗೆ ಅರ್ಥವಾಯಿತು. ಪಾರ್ವತಿಯಂತೆ ಕೆನ್ನೆಗೆ ಹೊಡೆಯಲು ಆಕೆಗೆ ಧೈರ್ಯ ಸಾಲದು. ಎಂಥ ವಿಷಮ ಪರಿಸ್ಥಿತಿ !

"ತೊಗೋ ವೆಂಕು, ನಿನಗೇನೇ. ನೀನೇ ಹಾಕಿಕೊ. ಇದನ್ನು ಹಾಕಿಕೊಂಡರೆ ನೀನು ತುಂಬ ಚೆನ್ನಾಗಿ ಕಾಣುತ್ತಿ"

ಬಲವಂತ ಮಾಡುತ್ತಿದ್ದಾನೆ ಶಿವು. ಆದರೆ ಅದನ್ನು ತೆಗೆದು ಕೊಳ್ಳಲು ತನಗೆ ಮನಸ್ಸಿದೆಯೇ ? ಛಿ, ಹೇಗೆ ಪಾರಾಗುವುದು ?

ಅಷ್ಟರಲ್ಲಿ ಹೊಳೆಯಿತು ಪಾರಾಗುವ ದಾರಿ !

ಕೈನೀಡಿದಳು ವೆಂಕಮ್ಮ. ಸರ ಅವಳ ಅಂಗೈಯಲ್ಲಿ ಕುಳಿತಿತು. ಆದರೆ ಬಹಳ ಹೊತ್ತು ಕುಳಿತಿರಲಿಲ್ಲ. ರೊಯ್ಯನೆ ಬಿಸಾಡಿದಳು ವೆಂಕಮ್ಮ. ಚಿನ್ನದ ಸರ ಮಣ್ಣಿನಲ್ಲಿ ಬಿತ್ತು - ಸ್ವಲ್ಪ ದೂರದಲ್ಲಿ ಶಿವು ಅದನ್ನು ತೆಗೆದುಕೊಳ್ಳಲು ಓಡಿಹೋದ. ವೆಂಕಮ್ಮ ಬಿರುಬಿರನೆ ನಡೆದು ಮನೆ ಸೇರಿದಳು.

ಚಿಕ್ಕಮ್ಮನಿಗೂ ವೆಂಕಮ್ಮನೇ ನಡೆದ ಸಂಗತಿಯನ್ನು ನಿರೂಪಿಸಿದಳು

"ಇನ್ನು ಮೇಲೆ ನೀನು ಹೊರಗಿನ ಕೆಲಸಕ್ಕೆ ಹೋಗಬೇಡ. ಅದನ್ನೆಲ್ಲಾ ನಾನೇ ಮಾಡುತ್ತೇನೆ. ವಯಸ್ಸಿನ ಹುಡುಗಿಯನ್ನು ಹಾಗೆ ಕಳುಹಿಸುತ್ತಿದ್ದುದು ನನ್ನದೇ ತಪ್ಪು"

-ಎಂದು ಸಮಾಧಾನ ಮಾಡಿದರು ಚಿಕ್ಕಮ್ಮ.

ಪಾರ್ವತಿಗೂ ವಿಷಯ ತಿಳಿಯಿತು. ಆಕೆ ವೆಂಕಮ್ಮನ ಆಪ್ತ ಗೆಳತಿ; ಸಮದುಃಖಿ ಎಂತಲೇ ಮುಚ್ಚುಮರೆಯಿಲ್ಲದೆ ವೆಂಕಮ್ಮ ನಡೆದುದೆಲ್ಲವನ್ನು ಹೇಳಿದಳು. ಆಗಲೇ ಪಾರ್ವತಿ ತನ್ನ ಆತ್ಮಕಥೆಯನ್ನು ವಿವರವಾಗಿ ಹೇಳಿದುದು ಆಕೆಯ ದುಃಖಕ್ಕೆ ಹೋಲಿಸಿಕೊಂಡರೆ ತನ್ನದು ಅಣು ಎಂದುಕೊಂಡಳು ವೆಂಕಮ್ಮ.

ತಾನೂ ಆಕೆಯಂತೆಯೇ 'ರಮಣನಿಲ್ಲದ ನಾರಿ' – ರಮಣನಿದ್ದೂ ಇಲ್ಲದ ನಾರಿ !

"ಇನ್ನೂ ಎಷ್ಟುದಿನ ಹೀಗೆಯೇ?"-ಎಂದುಕೊಂಡಳು ವೆಂಕಮ್ಮ.

ತಂದೆ, ತಾನು ಕಾಗದ ಬರೆದಿರುವೆನೆಂದು ಹೇಳಿದ್ದರು. ಅದಕ್ಕೆ

ಗಂಡನಿಂದ ಉತ್ತರವೇ ಇಲ್ಲ. ಅವರೇನಾದರೂ ಬೇರೆಯ ಮದುವೆ ಮಾಡಿಕೊಳ್ಳಲು ನಿಶ್ಚಯಿಸಿರುವರೆ? ಅವರು ನಿಶ್ಚಯಿಸಿದ್ದರೂ ಅದು ಸಾಧ್ಯವಿಲ್ಲವೆಂದೇ ಪಂಕಮ್ಮನ ನಂಬಿಕೆ.

ಶ್ಯಾನುಭೋಗರ ಕುಟುಂಬದ ನೆನಪಾಗಿ, ಆ ಭರವಸೆಯನ್ನು ತಳೆದಳು ಆಕೆ. ತನ್ನ ಗಂಡ ಬೇರೊಂದು ಮದುವೆಯಾಗಲು ಹವಣಿಸಿದರೂ ಶ್ಯಾನುಭೋಗರಾಗಲಿ, ಗೌಡರಾಗಲಿ ಅದಕ್ಕೆ ಒಪ್ಪಿಗೆ ಕೊಡದಿದ್ದರೆ ಅದು ಸಾಧ್ಯವಾಗದ ಕಾರ್ಯವಾಗಿರಲಿಲ್ಲವೆಂಬುದು ಆಕೆಗೆ ದೃಢವಾಗಿದ್ದ ಸಂಗತಿ.

ಮತ್ತೆ ಉತ್ತರವನ್ನೇಕೆ ಬರೆಯಲಿಲ್ಲ?

ತನ್ನ ಅಣ್ಣ ಚಂದ್ರುವಿನ ಮದುವೆಗೆ ಬರಲು ತಂದೆ ಲಗ್ನಪತ್ರಿಕೆ ಕಳುಹಿಸಿದ್ದರಲ್ಲವೆ? ಹೇಗಿದ್ದರೂ ಬಂದೇ ಬರುತ್ತೇನಲ್ಲ – ಇನ್ನು ಕಾಗದ ಬರೆಯುವುದು ಏಕೆ ಎಂದು ಸುಮ್ಮನಿರಬಹುದೆ?

ಹಾಗಿರಲಾರದು; ಅವರು ಮದುವೆಗೆ ಬರಲಾರರು. ಬಂದರಂತೂ ಇಲ್ಲೊಂದು ದೊಡ್ಡ ಜಗಳವೇ ನಡೆಯಬಹುದು! ಅದರಿಂದ ತನ್ನ ತಂದೆಯ - ತನ್ನ ಗಂಡನ ಕ್ಷುದ್ರಮನೋಭಾವ ಬಯಲಾಗಿ, ಇತರರು ಕೆಟ್ಟ ಅಭಿಪ್ರಾಯವನ್ನು ಹೊಂದಿ, ಹೀಯಾಳಿಸುವಂತಾಗುತ್ತದೆ. ಆದ್ದರಿಂದ ಹಾಗಾಗದಿರುವುದು ಲೇಸು. ಅವರು ಮದುವೆಗೆ ಬರದಿರುವುದೇ ಉತ್ತಮ.

....ಬರದಿದ್ದರೆ ನನ್ನ ಗತಿ? ತಂದೆ ಕಾಗದ ಬರೆದಿದ್ದಾರಲ್ಲ!

ಅದಕ್ಕೆ ಉತ್ತರವಿಲ್ಲವಲ್ಲ!! ಆ ಕಾಗದದಲ್ಲಿ ತಂದೆ ಏನೇನು ಬರೆದಿದ್ದರೋ? ನಯವಾಗಿ ಮನವೊಲಿಸುವಂತೆ ಬರೆದಿದ್ದರೆ ಆ ಕಾಗದಕ್ಕೆ ಉತ್ತರ ಬಂದೇ ಬರುತ್ತಿತ್ತಲ್ಲವೆ? ಈಗಾಗಲೇ ಮೂರು ವಾರಗಳಾದರೂ ಆ ಕಾಗದದ ಪ್ರತಿಕ್ರಿಯೆಯ ಬಗ್ಗೆ ಯಾವೊಂದು ಸುದ್ದಿಯೂ ಇಲ್ಲ. ಬಹುಶಃ ತನ್ನ ತಂದೆ ಆ ಕಾಗದದಲ್ಲಿ ತಮ್ಮ ಒಣ ಹೃದಯದ ಒರಟು ಭಾಷೆಯ ಪ್ರಯೋಗಮಾಡಿ, ತನ್ನ ಗಂಡನಿಗೆ ಕೋಪಬರುವಂತೆ ಮಾಡಿರಬಹುದೆ? ಅದಕ್ಕೇ ಅವರು ಉತ್ತರ ಬರೆಯದೆ ಸುಮ್ಮನಾಗಿರಬಹುದೆ?....

ಅರ್ಧರಾತ್ರಿ ಮೀರಿದ್ದರೂ ಆಕೆಗೆ ನಿದ್ದೆ ಬಂದಿರಲಿಲ್ಲ. ಪ್ರಯತ್ನ

ಪೂರ್ವಕವಾಗಿ ಕಣ್ಣು ಮುಚ್ಚಿಕೊಂಡು ನಿದ್ರೆಗೆ ಆಹ್ವಾನವಿತ್ತಳು. ಅವಳ ಕರೆ ಅದಕ್ಕೆ ಕೇಳಿಸಿತೋ ಇಲ್ಲವೋ ?

ಇನ್ನು ಬೆಳಗಾದರೆ ಮದುವೆಯ ಗಲಾಟೆ ಪ್ರಾರಂಭ. ಬೆಂಗಳೂರಿನಿಂದ ಚಂದ್ರು ಬರುತ್ತಾನೆ ಚಿಕ್ಕಮ್ಮನ ಸಡಗರ ಕೇಳಬೇಕೇ ? ತನಗೆ ಹೇಗೋ ಹಾಗೆಯೇ ಚಂದ್ರುವಿಗೂ ಆಕೆ ಮಲತಾಯಿಯೇ. ಆದರೆ ತಮ್ಮ ಹೊಟ್ಟೆಯಲ್ಲಿ ಹುಟ್ಟಿದ ಮಗನಂತೆಯೇ ಅವರು ಆದರದಿಂದ ಕಾಣುತ್ತಾರೆ. ತಮ್ಮಿಬ್ಬರಿಗೂ ಅಂತಹ ಚಿಕ್ಕಮ್ಮನಿಲ್ಲದಿದ್ದರೆ ಎಷ್ಟೊಂದು ಕಷ್ಟಪಡಬೇಕಾಗುತ್ತಿತ್ತು; ದುಃಖಿಸಬೇಕಾಗುತ್ತಿತ್ತು. ತಂದೆಗಂತೂ ಮಕ್ಕಳ ವಿಷಯದಲ್ಲಿ ಎಂದೂ ಆಸಕ್ತಿ ಇಲ್ಲ. ತಾವು – ತಮ್ಮ ಸುಖ ಅಷ್ಟೇ ಅವರಿಗೆ ಬೇಕಾದುದು. ಚಿಕ್ಕಮ್ಮನಿಗಾದರೆ ಸ್ವಂತ ಸುಖ ಅನುಭವಿಸಲು ಲೇಶವೂ ಆಶೆಯಿಲ್ಲ. ಒಳ್ಳೆಯವಳಾಗಿ ಬಾಳಬೇಕು– ಗಂಡನಿಗೆ ಬೇಕಾದ ಹೆಂಡತಿಯಾಗಿ, ಮಕ್ಕಳಿಗೆ ಸರಿಯಾದ ತಾಯಿಯಾಗಿ, ಅಕ್ಕಪಕ್ಕದವರಿಗೆ ಅನ್ನಪೂರ್ಣೆಯ ಸ್ವರೂಪಳಾಗಿ ಬಾಳಬೇಕು ಎಂಬ ಒಂದೇ ಒಂದು ಗುರಿ ಅವಳದು. ಎಂತಲೇ ಸವತಿಯ ಮಕ್ಕಳಾದ ತಮ್ಮಿಬ್ಬರನ್ನು ಯಾವ ಘಳಿಗೆಯಲ್ಲಿಯೂ ಮನ ನೋಯಿಸದೆ ಅತ್ಯಂತ ಪ್ರೀತಿಯಿಂದ ಕಾಣುತ್ತಾರೆ. ಆಕೆಯ ಸ್ಥಾನಕ್ಕೆ ಬೇರೊಬ್ಬ ಹೆಂಗಸು ಬಂದಿದ್ದರೆ ?, ನೆರೆಮನೆಯ ಪಾರ್ವತಿಯ ಅತ್ತೆಯಂತಹ ಶೂರ್ಪನಖಿ ತನ್ನ ತಂದೆಯ ಎರಡನೆಯ ಹೆಂಡತಿಯಾಗಿ– ತನಗೆ ಚಿಕ್ಕಮ್ಮನಾಗಿ ಬಂದಿದ್ದರೆ....? ಆ ಮಲತಾಯಿ ಈ ಸವತಿಯ ಮಕ್ಕಳನ್ನು ಖಂಡಿತ ಬೀದಿಯ ಪಾಲು ಮಾಡಿಬಿಡುತ್ತಿದ್ದಳು. ಸದ್ಯ, ಹಾಗಾಗಲಿಲ್ಲ. ಚಿನ್ನದಂತಹ ಚಿಕ್ಕಮ್ಮನೇ ಬಂದಳು ತಮ್ಮಿಬ್ಬರನ್ನು ಕಣ್ಣಿನಲ್ಲಿ ಮುಚ್ಚಿಟ್ಟುಕೊಂಡು ಸಾಕಿ ಸಲಹಿದಳು. ಆಕೆ ನಿಜವಾಗಿಯೂ ದೇವಿ....ದೇವಿ !

ವೆಂಕಮ್ಮನಿಗೆ ಜೋಂಪು ಹತ್ತಿತು. ಅಲ್ಲಿ ಕನಸಿನ ಕಣ್ಮುಂದೆ ಅವಳ ಮನಸ್ಸಿನಲ್ಲಿದ್ದ ದೇವಿ ಪ್ರತ್ಯಕ್ಷಳಾಗಿದ್ದಳು. ಅವಳ ರೂಪು ಚಿಕ್ಕಮ್ಮನದೇ. ಅದೇ ಗುಂಗುರು ಕೂದಲು, ಮಿಂಚುವ ಕಣ್ಣು, ತುಸು ಅಗಲವಾದ ಮುಖದಲ್ಲಿ ಬಿಲ್ಲಿನಂತಹ ಬಾಯಿ. ಮಾಟವಾದ ಮೂಗು, ನಯವಾದ ಉಬ್ಬಿದ ಕೆನ್ನೆ. ಹೆಚ್ಚು ನಕ್ಕರೆ ಮುತ್ತು

ಉದುರಿ ಹೋಗುವುದೆಂದು, ಮೃದು ಮಂದ ಹಾಸವನ್ನು ಮಾತ್ರ ಆಕರ್ಷಣೀಯವಾಗಿ ಬೀರುತ್ತಿದ್ದ ವೈಖರಿ....ಆಕೆ ತನ್ನ ಚಿಕ್ಕಮ್ಮನೇ ಸರಿ! ಆದರೆ ತಲೆಗೆ ಕಿರೀಟವಿದೆಯಲ್ಲ! ನಾಟಕದಲ್ಲಿ ದೇವರು—ದೇವತೆಗಳು ಧರಿಸುವಂತಹ ಕಿರೀಟ ಅದು; ಮುತ್ತು ರತ್ನಗಳಿಂದ ಮಿಣಮಿಣನೆ ಹೊಳೆಯುತ್ತಿದ್ದ ಕಿರೀಟ! ಎಂದಿನಂತೆ ಕೂದಲು ಹೆಣೆದು ಕೊಳ್ಳದೆ, ಬೆನ್ನಿನ ಮೇಲೆ ಓರಣವಾಗಿ ಹರಿಯ ಬಿಟ್ಟಿದ್ದಾಳೆ! ಎಷ್ಟಾದರೂ ದೇವಿಯಲ್ಲವೇ? ಅದಕ್ಕೇ ಆ ಕಿರೀಟ, ಆ ಅಲಂಕಾರ!!

ಮುಂಜಾನೆ ಎಚ್ಚರಿಕೆಯಾದಾಗ ಆ ಕನಸಿನ ದೇವಿಯ ನೆನಪೇ ಆಕೆಗೆ. ಮುಖ ತೊಳೆಯದೆಯೇ ಓಡಿಹೋಗಿ ಚಿಕ್ಕಮ್ಮನ ಮುಖ ನೋಡಿದಳು. ಎಷ್ಟು ಬಾರಿ ಅವರನ್ನು ಆಕೆ ನೋಡಿಲ್ಲ; ಮುಖಕ್ಕೆ ಮುಖವಿಟ್ಟು ಅತ್ತಿರಲಿಲ್ಲ. ಆದರೆ ಆದಿನ ನೋಡಿದ ನೋಟದಲ್ಲಿ ವೈಶಿಷ್ಟ್ಯವಿತ್ತು. ಕನಸಿನ ದೇವಿಯನ್ನೂ-ಚಿಕ್ಕಮ್ಮನನ್ನೂ ಹೋಲಿಸಿ, ತೂಗುವ, ನ್ಯಾಯ ಮೂರ್ತಿಯಾಗಿದ್ದಳು!

ಮಂಕು ಬಡಿದವಳಂತೆ ಚಿಕ್ಕಮ್ಮನನ್ನೇ ನಿಟ್ಟಿಸುತ್ತ ವೆಂಕಮ್ಮ ನಿಮಿಷಗಳನ್ನು ಕಳೆದಳು. ಅವಳು ತನ್ನ ಭಾವಸಮಾಧಿಯಿಂದ ಎಚ್ಚೆತ್ತು ಬರಲು ಚಿಕ್ಕಮ್ಮನೇ ಬೇಕಾಯಿತು.

"ಮುಖ ತೊಳಕೊಂಡ್ಯೇನೆ ವೆಂಕು?"

ಎಲ್ಲಿಂದಲೋ ಓಡಿ ಬಂದಂತಾಯಿತು ವೆಂಕಮ್ಮನಿಗೆ.

"ಇಲ್ಲ ಚಿಕ್ಕಮ್ಮ"

ಎನ್ನುತ್ತಾ ಆಕೆ ಬಚ್ಚಲು ಮನೆಗೆ ನಡೆದಳು.

ಅದೇ ಮಧ್ಯಾಹ್ನದ ರೈಲಿನಲ್ಲಿ ಚಂದ್ರು ಬಂದ. ಚಿಕ್ಕಮ್ಮ ಆನಂದದ ಸ್ವಾಗತ ನೀಡಿದರು. ವೆಂಕಮ್ಮನೂ ನಗುನಗುತ್ತ ಅಣ್ಣ ನನ್ನಿದುರುಗೊಂಡಳು ತಮ್ಮಂದಿರಿಬ್ಬರೂ ಅವನೆಡಬಲದಲ್ಲಿ ನಿಂತು ಕೋಟು ಹಿಡಿದು ಜಗ್ಗುತ್ತಿದ್ದರು. ಚಂದ್ರು ಸಂತೋಷದಿಂದ ಉಬ್ಬಿಹೋಗಿದ್ದ.

"ಅಪ್ಪ ಎಲ್ಲಿ ಚಿಕ್ಕಮ್ಮ?"

ಅವನ ಪ್ರಶ್ನೆಗೆ ಚಿಕ್ಕಮ್ಮ ಉತ್ತರಿಸುವ ಬದಲು ವೆಂಕು ಉತ್ತರಿಸಿದಳು—

"ಎಲ್ಲೋ, ಈಗತಾನೆ ಹೊರಗೆ ಹೋದರು ಅಣ್ಣ"

ಅದರ ಜೊತೆಗೆ ಚಿಕ್ಕಮ್ಮನೂ—

"ಶಾಸ್ತ್ರಿಗಳ ಮನೆ ಹತ್ತಿರ ಹೋದರೇನೋ...."

ಎಂದು ರಾಗವಾಗಿ ದನಿಗೂಡಿಸಿದರು.

ಚಂದ್ರು ಕೈಕಾಲು ತೊಳೆದು ಬರುವಷ್ಟರಲ್ಲಿ ಅನಂತಯ್ಯನವರೂ ಒಳಗೆ ಬಂದರು ಮಗನೊಡನೆ ಲೋಕಾಭಿರಾಮದ—ಕ್ಷೇಮಸಮಾಚಾರದ — ಮಾತುಕತೆಗಳಾದವು. ಅನಂತರ ಎಲ್ಲರೂ ಒಟ್ಟಿಗೇ ಊಟಕ್ಕೆ ಕುಳಿತರು. ವೆಂಕಮ್ಮ ಮಾತ್ರ ಆ ಸಮಯದಲ್ಲಿ ಕಣ್ಮರೆಯಾಗಿದ್ದಳು. ಚಿಕ್ಕಮ್ಮನೇ ಎಲ್ಲರಿಗೂ ಬಡಿಸಿದರು.

"ನಿನ್ನ ಕೈಯಡ್ಗೆ ತಿಂದು ವರ್ಷದ ಮೇಲಾಯಿತು ಚಿಕ್ಕಮ್ಮ. ಮೊನ್ನೆ ಮೊನ್ನೆ ಬಂದಾಗ, ವೆಂಕಮ್ಮನ ಮದುವೆಯ ಗಲಾಟೆಯಲ್ಲಿ ಆ ಪರಿಚಾರಕರ ಕೈ ಅಡಿಗೆ ತಿಂದು ಬೇಜಾರಾಗಿತ್ತು. ಅದಕ್ಕೂ ಹೋಟೆಲು ಊಟಕ್ಕೂ ಏನು ವ್ಯತ್ಯಾಸ. ಎಷ್ಟಾದರೂ ನಿನ್ನ ಕೈ ಅಡಿಗೆಯೇ ಚೆನ್ನ"

ಎಂದು ಚಂದ್ರು ಚಿಕ್ಕಮ್ಮನನ್ನು ಬಾಯ್ತುಂಬ ಹೊಗಳಿದ.

"ಇನ್ನು ಮೇಲೆ ನಿನಗೆ ಪರವಾಗಿಲ್ಲ ಚಂದ್ರು....ಹೋಟೆಲು ಊಟ ತಪ್ಪುತ್ತದೆ. ಕೈಹಿಡಿದವಳು ರುಚಿ ರುಚಿಯಾಗಿ ಬಿಸಿಬಿಸಿಯಾಗಿ ಮಾಡಿ ಹಾಕುತ್ತಾಳೆ" ಎಂದರು ನಗುನಗುತ್ತಾ ಚಿಕ್ಕಮ್ಮ ಅನಂತಯ್ಯನವರೂ ತುಟಿಯಲ್ಲೇ ನಕ್ಕರು ಮಿಕ್ಕ ಹುಡುಗರೆಲ್ಲಾ ಅಣ್ಣನ ಮುಖವನ್ನು ಆಶ್ಚರ್ಯ ಕುತೂಹಲಗಳಿಂದ ಕಣ್-ಬಾಯ್ ಬಿಡುತ್ತಾ ನಿಟ್ಟಿಸಿ ನೋಡಿದರು

ಅನಂತಯ್ಯನವರು ಅಡಾವುಡಿಯಿಂದ ಊಟಮುಗಿಸಿ ಎದ್ದುಬಿಟ್ಟರು. ಉಳಿದವರ ಊಟ ತುಂಬ ನಿಧಾನವಾಗಿ ಸಾಗಿತು. ಚಿಕ್ಕಮ್ಮ ಚಂದ್ರುವನ್ನು ಪ್ರೀತಿಯಿಂದ ಉಪಚರಿಸುತ್ತಾ ಅವನ ಬಳಿಯೇ ಕುಳಿತಿದ್ದರು.

ಚಂದ್ರುವಿಗೂ ಚಿಕ್ಕಮ್ಮನೆಂದರೆ ತುಂಬ ಪ್ರೀತಿ. ಆಕೆಯೊಡನೆ ಮಾತನಾಡುವುದೆಂದರೆ ಬಹಳ ಆಸೆ. ಆಕೆ ಹೇಳಿದುದನ್ನು ಶಿರಸಾವಹಿಸಿ ಮಾಡುವ ಹಟ-ಹಂಬಲ.

ಮಾತಿನ ಮಧ್ಯೆ ಚಿಕ್ಕಪ್ಪ ಕೇಳಿದರು—

"ಹುಡುಗಿ ಹೇಗಿದ್ದಾಳೋ ಚಂದ್ರು?"

ಅವರು ತಮ್ಮ ಸೊಸೆಯಾಗುವಳನ್ನು ನೋಡಿರಲಿಲ್ಲ. ಅನಂತಯ್ಯನವರೇ ವರದಕ್ಷಿಣೆಯ ಆಸೆಗೆ ಆ ಹುಡುಗಿಯನ್ನು ಹುಡುಕಿದ್ದರು. ಅವರೇ ಲಗ್ನಪತ್ರಿಕೆಯನ್ನೂ ಮಾಡಿಕೊಂಡು ಬಂದಿದ್ದರು.

ಮೊದಲನೋಟದಲ್ಲಿ ಚಂದ್ರು ಆ ಹುಡುಗಿಯನ್ನು ಒಪ್ಪಿರಲಿಲ್ಲ. ಆದರೆ ತಂದೆಯ ಒತ್ತಾಯ ಆಜ್ಞೆಗಳ ಫಲವಾಗಿ ಆತ ತಲೆಬಾಗಬೇಕಾಯಿತು.

ಎರಡನೆಯ ದಿನವೂ ಅನಂತಯ್ಯ ಚಂದ್ರುವನ್ನು ಕರೆದುಕೊಂಡು ರಾಮಚಂದ್ರಯ್ಯನವರ ಮನೆಗೆ ಬಂದಿದ್ದರು ಆ ದಿನ ಚಂದ್ರುವಿನ ಭಾವೀಮಾವ ಮನೆಯಲ್ಲಿರಲಿಲ್ಲ. ಅವರ ಹೆಂಡತಿ ಮತ್ತು ಒಬ್ಬಳೇ ಮಗಳು ಪದ್ಮ ಇದ್ದರು. ಇಂಜನೀಯರ್ ರಾಮಚಂದ್ರಯ್ಯನವರಿಗೆ ಗಂಡುಮಕ್ಕಳಿರಲಿಲ್ಲ ಪದ್ಮಳೇ ಅವರ ಸರ್ವಸ್ವವಾಗಿದ್ದಳು. ಶ್ರೀರಂಗಪಟ್ಟಣದ ಬಳಿ ಅವರಿಗೆ ಹದಿನೈದು ಎಕರೆ ಪಿತ್ರಾರ್ಜಿತ ಆಸ್ತಿ ಇದ್ದಿತು. ಇದೆಲ್ಲವನ್ನೂ ನೋಡಿಯೇ ಅನಂತಯ್ಯ ಆ ಸಂಬಂಧ ಬೆಳೆಸಿದ್ದರು.

ಹುಡುಗಿ ಕಪ್ಪಾಗಿದ್ದಳು; ಗಂಡುಬೀರಿ, ಮನೆಕೆಲಸ ಬರುವುದಿಲ್ಲ, ಸಂಗೀತದ ಗಂಧವಿಲ್ಲ. ಅಂತಹ ಹುಡುಗಿಯನ್ನು ಮದುವೆಯಾಗಲು ಚಂದ್ರುವಿಗೆ ಸ್ವಲ್ಪವೂ ಇಷ್ಟವಿರಲಿಲ್ಲ. ಆದರೆ ತಂದೆಯ ಒತ್ತಾಯ ಅವನನ್ನು ಒಪ್ಪಿಸಿತು. ತಂದೆ ಹೇಳಿದ್ದರು: "ಎರಡು ಸಾವಿರ ವರದಕ್ಷಿಣೆ ಕೊಡುತ್ತಾರೆ. ನೀನು ಓದಿರುವ ಎಸ್.ಎಸ್ ಎಲ್ ಸಿ.ಗೆ ಯಾರು ಕೊಡುತ್ತಾರೆ ಅಷ್ಟು ಹಣ ಹೇಳು?"

ಚಂದ್ರುವಿಗೆ, ಅದುವರೆಗೂ ಆ ವರದಕ್ಷಿಣೆಯ ಸಮಾಚಾರ ತಿಳಿದಿರಲಿಲ್ಲ. ಆಗಲೇ ತಂದೆಯ ಬಾಯಿಂದ ಆ ಮಾತು ಕೇಳುತ್ತಿರುವುದು. ಅದು ಕಿವಿಹೊಕ್ಕಾಗ, ಅವನ ಕೋಪವೂ ಮೂಗಿನ ತುದಿಗೇರಿತು.

"ಓಹೋ! ವರದಕ್ಷಿಣೆಗೆ ಆಸೆಪಡುತ್ತಿದ್ದೀರೋ?"

ಚಂದ್ರುವಿನ ಆ ಮಾತಿನಲ್ಲಿ ವ್ಯಂಗ್ಯವಿತ್ತು.

ಅನಂತಯ್ಯ ಮಾತಾಡಲಿಲ್ಲ. ಅವರಿಗೆ ಮಗನ ಮನೋಭಾವ

ಮೊದಲಿನಿಂದಲೂ ತಿಳಿದಿತ್ತು. ವರದಕ್ಷಿಣೆ ತೆಗೆದುಕೊಂಡು ಮಾಡಿಕೊಂಡ ಮದುವೆಗಳನ್ನು ಕಂಡಾಗ ಅವನು ನಿರ್ದಾಕ್ಷಿಣ್ಯವಾಗಿ ಖಂಡಿಸಿದ್ದ.

ಹೆತ್ತು, ಹೊತ್ತು, ಮುದ್ದಾಗಿ ಸಾಕಿ ಸಲಹಿ, ಕೊರಗು ತಟ್ಟದಂತೆ ಕೋಮಲವಾಗಿ ಬೆಳಸಿ, ಹದಿನೇಳು - ಹದಿನೆಂಟು ವರ್ಷಗಳವರೆಗೆ ಕಷ್ಟ ದುಃಖಗಳನ್ನು ಲಕ್ಷಿಸದೆ ಪೋಷಿಸಿ ದೊಡ್ಡವಳನ್ನಾಗಿ ಮಾಡಿದ ಹೆಣ್ಣನ್ನು, ಮದುವೆಯ ಹೆಸರಿನಲ್ಲಿ ಯಾವುದೋ ಕಂಡೂ ಕಾಣದ ಮನೆಯ ಬಾಯಿಗೆ ನೂಕಿ, ಅಲ್ಲಿ ಪರಿಚಯವಿಲ್ಲದವನ ಪಾದ ಸೇವೆ ಮಾಡಿಸಿ, ಅವನ ಪಶುಪ್ರವೃತ್ತಿಗೆ ಬಲಿಕೊಡುವುದೂ ಅಲ್ಲದೆ, ಆ ಹುಡುಗಿಯ ಹೆಗಲಿನ ಮೇಲೆ ಹೊನ್ನಿನ ಹೊರೆ ಹೊರಿಸಿ, ಮಡಿಲಿಗೆ ಮಾಣಿಕ್ಯ ತುಂಬಿ, ಸೆರಗಿಗೆ ವರದಕ್ಷಿಣೆಯ ಹಿರಿಗಂಟು ಕಟ್ಟಿ ಕಳುಹಿಸಬೇಕೇ ?

ಚಂದ್ರುವಿನ ಆವರ್ಶವಾದ ಮುಂದುವರಿಯಿತು :

ಮದುವೆಯ ನೆಪದಲ್ಲಿ ಗಂಡಿಗೆ ಬೇಕಾದ್ದು ಹೆಣ್ಣೋ ಹಣವೋ?

ಹಣ ಬೇಕಾದವನು ತನ್ನ ಮದುವೆಯನ್ನು ಹಣದೊಡನೆಯೇ ಮಾಡಿಕೊಳ್ಳಲಿ. ಹೆಣ್ಣೇಕೆ ಬೇಕು?

ಹಕ್ಕಿಲ್ಲದ ಆ ರೊಕ್ಕಕ್ಕಾಗಿ ಹೋರಾಡುವುದು ಗಂಡಿನ ಮಿತಿ ಮೀರಿದ ನೀಚತ್ವೇ ಸರಿ !

ಆದರೆ ಆ ಸೊಕ್ಕು ಮುರಿಯುವ ಪರಿಯೆಂತು ?

ತನ್ನನ್ನು ತಾನೇ ಪ್ರಶ್ನಿಸಿಕೊಂಡ ಚಂದ್ರು

ಉತ್ತರಿಸಬೇಕಾದವನೂ ಅವನೇ ಅಲ್ಲವೇ ?

ಅದಕ್ಕೂ ಆತ ಸಿದ್ಧನಾಗಿದ್ದ. ಅವನ ಒಳ ದನಿ ಹೇಳಿತ್ತು—

"ಸಮಾಜದ ಆ ಸಂಸ್ಕೃತಿ !"

ನಾಗರಿಕತೆಯನ್ನೇ ಸಂಸ್ಕೃತಿಯೆಂದು ನೆಚ್ಚಿಕೊಂಡು ಅಧೋಗತಿಗಿಳಿಯುತ್ತಿರುವ ವಿದ್ಯಾವಂತ ಸಮಾಜ ಒಂದು ಕಡೆ. .

ಮೂಢ ನಂಬಿಕೆಯನ್ನೇ ಸಂಸ್ಕೃತಿಯೆಂದು ನಂಬಿ, ಅಂಧ ಶ್ರದ್ಧೆಯಿಂದ ಆಚರಿಸುತ್ತಾ ಅವಿದ್ಯೆಯ ಅಂಧಕಾರದಲ್ಲಿಯೇ ಉಳಿದಿರುವ ಸಮಾಜ ಇನ್ನೊಂದು ಕಡೆ....

ಇವೆರಡರ ನಡುವೆ ಒಂದು ಅಲ್ಪ ಸಂಖ್ಯಾತರ ಹೊಸ ಜನಾಂಗ ಉದಿಸಿ ಬರುತ್ತಿದೆ ಸರ್ವಸಮತೆಯ ವಿಶಾಲ ಹೃದಯವೆಂಬ ಹಣತೆಯಲ್ಲಿ ಮಾನವ ಧರ್ಮದ ದಯೆ, ಕ್ಷಮೆ, ಔದಾರ್ಯ, ಪರಹಿತ ಚಿಂತನೆ ಮೊದಲಾದ ಮಹೋನ್ನತ ಗುಣಗಳ ತೈಲವನ್ನು ತುಂಬಿ, ತ್ಯಾಗಮಯ ಸಾಧನೆಯ ಬತ್ತಿ ಹೊಸೆದು, ಆಚರಣೆಯ ಅಗ್ನಿ ಸ್ಪರ್ಶ ಮಾಡಿಸಿ, ಸಂಸ್ಕೃತಿ ಪ್ರದೀಪದ ಬೆಳಕಿನಲ್ಲಿ ಸಂಸಾರ ಸುಖವನ್ನು ಸವಿಯುತ್ತಾ, ಸುಲಿಯುವ ಸಮಾಜಕ್ಕೆ ಸವಾಲು ಹಾಕುವ ಸತ್ಯ ವೀರರ ಪ್ರಗತಿ ಜನಾಂಗ ಅದು. ತಾನೂ ಆ ಜನಾಂಗಕ್ಕೆ ಸೇರಿದವನೇ ಅಲ್ಲವೇ ?—ಎಂದುಕೊಂಡ ಚಂದ್ರು.

ಆ ರಾತ್ರಿ ಅವನಿಗೂ – ಅನಂತಯ್ಯನವರಿಗೂ ಬಿರುಸಾದ ವಾಗ್ವಾದವೇ ನಡೆಯಿತು. ಹಿರಿಯರೆದುರಿಗೆ ಕಿರಿಯ ಮುರಿದು ಬಿದ್ದ. ಅನಂತಯ್ಯ ತಂದೆಯೆಂಬ ಅಧಿಕಾರಬಲದಿಂದ ಮಗನ ಬಾಯಿ ಕಟ್ಟಿದರು. ಚಂದ್ರು ಅಸಹಾಯಕತೆಯಿಂದ ಅವರ ಅಸ್ತ್ರದಲ್ಲಿ ಬಂಧಿಸಲ್ಪಟ್ಟಿದ್ದ. ತಂದೆಯ ಅಸಹನೀಯ ಭರ್ತ್ಸನೆ ಮಗನನ್ನು ಮೌನವಾಗಿರಿಸಿತು.

ಮರುದಿನ ಅನಂತಯ್ಯ ರಾಮಚಂದ್ರಯ್ಯನವರ ಮನೆಗೆ ಬಂದರು. ಹುಡುಗ ಮದುವೆಗೆ ಒಪ್ಪುತ್ತಿಲ್ಲ ಎಂದರು. ಅದಕ್ಕೆ ಅವರು ಮುಂದೂಡಿದ ಕಾರಣವೆಂದರೆ—

"ಹುಡುಗ ವರದಕ್ಷಿಣೆ ಸಾಲದು ಎನ್ನುತ್ತಿದ್ದಾನೆ" ಎಂದು.

ರಾಮಚಂದ್ರಯ್ಯ ಎರಡು ಸಾವಿರ ಕೊಡಲು ಲೇಶವೂ ಚಿಂತಿಸದೆ ಮಾತು ಕೊಟ್ಟಿದ್ದರು. ಆದರೆ ಅನಂತಯ್ಯನವರು ಮುಂದೊಡ್ಡಿದ ಆತಂಕದ ಕಾರಣವನ್ನು ಕೇಳಿ ಅವರಿಗೆ ಆಶ್ಚರ್ಯವೇ ಆಯಿತು. ಎಷ್ಟು ಕೊಟ್ಟರೂ ತಮ್ಮ ಮಗಳಿಗೇ ಸೇರುವ ಸೊತ್ತೆಂದು ಅವರು ಭಾವಿಸಿದ್ದರು. ತಾವು ಕೊಡುವ ಹಣ ಅನಂತಯ್ಯನವರ ಕೈ ಸೇರುವುದೆಂದು ಅವರು ತಿಳಿದಿರಲಿಲ್ಲ.

"ಎಷ್ಟು ಬೇಕಂತೆ ?"

"ಐದು ಕೇಳುತ್ತಾನೆ"

ಅನಂತಯ್ಯ ತಮ್ಮ ಕೈ ಬೆರಳುಗಳನ್ನು ತೋರಿಸಿ ಸೂಚಿಸಿದರು.

ಐದು ಎಂದರೆ ಅವರ ಮಾತಿನಲ್ಲಿ ಐದುಸಾವಿರ.

ಹಣವೇನೋ ಕೊಳೆಯುತ್ತಿತ್ತು — ರಾಮಚಂದ್ರಯ್ಯನವರ ಬ್ಯಾಂಕಿನ ಲೆಕ್ಕದಲ್ಲಿ. ಆದರೂ ಒಮ್ಮಿಂದೊಮ್ಮೆಗೆ ಐದು ಸಾವಿರ ವೆಂದರೆ, ಸ್ವಲ್ಪ ಯೋಚಿಸಬೇಕಾದ ವಿಷಯವೇ ಆಯಿತು ಅವರಿಗೆ

ಹೆಂಡತಿಯೊಡನೆ ಸಮಾಲೋಚನೆ ನಡೆಸಿದರು. ಮಗಳಂತೂ ಚಂದ್ರುವನ್ನೇ ಮದುವೆಯಾಗುತ್ತೇನೆಂದು ಮೊಂಡು ಹಿಡಿದಳು

ಐದು ಸಾವಿರ ಉದುರಿತು ಅನಂತಯ್ಯನವರ ಜೋಳಿಗೆಗೆ. ಅದೇ ದಿನ ಲಗ್ನಪತ್ರಿಕೆ ಬರೆಸಿಕೊಂಡು, ಚಂದ್ರುವಿಗೆ ಹೇಳಬೇಕಾದುದನ್ನು ಹೇಳಿ ಅಷ್ಟಗ್ರಾಮಕ್ಕೆ ಮರಳಿದರು.

ಅನಂತರ ಪದ್ಮ ಪದೇ ಪದೇ ಚಂದ್ರುವನ್ನು ಹುಡುಕಿಕೊಂಡು ಬಂದಳು. ಮದುವೆಯಾಗುವ ಮುನ್ನವೇ ಸಲಿಗೆ ಬೆಳಸಿಕೊಂಡಳು. ಮೊದಲೇ ತಂದೆಯ ನಡತೆಯಿಂದ ಬೇಸರಗೊಂಡಿದ್ದ ಅವನಿಗೆ ಅವಳ ಸಲಿಗೆಯ ಸೋಗಿನ ಪ್ರತಿಷ್ಠೆ ಮತ್ತಷ್ಟು ಬೇಸರ ಹೆಚ್ಚಿಸಿತು. ಆದರೂ ಆಕೆಯನ್ನು ತಾನು ಕೈಹಿಡಿಯಬೇಕಲ್ಲ ಎಂದುಕೊಂಡ ಚಂದ್ರು.

ಮದುವೆಗೆ ಉಳಿದಿದ್ದು ಇನ್ನು ಮೂರೇ ದಿನ ಬೆಂಗಳೂರಿನಲ್ಲಿ ಹೆಣ್ಣಿನ ಮನೆಯಲ್ಲೇ ಮದುವೆಯಾದ್ದರಿಂದ ತಾನು ಗಂಡಿನ ದಿಬ್ಬಣದ ಜೊತೆಯಲ್ಲಿ ಹೊರಡಬೇಕೆಂದು ತಂದೆಯ ಆಜ್ಞೆಯಾಗಿತ್ತು. ಎಂತಲೇ ಆತ ಊರಿಗೆ ಬಂದಿದ್ದ.

ತನಗೂ, ತನ್ನ ತಂದೆಗೂ ಮಾತ್ರವೇ ತಿಳಿದಿದ್ದ ಇಷ್ಟೆಲ್ಲ ಹಿನ್ನೆಲೆಯ ಕಥೆಯನ್ನು ಚಂದ್ರು ಯಾರೊಡನೆ ಹೇಳಿ ಹೃದಯ ಹಗುರ ಮಾಡಿಕೊಳ್ಳಬೇಕು.

ಹಾಗೆ ಹೇಳಿಕೊಳ್ಳಬೇಕಾದ ವ್ಯಕ್ತಿ ಒಬ್ಬಳೇ ಒಬ್ಬಳು-ಚಿಕ್ಕಮ್ಮ. ಮಗನ ಮನಸ್ಸಿನ ಅಶಾಂತಿಯ ಕತ್ತಲೆಯನ್ನು ಬೆಳಕು ಮಾಡುವ ದಯಾದೀಪ.

"ಹುಡುಗಿ ಹೇಗಿದ್ದಾಳೋ ಚಂದ್ರು ?"

ಚಿಕ್ಕಮ್ಮ ಕೇಳಿದ ಪ್ರಶ್ನೆಗೆ ಒಂದೇ ಒಂದು ವಾಕ್ಯದಲ್ಲಿ ಉತ್ತರ ಕೊಡಬಹುದಾಗಿತ್ತು. ಅಷ್ಟರಿಂದಲೇ ತನಗೆ ಸಮಾಧಾನ ಸಿಕ್ಕದೆಂದು ಚಂದ್ರು, ನಡೆದ ಸಂಗತಿಯನ್ನು ಚಾಚೂ ಬಿಡದೆ ಆಕೆಗೆ ಹೇಳಿಕೊಂಡ.

ತಾನು ಊಟಕ್ಕೆ ಕುಳಿತಿರುವೆನೆಂಬುದೂ ಅವನಿಗೆ ಮರೆತು ಹೋಗಿತ್ತು ಅವನ ಮಾತು ಕೇಳುತ್ತಿದ್ದ ಚಿಕ್ಕಮ್ಮನೂ ಮೌನವಾಗಿಬಿಟ್ಟಿದ್ದರು. ಬಾಗಿಲು ಮರೆಯಲ್ಲಿ ನಿಂತು ವೆಂಕಮ್ಮನೂ ಅಣ್ಣನ ಕತೆಯನ್ನು ಕೇಳುತ್ತಿದ್ದುದು ಇಬ್ಬರಿಗೂ ತಿಳಿದಿರಲಿಲ್ಲ.

ಚಂದ್ರು ಕೈತೊಳೆದು ಬಂದ. ಅನಂತಯ್ಯನವರು ಬೀದಿಯ ಜಗುಲಿಯ ಮೇಲೆ ಕುಳಿತಿದ್ದರು. ತಾನು ಅವರೊಡನೆ ಕುಳಿತು ಕೊಳ್ಳುವ ಮನಸ್ಸಾಗಲಿಲ್ಲ ಚಂದ್ರುವಿಗೆ. ಅವನು ಮತ್ತೆ ಅಡಿಗೆಯ ಕೋಣೆಯಬಳಿಗೆ ಬಂದ.

ಚಿಕ್ಕಮ್ಮನೂ–ವೆಂಕಮ್ಮನೂ ಎದುರು ಬದರು ಕುಳಿತು ಊಟ ಮಾಡುತ್ತಿದ್ದರು. ಚಂದ್ರು ಬಾಗಿಲ ಬಳಿಯೇ ಕುಳಿತು ಅವರೊಡನೆ ಮಾತಿಗೆ ತೊಡಗಿದ.

"ವೆಂಕೂ ಬಂದು ಎಷ್ಟು ದಿನವಾಯಿತು ಚಿಕ್ಕಮ್ಮ ?"

"ತಿಂಗಳ ಮೇಲಾಯಿತು ಅಣ್ಣ"

ತಟ್ಟನೆ ಉತ್ತರಿಸಿಬಿಟ್ಟಳು ವೆಂಕಮ್ಮ. ಅವಳು ಹಾಗೆ ಹೇಳ ಬಾರದಾಗಿತ್ತೆಂದು ಚಿಕ್ಕಮ್ಮ ಬಯಸಿದ್ದಳು

ವೆಂಕಮ್ಮನ ಉತ್ತರ ಕೇಳಿ ಚಂದ್ರುವಿಗೂ ಅನುಮಾನವೇ ಆಯಿತು. ಎರಡು ತಿಂಗಳ ಹಿಂದೆ ಗಂಡನ ಮನೆಗೆಹೋದ ಹುಡುಗಿ ಒಂದು ತಿಂಗಳಾದ ಮೇಲೆ ತೌರಿಗೆ ಬಂದು ಬಿಟ್ಟಳೇ?–ಏಕೆ ಬಂದಳು? ಎಂದು ಪ್ರಶ್ನಿಸಿಕೊಂಡ ಚಂದ್ರು ಅದನ್ನು ಕೆವಕಿ ಕೇಳಿದರೆ ಯಾರ ಮನಸ್ಸಿಗಾದರೂ ನೋವಾಗಬಹುದೆಂದು ಸುಮ್ಮನಾದ.

"ಭಾವ ಇನ್ನೂ ಇಲ್ಲಿಗೆ ಬರಲೇ ಇಲ್ಲವಲ್ಲ ಚಿಕ್ಕಮ್ಮ"

ಭಾವನ ಕತೆ ಚಂದ್ರುವಿಗೇನು ಗೊತ್ತು ?

ಚಿಕ್ಕಮ್ಮನಿಗೇನೋ ಭಾವನ ಕತೆ ಹೇಳುವ ಆಸೆಯಿತ್ತು ; ಆದರೆ ಆ ಸಮಯದಲ್ಲಿ ಅಂತಹ ಅಹಿತಪ್ರಸಂಗಗಳೊಂದನ್ನೂ ಮಾಡಬಾರ ದೆಂದು ಆಕೆ ನಿಶ್ಚಯಿಸಿದ್ದಳು. ಮದುವೆಯ ಸಡಗರವೆಲ್ಲಾ ಮುಗಿದ ಮೇಲೆ, ವೆಂಕಮ್ಮನ ಪರಿಸ್ಥಿತಿಯನ್ನು ಅವನಿಗೆ ತಿಳಿಸಬೇಕೆಂದು ಅವರು ಹಂಚಿಕೆ ಹಾಕಿದ್ದರು.

"ಅವರು ಬಹುಶಃ ಬೆಂಗಳೂರಿಗೇ ನೇರವಾಗಿ ಬರಬಹುದಪ್ಪ"

ಎಂದರು ಚಿಕ್ಕಮ್ಮ. ಅನಂತರ ಊರಿನ ವಿಷಯದ ಬಗ್ಗೆ ಮಾತುಕತೆಗಳಾದುವು. ಪಕ್ಕದ ಮನೆಯ ಪಾರ್ವತಿಯ ಕುರಿತೂ ಮಾತು ಬಂದಿತು. ದಿಕ್ಕು ತಪ್ಪಿದ ಆ ಹುಡುಗಿಯ ಸ್ಥಿತಿಯನ್ನು ಕೇಳಿ ಮರುಗಿದ ಚಂದ್ರು.

ಮರುದಿನ ಊರಿನವರಿಗೆಲ್ಲಾ ಅನಂತಯ್ಯನವರ ಮನೆಯಲ್ಲಿ ದೇವರ ಸಮಾರಾಧನೆ. ಸೊಗಸಾದ ಮೃಷ್ಟಾನ್ನ ಭೋಜನವಾಯಿತು. ಅದೇ ಸಂಜೆಯೇ ಬೆಂಗಳೂರಿನ ರೈಲು ಹತ್ತಿದರು—ಗಂಡಿನ ಕಡೆಯವರು

ಮಲ್ಲೇಶ್ವರದಲ್ಲಿ ರಾಮಚಂದ್ರಯ್ಯನವರ ಮನೆಯ ಮುಂದುಗಡೆ ಭಾರೀ ಚಪ್ಪರ ಕಂಗೊಳಿಸುತ್ತಿತ್ತು. ಬಣ್ಣ ಬಣ್ಣದ ದೀಪಗಳಿಂದ ಮದುವೆಯ ಮಂಟಪ ಅಲಂಕೃತವಾಗಿತ್ತು. ಗಂಡಿನ ಕಡೆಯವರು ಇಳಿದುಕೊಳ್ಳಲು ವಿಶಾಲವಾದ ಬಂಗಲೆಯನ್ನೇ ತೆರವುಮಾಡಿಸಿದ್ದರು ರಾಮಚಂದ್ರಯ್ಯ

ವರಪೂಜೆಯಿಂದ – ಕನ್ಯಾದಾನದವರೆಗೆ ಉಭಯ ಪಕ್ಷಗಳೂ ಕಲಹ ಬಾರದಂತೆ ನಡೆದುಕೊಂಡವು ಚಂದ್ರು ಪದ್ಮಳ ಕೊರಳಿಗೆ ಮಾಂಗಲ್ಯ ಬಿಗಿದ. ವಧೂವರರ ತಲೆಯ ಮೇಲೆ ಆಶೀರ್ವಾದದ ಅಕ್ಷತೆ ಮಳೆಗರೆಯಿತು.

ಮದುವೆಯ ಸಮಾರಂಭ ಮುಗಿಸಿ, ಎಲ್ಲರೂ ಅಷ್ಟಗ್ರಾಮಕ್ಕೆ ಹಿಂತಿರುಗಿದ ದಿನವೇ, ಅನಂತಯ್ಯನವರಿಗೊಂದು ಕಾಗದ ಕಾದಿತ್ತು! ಅದು ನಾಗಪ್ಪನವರ ಕಾಗದ !!

"....ಇದೇ ನಿಮಗೆ ನಾನು ಬರೆಯುವ ಕೊನೆಯ ಕಾಗದ. ಇದರಲ್ಲಿ ನಿಮಗೆ ತಿಳಿಯಪಡಿಸುವುದೇನೆಂದರೆ, ನನಗೆ ನಿಮ್ಮ ಸಂಬಂಧ ಬೆಳೆಸಿದ್ದು ತಪ್ಪೆಂದು ತಿಳಿದಿದ್ದರಿಂದಲೂ, ನಿಮ್ಮ ಬಗ್ಗೆ ತುಂಬ ಅಸಮಾಧಾನವುಂಟಾಗಿರುವುದರಿಂದಲೂ, ನಾನು ಬೇರೆ ಮದುವೆ ಮಾಡಿಕೊಳ್ಳಲು ನಿಶ್ಚಯಿಸಿದ್ದೇನೆ ಕೈತುಂಬ ವರದಕ್ಷಿಣೆ ಕೊಟ್ಟು ಕನ್ಯೆಯನ್ನು ಧಾರೆಯೆರೆಯಲು ಒಬ್ಬರು ಮುಂದೆ ಬಂದಿದ್ದಾರೆ. ಆದ್ದರಿಂದ ಒಂದು ಕಾಸೂ ಬಳುವಳಿ ಇಲ್ಲದೆ ನಿಮ್ಮ ಮಗಳನ್ನು ಕಟ್ಟಿಕೊಂಡು ಬಾಳುವುದು ನನಗೆ ಬೇಕಾಗಿಲ್ಲ-ಇಷ್ಟವಿಲ್ಲ. ನಿಮ್ಮ ಮಗಳು

ಚೆನ್ನಾಗಿ ಬಾಳಬೇಕೆಂದು ನಿಮಗೆ ಇಷ್ಟವಿದ್ದರೆ, ಕೂಡಲೇ ಎರಡು ಸಾವಿರ ರೂಪಾಯಿಗಳನ್ನು ತೆಗೆದುಕೊಂಡು ನಿಮ್ಮ ಮಗಳನ್ನೂ ಕರೆದು ಕೊಂಡು ಬನ್ನಿ. ಇಷ್ಟವಿಲ್ಲದಿದ್ದರೆ ನಾನೇನೂ ನಿಮ್ಮನ್ನು ಬಲವಂತ ಮಾಡುವುದಿಲ್ಲ ಗಂಡಸಾದವನು ಹೇಗಾದರೂ ಸುಖವಾಗಿ ಬಾಳ ಬಲ್ಲ. ನಿಮ್ಮ ಮಗಳಿಗೆ ಜೀವನಾಂಶ ಬೇಕಾದರೆ ಕೋರ್ಟಿನ ಮೂಲಕ ವಸೂಲು ಮಾಡಿಕೊಳ್ಳಬಹುದು – ಇತಿ, ನಾಗಪ್ಪ."

ನಡುಗುವ ಕೈಗಳಲ್ಲಿ ಹಿಡಿದಿದ್ದ ಕಾಗದವನ್ನು ಓದಿ ಮುಗಿಸಿದರು ಅನಂತಯ್ಯ. ಕ್ಷೇಮಸಮಾಚಾರದ ಒಕ್ಕಣೆಯಿಲ್ಲ ನಮಸ್ಕಾರದ ಅಥವಾ ವಿಜ್ಞಾಪನೆಯ ಲೇಖನದ ಶಿಷ್ಟಾಚಾರವಿಲ್ಲ. ಕಾಗದದ ಭಾಷೆ ಯಂತೂ ವಕೀಲರ ನೋಟೀಸಿನಂತಿದೆ

ಅನಂತಯ್ಯನವರಿಗೆ ಮುಂದೇನು ಮಾಡಬೇಕೆಂದು ತೋಚ ಲಿಲ್ಲ. ಅವರು ನಿಂತಲ್ಲಿಯೇ ನಿಂತಿದ್ದರು. ಅಷ್ಟರಲ್ಲಿ ಬಂದ ಚಂದ್ರು ತಂದೆಯ ಕೈಯಿಂದ ಕಾಗದ ತೆಗೆದುಕೊಂಡು ಓದಿದಾಗ ಅವನಿಗೆ ಸಿಡಿಲು ಬಡಿದಂತಾಯಿತು. ಮನೆಯಲ್ಲಿ ಚಿಕ್ಕಮ್ಮನನ್ನು ಮೊದಲು ಗೊಂಡು ಎಲ್ಲರೂ ತನ್ನ ತಂಗಿಗೊದಗಿದ ವಿಪತ್ತಿನ ಕಥೆಯನ್ನು ಮುಚ್ಚಿಡುತ್ತಿದ್ದಾರೆಂದು ಅವನಿಗೆ ತಿಳಿಯಿತು. ಆ ಕಾಗದವನ್ನು ಹಿಡಿದುಕೊಂಡು ಉದ್ವೇಗದಿಂದಲೇ ಚಿಕ್ಕಮ್ಮನ ಬಳಿಗೋಡಿದ.

"ಚಿಕ್ಕಮ್ಮ ಚಿಕ್ಕಮ್ಮ"

ಮನೆಗೆಲಸದಲ್ಲಿ ಮನಸ್ಸಿಟ್ಟಿದ್ದ ಚಿಕ್ಕಮ್ಮ ಗಾಬರಿಗೊಂಡು ಹಿಂತಿರುಗಿ ನೋಡಿದಳು.

ಚಂದ್ರು ನಿಂತಿದ್ದಾನೆ; ಕೈಯಲ್ಲಿ ಕಾಗದವಿದೆ. ಮುಖದಲ್ಲಿ ಕೋಪ ಕಾಣುತ್ತಿದೆ ಕಣ್ಣುಗಳಲ್ಲಿ ಅಪಾರ ಯಾತನೆ ತುಂಬಿದೆ.

"ಏನು ಚಂದ್ರು ?"

"ನೋಡಿದೆಯಾ ಚಿಕ್ಕಮ್ಮ ಈ ಕಾಗದ"

"ಯಾರದ್ದು ?"

"ಭಾವ ಬರೆದಿದ್ದಾರೆ ಅಗ್ರಹಾರದಿಂದ"

ಆ ಮಾತು ವೆಂಕಮ್ಮನಿಗೂ ಕೇಳಿಸಿತು. ತನ್ನ ಗಂಡ ಬರೆ ದಿರುವ ಆ ಕಾಗದದಲ್ಲಿ ಏನಿದೆಯೋ ಎಂಬ ಕುತೂಹಲದಿಂದ ಆಕೆಯೂ

ಚಂದ್ರುವಿನ ಬಳಿಗೆ ಬಂದು ನಿಂತಳು.

"ಏನು ಬರೆದಿದ್ದಾರೆ ಓದೋ ಚಂದ್ರು"

ಚಿಕ್ಕಮ್ಮ ಒತ್ತಾಯ ಪಡಿಸಿದರು.

"ಈಗ ಏನೇನು ನಡೆದಿದೆಯೋ ಹೇಳು ಚಿಕ್ಕಮ್ಮ. ಅದನ್ನೆಲ್ಲಾ ಏಕೆ ಮುಚ್ಚಿಡುತ್ತಿದ್ದೀಯೆ?"

"ಆಗಲಿ ಹೇಳುತ್ತೇನೆ-ಆ ಕಾಗದದಲ್ಲಿ ಏನು ಬರೆದಿದೆಯೋ ಓದಪ್ಪ"

"ನಾನು ಓದಿಕೊಂಡಿದ್ದೇನೆ ಚಿಕ್ಕಮ್ಮ"

"ಹಾಗಾದರೆ ಬರುತ್ತೇನೆಂದು ಬರೆದಿದ್ದಾರೇನು?"

"....ಇನ್ನೊಂದು ಮದುವೆ ಮಾಡಿಕೊಳ್ತಾರಂತೆ"

ನಾಗಪ್ಪನವರು ತುಂಬ ಸುಲಭವಾಗಿ ಬರೆದಿದ್ದ ವಾಕ್ಯವನ್ನು ಚಂದ್ರು ಅತಿ ಕಷ್ಟದಿಂದ ಹೇಳಿದ. ಚಿಕ್ಕಮ್ಮನ ಮುಖ ಕಪ್ಪಿಟ್ಟಿತು; ವೆಂಕಮ್ಮನ ಕಣ್ಣು ಹನಿಯಿಟ್ಟಿತು.

ಚಂದ್ರುವಿನ ಒತ್ತಾಯದಿಂದ, ವೆಂಕಮ್ಮ—ನಾಗಪ್ಪನವರ ದಾರುಣ ಕಥೆಯನ್ನು ಹೇಳಿದರು ಚಿಕ್ಕಮ್ಮ. ಚಂದ್ರುವಿಗಂತೂ ಮೈ ಪರಚಿಕೊಳ್ಳುವಂತಾಯಿತು

ವರದಕ್ಷಿಣೆ....ವರದಕ್ಷಿಣೆ....ವರದಕ್ಷಿಣೆ

ಆ ಶಬ್ದ ಅವನ ತಲೆಯಲ್ಲಿ ಕುಣಿಯಿತು. ವರದಕ್ಷಿಣೆಯಿಲ್ಲದೆ ತನ್ನ ತಂಗಿಯನ್ನು ಮದುವೆಯಾದ ನಾಗಪ್ಪನವರನ್ನು ಕಂಡು, ಅವನಿಗೆ ಅವರ ವಿಷಯದಲ್ಲಿ ತುಂಬ ಅಭಿಮಾನ ಮೂಡಿತ್ತು. ಮದುವೆಯಾಗುವ ಗಂಡುಗಳೆಲ್ಲಾ ತನ್ನ ಭಾವನಂತೆಯೇ ನಡೆದುಕೊಂಡರೆ ಹೆಣ್ಣು ಹೆತ್ತವರಿಗೆ ಪಾಡು ಪಡುವ ಪ್ರಸಂಗ ಒದಗುವುದಿಲ್ಲವೆಂದುಕೊಂಡಿದ್ದ.

ಆದರೆ ಆ ಅಭಿಪ್ರಾಯವನ್ನು ಈಗ ಬದಲಿಸಬೇಕಾಯಿತು. ಅವರೂ ವರದಕ್ಷಿಣೆಗೆ ಆಸೆ ಪಟ್ಟು ಹೆಂಡತಿಯನ್ನು ಬಿಟ್ಟು, ಬೇರೊಂದು ಮದುವೆಯಾಗಲು ಸಿದ್ಧರಾಗಿರುವುದನ್ನು ಹೇಗಾದರೂ ತಪ್ಪಿಸಬೇಕು ಎಂದುಕೊಂಡ ಚಂದ್ರು.

"ಹಾಗಾದರೆ ಈಗೇನು ಮಾಡುವುದು ಚಿಕ್ಕಮ್ಮ?"

ಅಡಿಗೆಯ ಮನೆಯ ಕಡೆಗೇ ಬರುತಿದ್ದ ಅನಂತಯ್ಯನವರಿಗೂ

ಚಂದ್ರುವಿನ ಆ ಮಾತು ಕೇಳಿಸಿತೇನೋ !

"ಮಾಡುವುದೇನು ? ಅವನ ಪಾಡು ಅವನಿಗೆ – ನಮ್ಮ ಪಾಡು ನಮಗೆ"—ಎಂದರು ಅನಂತಯ್ಯ.

ಚಂದ್ರ ಬಿಡುಗಣ್ಣಿನಿಂದ ಅವರನ್ನು ನೋಡಿದ. ಆ ನೋಟದಷ್ಟೇ ತೀಕ್ಷ್ಣವಾದ ಧ್ವನಿಯಲ್ಲಿ—

"ಹಾಗಾದರೆ ವೆಂಕುವಿನಗತಿ ?"

"ನಾವೇನು ಸತ್ತು ಹೋಗಿದ್ದೇವೆಯೋ ?"

ಅನಂತಯ್ಯನವರೂ ಅಷ್ಟೇ ಬಿರುಸಿನಿಂದ ಉತ್ತರಕೊಟ್ಟರು.

"ಸಾಯದೆ ಬದುಕಿದ್ದೇವೇನು ? ಬದುಕಿದ್ದರೆ ಅವಳ ಸ್ಥಿತಿಯನ್ನು ಕಂಡು ಕಂಡು ಸುಮ್ಮನಿರುತ್ತಿದ್ದೆವೇನು ?"

"ಸುಮ್ಮನಿರದೆ ಏನು ಮಾಡುತ್ತಿದ್ದೆ ?"

"ನಾನೇನು ಮಾಡುವುದು? – ತಂದೆಯಾದ ನೀವೇ ಕಲ್ಲಾಗಿರುವಾಗ!" ಚಂದ್ರ ಎಂದೂ ಹೀಗೆ ತಂದೆಯನ್ನು ಎದುರಿಸಿದವನಲ್ಲ. ಆದರೆ ಆದಿನ ಪರಿಸ್ಥಿತಿ ಆ ಪ್ರಕೋಪಕ್ಕೆ ಸೆಳೆದಿತ್ತು.

ಇನ್ನು ತಂದೆ–ಮಕ್ಕಳ ವಾದ ವಿವಾದ ದ್ವೇಷಕ್ಕೆಡೆಗೊಡುವುದೆಂದು ಊಹಿಸಿದ ಚಿಕ್ಕಮ್ಮ

"ಹೋಗಲಿ ಸುಮ್ಮನಿರಪ್ಪ ಚಂದ್ರು"

ಎಂದರು. ಆದರೆ ಚಂದ್ರು ಅಷ್ಟರಿಂದಲೇ ಸಮಾಧಾನಗೊಳ್ಳುವಂತಿರಲಿಲ್ಲ. ಆ ದಿನ ತನ್ನ ತಂಗಿಯ ಬಾಳ್ವೆಯ ಪ್ರಶ್ನೆ ಯಾವುದಾದರೊಂದು ರೀತಿಯಲ್ಲಿ ಬಗೆಹರಿಯಲೇಬೇಕೆಂದು ಅವನು ನಿಶ್ಚಯಿಸಿದ್ದ.

"ಯಾಕೆ ಸುಮ್ಮನಿರಬೇಕು ಚಿಕ್ಕಮ್ಮ ? ನಾಳೆ ಕಾಲದಲ್ಲಿ ವೆಂಕುವಿಗೆ ಯಾರು ಆಗುತ್ತಾರೆ ? ಅವಳಿಗೆ ಅವಳ ಗಂಡನೇ ದಿಕ್ಕಲ್ಲದೆ ಅಪ್ಪ ಎಷ್ಟು ದಿನ ಅವಳ ಭಾರ ಹೊತ್ತಾರು ?"

"ಈಗೇನು ಮಾಡು ಅನ್ನುತ್ತೀಯೋ ಚಂದ್ರು?"

ಚಿಕ್ಕಮ್ಮ ಮೃದುವಾಗಿ ಕೇಳಿದರು.

"ಭಾವ ಕೇಳುವ ಎರಡು ಸಾವಿರವನ್ನು ಕೊಟ್ಟರೆ, ವೆಂಕುವಿನ ಒಡೆದ ಬಾಳನ್ನು ಕೂಡಿಸಿದ ಹಾಗೆಯೇ ಚಿಕ್ಕಮ್ಮ."

"ಎರಡು ಸಾವಿರ ! ಹಹ್ಹ ಹ್ಹ !!" – ನಕ್ಕರು ಅನಂತಯ್ಯ.

"ಅವನೇನೋ ಕೇಳುತ್ತಾನೆ, ನೀನೂ ಶಿಫಾರಸು ಮಾಡು ತ್ತಿದ್ದೀಯೋ; ಆದರೆ ಕೊಡುವವರು ಯಾರು........ಎರಡು ಸಾವಿರ ? ಹಹ್ಹಹ್ಹಾ!"

ಅನಂತಯ್ಯನವರ ಮಾತು ಎಲ್ಲರನ್ನೂ ಅಣಕಿಸಿತು. ಚಂದ್ರು ವಿಗಂತೂ ತಂದೆಯ ಕಪಾಳಕ್ಕೆ ಹೊಡೆಯುವಷ್ಟರಮಟ್ಟಿಗೆ ರೋಸಿ ಹೋಯಿತು.

ತಂದೆ....ಅಂಥ ತಂದೆ ಇದ್ದರೇನು ? ಸತ್ತರೇನು ?

ತನಗಾಗಿ ಐದುಸಾವಿರ ವರದಕ್ಷಿಣೆ ವಸೂಲು ಮಾಡಿದ ಅದೇ ತಂದೆ ತನ್ನ ಮಗಳಿಗಾಗಿ ಎರಡು ಸಾವಿರ ವರದಕ್ಷಿಣೆ ಕೊಡಲು ಒಪ್ಪದೆ ಹಟ ಮಾಡುತ್ತಿದ್ದಾನೆ

ತಂದೆಯಂತೆ ತಂದೆ ...ಹೃದಯವಿಲ್ಲದ ತಂದೆ ಮಕ್ಕಳಿಗೆ ಜನ್ಮ ಕೊಡುವ ಬದಲು ಹಣಕ್ಕೇ ಜನ್ಮ ಕೊಟ್ಟಿದ್ದರೆ . ಒಂದು ವೇಳೆ ಅದು ಸಾಧ್ಯವಿದ್ದಿದ್ದರೆ ಹಾಗೇ ಮಾಡುತ್ತಿದ್ದನೇನೋ ಆತ ! ಎಂದುಕೊಂಡ ಚಂದ್ರು.

"ನೀನೇ ಕೊಡಬೇಕು ಧರ್ಮಕ್ಕೆ ಕೊಡುತ್ತೀಯಾ ? ನನಗೆ ಐದು ಸಾವಿರ ತೆಗೆದುಕೊಂಡೆಯಲ್ಲ, ಅದರಲ್ಲಿ ಎರಡು ಸಾವಿರವನ್ನು ನನ್ನ ತಂಗಿಗೆ ಖರ್ಚುಮಾಡು "

ರೋಷದಿಂದ ನುಡಿದ ಚಂದ್ರು.

"ಎರಡು ಸಾವಿರ ಕೊಡುವ ಮನಸ್ಸಿದ್ದರೆ, ಆ ಹಳ್ಳಿಯ ಮೇಷ್ಟ್ರಿ ಗೇಕೆ ನನ್ನ ಮಗಳನ್ನು ಧಾರೆಯೆರೆಯುತ್ತಿದ್ದೆ. ಯಾವನಾದರೊಬ್ಬ ಹೆಚ್ಚು ಸಂಪಾದಿಸುವ ಪಟ್ಟಣದ ಹುಡುಗನನ್ನೇ ಹುಡುಕುತ್ತಿದ್ದೆ." ಎಂದರು ಅನಂತಯ್ಯ.

"ಅಂದರೆ ಕೊಡುವುದಿಲ್ಲವೆಂದೋ ನೀನು ಹೇಳುವುದು ?"

ತಂದೆ ಬಳಸಿ ಬಳಸಿ ಮಾತನಾಡುತ್ತಿರುವುದನ್ನು ಸಹಿಸಲಾರದೆ ನೇರವಾಗಿ ಕೇಳಿದ ಚಂದ್ರು—

"ಹೌದು, ಒಂದು ಕಿಲುಬುಕಾಸೂ ಕೊಡುವುದಿಲ್ಲ"

ಎಂದು ಹೇಳುತ್ತಾ ಅನಂತಯ್ಯ ಅಲ್ಲಿಂದ ಹೊರಟುಹೋದರು.

ವೆಂಕಮ್ಮನ ಸೆರಗು ಕಣ್ಣೀರಿನಿಂದ ತೋಯ್ದು ಹೋಗಿತ್ತು.

ಚಿಕ್ಕಮ್ಮ ದಿಕ್ಕು ತೋಚದೆ ತಲೆತಗ್ಗಿಸಿದ್ದರು. ಚಂದ್ರು ಮಾತ್ರ ದಿಟ್ಟತನದಿಂದ ನಿಂತು, ಮುಂದಿನ ಕಾರ್ಯಕ್ಕೆ ಕೈ ಹಾಕಲು ನಿಶ್ಚಯಿಸಿದ್ದ.

ಎರಡು ನಿಮಿಷಗಳ ನಂತರ ಚಿಕ್ಕಮ್ಮನ ಕಣ್ಣಿನಿಂದಲೂ ಹನಿ ಉದುರಿತು. ಅದನ್ನು ಕಂಡ ಚಂದ್ರುವಿಗೆ ಕರುಳೇ ಕಿತ್ತುಬರುವಂತೆ ಆಯಿತು.

"ನೀನೇಕೆ ಅಳುತ್ತೀಯೆ, ಸುಮ್ಮನಿರು ಚಿಕ್ಕಮ್ಮ."

"ಸಾಯುವವರೆಗೂ ಆ ಹುಡುಗಿ ಹೀಗಯೇ ಇರಬೇಕೇ ಚಂದ್ರು?"

"ನಾನಿದ್ದೇನಲ್ಲ ಚಿಕ್ಕಮ್ಮ"

"ನಾನಿರುವ ಹಾಗೆಯೇ ನೀನೂ ಇದ್ದೀಯೇ"

"ಅಲ್ಲ ಚಿಕ್ಕಮ್ಮ. ನಾನು ಬೇರೆ ಯೋಚನೆ ಮಾಡಿದ್ದೇನೆ!"

"ಹೆಂಗಸಿಗೆ ಗಂಡ ಒಡವೆ ಎನ್ನುವುದನ್ನು ಮರೆಯಬೇಡ ಚಂದ್ರು. ಹೆತ್ತವರು, ಒಡಹುಟ್ಟಿದವರು ಕೊನೆಯವರೆಗೂ ಒಂದೇ ಸಮನಾಗಿರುವುದಿಲ್ಲ."

"ನೀನು ಯೋಚಿಸಬೇಡ ಚಿಕ್ಕಮ್ಮ ನಾನು ಭಾವನನ್ನು ಕಂಡು ಮಾತನಾಡುತ್ತೇನೆ"

"ಬರೀ ಮಾತು ಏನು ಮಾಡಬಲ್ಲುದು ಚಂದ್ರು? ಹಣ ಬೇಕಲ್ಲ ಮಗು ಹಣ....ಎರಡು ಸಾವಿರ."

"ಅದನ್ನು ಹೇಗಾದರೂ ಮಾಡುತ್ತೇನೆ ಚಿಕ್ಕಮ್ಮ."

ಮಗನ ಮಾತಿನ ಧ್ವನಿ ಆಶಾದಾಯಕವಾಗಿತ್ತು. ಚಿಕ್ಕಮ್ಮನ ಮನಸ್ಸಿನಲ್ಲೂ ಅರೆಕ್ಷಣ ಬೆಳಕು ಮಿಂಚಿತು.

"ಮಗು, ನನ್ನ ಸರ ಇದೆ – ನಮ್ಮ ತಂದೆಯ ಮನೆಯಲ್ಲಿ ಕೊಟ್ಟಿದ್ದು. ಈಗಲೂ ನಾನೂರು ರೂಪಾಯಿ ಬಾಳುತ್ತದೆ. ಅದನ್ನು ಬಿಲೆಮಾಡಿ, ಹಣ ಜತೆಮಾಡು ಮಗು."

"ಬೇಡ ಚಿಕ್ಕಮ್ಮ. ನಿನ್ನ ಒಡವೆ ಏಕೆ ಮಾರಬೇಕು ?"

"ನನ್ನ ಮಗಳಿಗಿಂತ ಆ ಒಡವೆ ಹೆಚ್ಚೇ ಚಂದ್ರು ? ಅವಳು ತನ್ನ 'ಒಡವೆ' ಸಂಪಾದಿಸಿಕೊಂಡು ಸುಖವಾಗಿದ್ದರೆ ನನಗೆ ಈ ಒಡವೆಯಂಥ

ಹೆತ್ತು ಒಡವೆ ಹಾಕಿಕೊಂಡಷ್ಟು ಸಂತೋಷ."

ಚಿಕ್ಕಮ್ಮನ ಮಾತು ಕೇಳಿ ಚಂದ್ರುವಿನ ಕಣ್ಣು ತುಂಬಿತು. ಆ ವಾತ್ಸಲ್ಯಮಯಿಯ ಮಾತು ಹೃದಯವನ್ನೂ ತುಂಬಿತು. ಗಂಟಲಲ್ಲಿ ನಿಂತ ಮಾತು ಹೊರಗೆ ಬರದೆ, ತುಟಿಬಿಗಿ, ಕಣ್ಣೆಯುಬ್ಬಿ, ಕೃತಜ್ಞತೆಯ ಮುಖಭಾವ ಮೂಡಿತು

"ಸರ ಹಾಕಿಕೋ ಚಿಕ್ಕಮ್ಮ. ನಾನು ಹೇಗಾದರೂ ಮಾಡಿ ಹಣ ಜೊತೆ ಮಾಡುತ್ತೇನೆ" ಎಂದ ಚಂದ್ರು.

ಮರುದಿನ ಬೆಳಗಿನ ರೈಲಿನಲ್ಲಿ, ತಂದೆಗೂ ಹೇಳದೆ ಚಂದ್ರು ಬೆಂಗಳೂರಿಗೆ ಬಂದ ಮದುವೆಗೆ ತೆಗೆದುಕೊಂಡಿದ್ದ ರಜೆ ಇನ್ನೂ ಮುಗಿದಿರಲಿಲ್ಲವಾದ್ದರಿಂದ ಕಚೇರಿಗೆ ಹೋಗುವ ತೊಂದರೆಯಿರಲಿಲ್ಲ. ತನ್ನ ಕೊಠಡಿಯಿಂದ ನೇರವಾಗಿ ಸರ್ಕಾರಿ ಟ್ರೆಷರಿಗೆ ಬಂದು, ತನ್ನ ಪಾಸ್ ಬುಕ್‌ನಲ್ಲಿದ್ದ ಕೆಲಸಕ್ಕೆ ಸೇರಿದಾಗಿನಿಂದ ಕೂಡಿಟ್ಟಿದ್ದ ಎಂಟು ನೂರು ರೂಪಾಯಿಗಳನ್ನು ಒಂದಕ್ಕೆ ಪಡೆದುಕೊಂಡ ಹೋಟೆಲಿನಲ್ಲಿ ಊಟ ಮುಗಿಸಿ ರೈಲು ಹತ್ತಿ ದೇವಲಾಪುರದ ಸ್ಟೇಷನ್ನಿನಲ್ಲಿ ಇಳಿದು ಅಗ್ರಹಾರ ಸೇರುವ ವೇಳೆಗೆ ಮುಸುಕು ಕತ್ತಲೆಯೇ ಆಯಿತು. ಅಲ್ಲಿ ಅವನು ಮೊದಲು ಎದುರುಗೊಂಡ ವ್ಯಕ್ತಿ ಲಕ್ಷ್ಮಮ್ಮ.

ಚಂದ್ರು, ಶ್ಯಾನುಭೋಗರ ಮನೆಯ ಬಳಿಗೆ ಬಂದಾಗ, ಲಕ್ಷ್ಮಮ್ಮ ಬೀದಿಯ ಜಗುಲಿಯ ಕಂಭಕ್ಕೆ ಆತುಕೊಂಡು ನಿಂತಿದ್ದರು. ಅವರನ್ನೇ ವಿಚಾರಿಸೋಣವೆಂದು ಚಂದ್ರು ಕೇಳಿದ—

"ನಾಗಪ್ಪ ಮೇಷ್ಟ್ರು ಮನೆ ಎಲ್ಲಿದೆ?"

"ಪಕ್ಕದ ಮನೆಯೇ"

ಎಂದು ಕೈತೋರಿಸಿದರು ಆಕೆ ಚಂದ್ರು ಬೇಗಬೇಗನೆ ಹೆಜ್ಜೆ ಹಾಕಿದ ಬಾಗಿಲ ಬಳಿಗೆ ಬಂದು ನೋಡಿದ. ಬೀಗ ಹಾಕಿದ್ದುದನ್ನು ಕಂಡು ನಿರಾಶೆಯಾಯಿತು. ಎರಡು ಕ್ಷಣ ಏನು ಮಾಡಲೂ ತೋರದೆ ಅಲ್ಲಿಯೇ ನಿಂತ.

ಎಲ್ಲಿಗೆ ಹೋದರೆಂದು ತಿಳಿಯಲು ಮತ್ತೆ ಲಕ್ಷ್ಮಮ್ಮನವರನ್ನೇ ಕೇಳಬೇಕಾಯಿತು.

"ಬೀಗ ಹಾಕಿದೆಯೇನು? ಹಾಗಾದರೆ ಎಲ್ಲೋ ತಿರುಗಾಡಿ

ಕೊಂಡು ಬರಲು ಹೋಗಿರಬೇಕು" ಎಂದರು ಆಕೆ. ಚಂದ್ರು ಬೀದಿಯಲ್ಲೇ ನಿಂತಿದ್ದ. ಅದನ್ನು ನೋಡಿಕೊಂಡು ಸುಮ್ಮನಿರಲಾರದೆ ಲಕ್ಷ್ಮಮ್ಮ—

"ಒಳಗೆ ಬಂದು ಕೂತುಕೊಳ್ಳಿ ಇನ್ನೇನು ಅವರು ಬರಬಹುದು" ಎಂದರು ಆದರೆ ಚಂದ್ರು ಒಳಗೆ ಹೋಗದೆ ಬೀದಿಯ ಜಗುಲಿಯ ಮೇಲೆಯೇ ಕುಳಿತ.

ಸ್ವಲ್ಪ ಹೊತ್ತಿನ ನಂತರ—

"ನೀವೇನಾಗಬೇಕು ನಾಗಪ್ಪನವರಿಗೆ ?"

"ಅವರು ನಮ್ಮ ಭಾವ"

"ಅಂದರೆ....?"

"ನನ್ನ ತಂಗಿಯನ್ನೇ ಅವರಿಗೆ ಕೊಟ್ಟಿರುವುದು"

"ಹಾಗಾದರೆ ನೀವು ನಮ್ಮ ವೆಂಕುವಿನ ಅಣ್ಣಂದಿರೋ ?"

ಆಶ್ಚರ್ಯದಿಂದ ಕೇಳಿದರು ಲಕ್ಷ್ಮಮ್ಮ.

"ಹ್ಞಾಂ"

"ವೆಂಕಮ್ಮ ಆರೋಗ್ಯವಾಗಿದ್ದಾಳೆ ತಾನೇ ?"

"ಹ್ಞಾಂ"

"ಪಾಪ, ತುಂಬ ಒಳ್ಳೆಯ ಹುಡುಗಿ."

ಎಂದುಕೊಂಡರು ಲಕ್ಷ್ಮಮ್ಮ.

"ಒಳಗೆ ಬನ್ನಿ. ಇಲ್ಲೇ ಕೈಕಾಲು ತೊಳೆದುಕೊಂಡು ಊಟ ಮಾಡಿಬಿಡಿ....ಪಾಪ, ನಿಮ್ಮ ಭಾವ ಅಡಿಗೆ ಮಾಡಿಕೊಂಡಿದ್ದಾರೋ ಇಲ್ಲವೋ"

"ಪರವಾಗಿಲ್ಲ, ಊಟಕ್ಕೇನು ಅವಸರ ?"

ಅಷ್ಟರಲ್ಲಿ ಶ್ಯಾನುಭೋಗರು ಬಂದರು. ಲಕ್ಷ್ಮಮ್ಮ ಬಾಗಿಲಿನ ಬಳಿಯೇ ಚಂದ್ರುವಿನ ಪರಿಚಯ ಮಾಡಿಸಿದರು. ಅವರಿಬ್ಬರ ಒತ್ತಾಯದಿಂದ ಚಂದ್ರು ಊಟಕ್ಕೇಳಬೇಕಾಯಿತು.

"ಯಾರಮ್ಮ ಅದು ?"

ಅದು ಪುಟ್ಟ ಸೀತೆಯ ಪ್ರಶ್ನೆ.

"ನಿಮ್ಮಕ್ಕನ ಅಣ್ಣ ಕಣೆ ?"

ಲಕ್ಷ್ಮಮ್ಮನವರ ಉತ್ತರ ವಿಚಿತ್ರವಾಗಿತ್ತು.

ಅಕ್ಕನ ಅಣ್ಣ, ಅಕ್ಕನ ತಂಗಿಗೂ ಅಣ್ಣನೇ ಅಲ್ಲವೇ ? ತನಗೂ ಆತ ಅಣ್ಣನೇ ಆದನಲ್ಲ !–ಎಂದು ತರ್ಕಿಸಿಕೊಂಡಳು ಸೀತು.

"ವೆಂಕಮ್ಮನ ಅಣ್ಣ ಕಣೇ–ಈಗ ಗೊತ್ತಾಯ್ತೇ ?"

"ಓ...." ಎಂದು ಆಶ್ಚರ್ಯ ಸೂಚಿಸಿದಳು ಸೀತು.

ಊಟಕ್ಕೆ ಕುಳಿತಾಗ, ಮಾತಿನ ಮಧ್ಯೆ ಚಂದ್ರು ತನ್ನ ಭಾವನ ವಿಷಯವನ್ನು ಹೇಳಬೇಕಾಯಿತು. ವರದಕ್ಷಿಣೆಯಿಲ್ಲದಿದ್ದರೆ ಹೆಂಡತಿಯೂ ಬೇಡ ಎಂದು ವೆಂಕಮ್ಮನನ್ನು ಬಿಟ್ಟು ಬಂದ ನಾಗಪ್ಪನವರ ವಿಷಹೃದಯ ಆದಿನ ಶಾನುಭೋಗರಿಗೆ ತಿಳಿಯಿತು. ನಾಗಪ್ಪನವರ ವಿಷಯದಲ್ಲಿ ಸದ್ಭಾವನೆ ಕ್ಷಣಮಾತ್ರದಲ್ಲಿ ಅಳಿಸಿಹೋಯಿತು.

ಚಂದ್ರು ತನ್ನ ತಂದೆಯ ವೊಂದುತನವನ್ನು ವಿವರಿಸಿದಾಗ—

"ಇನ್ನು ಆ ಹುಡುಗಿಯ ಗತಿ ಏನಪ್ಪಾ?"–ಎಂದರು ಲಕ್ಷ್ಮಮ್ಮ.

"ನೀನೇನು ಮಾಡಬೇಕೆಂದಿದ್ದೀಯಪ್ಪಾ ?"–ಎಂದರು ಶ್ಯಾನುಭೋಗರು.

"ಏನು ಮಾಡಬೇಕೋ, ಒಂದೂ ತೋಚುತ್ತಿಲ್ಲ ಸ್ವಾಮಿ"

ಎಂದು ಚಂದ್ರು ಊಟಮುಗಿಸಿ ಎದ್ದ. ಕೈತೊಳೆದು ಹೊರಗೆ ಬಂದಾಗ, ನಾಗಪ್ಪನವರ ಮನೆಯಲ್ಲಿ ದೀಪದ ಬೆಳಕು ಕಂಡಿತು.

"ಸ್ವಲ್ಪ ಹೊತ್ತು ಕುಳಿತುಕೋಪ್ಪ" ಎಂದರು ಶ್ಯಾನುಭೋಗರು.

"ನಮ್ಮ ಭಾವಂದಿರು ಬಂದಿರುವಹಾಗಿದೆ ಮಾತನಾಡಿಸಿ ಕೊಂಡು ಬರುತ್ತೇನೆ"

ಎನ್ನುತ್ತಾ ಚಂದ್ರು ನಾಗಪ್ಪನವರ ಮನೆಯತ್ತ ಹೆಜ್ಜೆ ಹಾಕಿದ.

ಹಾಸಿಗೆ ಹಾಸಿಕೊಳ್ಳುತ್ತಿದ್ದ ನಾಗಪ್ಪನವರು ಅನಿರೀಕ್ಷಿತವಾಗಿ ಬಂದ ಭಾವಮೈದುನನನ್ನು ಕಂಡು ಕ್ಷಣಕಾಲ ಮೂಕರಾದರು.

"ಯಾರು ?.... ಚಂದ್ರೂ........?"

"ಹೌದು ಭಾವ ನಾನೇ ?"

"ಯಾವಾಗ ಬಂದೆ ?"

"ಸ್ವಲ್ಪ ಹೊತ್ತಾಯಿತು ಭಾವ ನೀವು ಬಾಗಿಲು ಹಾಕಿಕೊಂಡು ಎಲ್ಲೋ ಹೋಗಿದ್ದಿರಿ"

'ಕುಳಿತುಕೋ' ಎಂದುಕೂಡ ನಾಗಪ್ಪನವರು ಹೇಳಲಿಲ್ಲ. ಚಂದ್ರು ತಾನಾಗಿಯೇ ಕುಳಿತುಕೊಂಡ.

ಮುಂದೆ ಹೇಗೆ ಮಾತು ಪ್ರಾರಂಭಿಸಬೇಕೆಂದು ಇಬ್ಬರಿಗೂ ಹೊಳೆಯದೆ ಮೌನವಾದರು. ಕೊನೆಗೆ ಆ ನೀರವತೆಯನ್ನು ಚಂದ್ರುವೇ ಮುರಿಯಬೇಕಾಯಿತು.

"ಅಕ್ಕನನ್ನು ಕರೆದುಕೊಂಡು ಬರುವುದಿಲ್ಲವೇ ಭಾವ ?"

"ನಿಮ್ಮ ತಂದೆಗೆ ಕಾಗದ ಬರೆದಿದ್ದೆನಲ್ಲ"

"ನಾನೂ ಆ ಕಾಗದ ಓದಿದೆ"

ಎಂದ ಚಂದ್ರು. ಮತ್ತೆ ಮಾತು ನಿಂತಿತು.

ನಾಗಪ್ಪನವರಿಗೆ ತಾವು ಬರೆದ ಕಾಗದದಲ್ಲಿನ ವಿಷಯ ನೆನಪಾಯಿತು. ಆದರೆ ಅದನ್ನೆಲ್ಲಾ ತಾವೇ ಬರೆದಿದ್ದರೇ ? ಹಾಗೆ ಬರೆಯಬೇಕೆಂದು ತಾವು ಯೋಚಿಸಿದ್ದರೇ ? ತಮಗೆ ಆ ವಿಷಯಗಳು ತೋಚಿದ್ದುವೇ ? ನಾರಾಯಣ ಬರೆದ ಎರಡನೆಯ ಕಾಗದದಲ್ಲಿ, ಆ ರೀತಿ ಬರೆಯಲು ಸೂಚಿಸಿದ್ದ. ಎಂತಲೇ ತಾವು ಬರೆದಿದ್ದರು. ಅದನ್ನೋದಿದ ಅನಂತಯ್ಯ ಸಂಧಾನಕ್ಕಾಗಿ ಚಂದ್ರುವನ್ನು ಕಳುಹಿಸಿರಬಹುದೇ ?— ಎಂದುಕೊಂಡರು. ಅವರ ಮನಸ್ಸು ತಳಮಳಿಸಿತು.

"ಅದಕ್ಕಾಗಿಯೇ ನಾನು ಬಂದಿದ್ದೇನೆ ಭಾವ"

ನಾಗಪ್ಪನವರು ಚಂದ್ರುವಿನ ಮುಖವನ್ನೊಮ್ಮೆ ಪರಿಶೀಲಿಸಿದರು. ಅಲ್ಲೇನೂ ಕೋಪಾವೇಶವಾಗಿರಲಿಲ್ಲ. ಅವರಿಗೆ ಧೈರ್ಯವಾಯಿತು.

"ನಿಮ್ಮ ತಂದೆಯೇ ಕಳುಹಿಸಿದರೋ ?"

"ಇಲ್ಲ ಭಾವ. ನಾನಿಲ್ಲಿಗೆ ಬಂದಿರುವುದು ಅವರಿಗೆ ಗೊತ್ತೇ ಇಲ್ಲ !"

"ಹಾಗಾದರೆ...."

"ಅವರಿಗೆ ಗೊತ್ತಾದರೂ ಏನೂ ಪ್ರಯೋಜನವಿಲ್ಲ. ಈ ಸುದ್ದಿಗೇ ಕೈ ಹಾಕುವುದಿಲ್ಲವೆಂದು ಅವರು ನಿಶ್ಚಯಿಸಿಬಿಟ್ಟಿದ್ದಾರೆ"

"ಅವರಿಗೆ ಬದಲು ನೀನೇ ಮಧ್ಯಸ್ಥಿಕೆಗೆ ಬಂದೆಯೋ ?"

ತಿರಸ್ಕಾರದ ಧ್ವನಿಯಲ್ಲಿ ಕೇಳಿದರು ನಾಗಪ್ಪ.

"ಹೌದು ಭಾವ."

"ಹಾಗಾದರೆ ಬಂದವನಿಗೆ ಹೋಗುವ ದಾರಿಯೂ ಗೊತ್ತಿದೆ

ತಾನೇ ?"

"ಸುಮ್ಮನೆ ಹೋಗುವುದಕ್ಕಾಗಿ ನಾನು ಬರಲಿಲ್ಲ ಭಾವ"

"ಏನಾದರೂ ತೆಗೆದುಕೊಂಡು ಹೋಗಬೇಕೆಂದು ಬಂದಿದ್ದೀಯೇನು ?"

"ಹೌದು ಭಾವ. ನಿಮ್ಮನ್ನೇ ಕರೆದುಕೊಂಡು ಹೋಗುವುದಕ್ಕೆ ಬಂದಿದ್ದೇನೆ ನನ್ನ ತಂಗಿಯ 'ಒಡವೆ'ಯನ್ನು ತೆಗೆದುಕೊಂಡು ಹೋಗುವುವಕ್ಕೆ ಬಂದಿದ್ದೇನೆ."

"ಕಾಗದ ಸರಿಯಾಗಿ ಓದಿಕೊಂಡು ಬಂದಿದ್ದೀ ತಾನೇ ?"

ನಾಗಪ್ಪನವರ ಆ ಪ್ರಶ್ನೆಗೆ ಉತ್ತರವೆಂಬಂತೆ ಚಂದ್ರು ಜೇಬಿನಲ್ಲಿದ್ದ ನೋಟಿನ ಕಟ್ಟನ್ನು ತೆಗೆದು ಅವರ ಮುಂದಿಟ್ಟ.

ನಾಗಪ್ಪನವರು ನಿರೀಕ್ಷಿಸಿರಲಿಲ್ಲ. ಆ ಕ್ಷಣ ನಾರಾಯಣನನ್ನು ನೆನಸಿಕೊಂಡು ಕೃತಜ್ಞತೆ ಸೂಚಿಸಿದರು. 'ಎರಡು ಸಾವಿರ ಕೇಳಿದರೆ ಒಂದು ಸಾವಿರವಾದರೂ ಉದುರುತ್ತದೆ; ಬೇಡವೆನ್ನದೆ ತೆಗೆದುಕೊ. ಬಂದಷ್ಟೇ ಲಾಭ. ಖಂಡಿತವಾಗಿಯೂ ಪೊಂಡು ಹಿಡಿಯಬೇಡ' ಎಂದು ಬರೆದಿದ್ದ ನಾರಾಯಣ. ಆ ಮಾತುಗಳೀಗ ನಾಗಪ್ಪನವರಿಗೆ ನೆನಪಾಯಿತು.

"ತೆಗೆದುಕೊಳ್ಳಿ ಭಾವ."

ನಾಗಪ್ಪನವರು ಎಣಿಸಿದರು....ಎಂಟುನೂರು ರೂಪಾಯಿ ! ಹತ್ತು ರೂಪಾಯಿನ ಎಂಭತ್ತು ನೋಟುಗಳು !

"ಸದ್ಯ ಅಷ್ಟೇ ಸಾಕು"

ಎಂದುಕೊಂಡರು ನಾಗಪ್ಪ. ಆದರೂ ಬಿಗುಮಾನ ಬಿಡದೆ—

"ಮಿಕ್ಕಿದ್ದು ?" ಎಂದರು. ಚಂದ್ರು ಭೂಮಿಗಿಳಿದುಹೋಗಿದ್ದವನು ದೈನ್ಯದಿಂದ ಹೇಳಿದ :

"ಸಾವಿರ ಕೊಡುವುದಕ್ಕೇ ಕೈಲಾಗದವನನ್ನು ಎರಡು ಸಾವಿರ ಕೇಳಿದರೆ ಹೇಗೆ ಕೊಡುತ್ತಾನೆ ಭಾವ ?"

"ಇದರಲ್ಲಿ ಸಾವಿರವೂ ಇಲ್ಲವಲ್ಲ. ಅದಕ್ಕೂ ಇನ್ನೂರು ಕಮ್ಮಿ!"

"ಆ ಇನ್ನೂರು ನಾನು ಕೊಡುತ್ತೇನೆ ಭಾವ. ಇನ್ನೊಂದು ಮೂರು-ನಾಲ್ಕು ತಿಂಗಳು ಅವಕಾಶ ಕೊಡಿ"

"ಕೊಡುತ್ತೀ ಎನ್ನುವ ನಂಬಿಕೆ ಏನು ?"

ತನ್ನ ವಿಷಯದಲ್ಲಿ ಭಾವ ಹೀಗೆ ಸಂದೇಹ ಪಡಬಹುದೇ ಎಂದು ಕೊಂಡ ಚಂದ್ರು.

"ನನ್ನಲ್ಲಿ ನಂಬಿಕೆಯಿಡಿ ಭಾವ. ಬೇಕಾದರೆ ಈ ಇನ್ನೂರು ರೂಪಾಯಿಗೂ ಪತ್ರ ಬರೆದುಕೊಡಲೇ ಭಾವ? ಅದನ್ನು ತೀರಿಸುವ ವರೆಗೂ ಬಡ್ಡಿಯನ್ನೂ ಕೊಡುತ್ತೇನೆ"

ಚಂದ್ರು ಸಾಲಗಾರನ ಪಟ್ಟಕ್ಕೇರಲು ಸಿದ್ಧನಾಗಿದ್ದ. ಪತ್ರ ಬರೆಸಿಕೊಳ್ಳುವವರೆಗೂ ತನ್ನ ಭಾವ ಹೋಗಲಾರರೆಂದು ಅವನು ಭಾವಿಸಿದ್ದ. ಭಾವ-ಭಾವಮೈದುನರ ವ್ಯವಹಾರ ಪತ್ರದವರೆಗೂ ಹೋಗಬಹುದೇ? ಅದೂ ವರದಕ್ಷಿಣೆಯ ಹಣಕ್ಕೆ ಪತ್ರ ಬರೆಯಿಸಿಕೊಳ್ಳಲು ಯಾವ ಗಂಡಸು ಮನಸ್ಸು ಮಾಡುತ್ತಾನೆ?—ಎಂದುಕೊಂಡ ಚಂದ್ರು.

ಆದರೆ ನಾಗಪ್ಪನವರು ಮನಸ್ಸು ಮಾಡಿದ್ದರು—

"ಸರಿ, ಬರೆದು ಕೊಡಪ್ಪ"

ಎಂದು ಅವರ ತುಟಿಯೊಡೆದು ಮಾತು ಹೊರಟಿತ್ತು.

'ಎಂಥ ಕಲ್ಲು ಹೃದಯ ? ಎಂಥ ಕ್ಷುದ್ರಮನಸ್ಸು ?'

ಎಂದಿತು ಮೌನವಾಗಿ ಚಂದ್ರುವಿನ ಮನಸ್ಸು

ನಾಗಪ್ಪನವರೇ ಕಾಗದ ಬರೆದರು. ತಮ್ಮಲ್ಲಿಟ್ಟುಕೊಂಡಿದ್ದ ಸ್ಟಾಂಪನ್ನು ಹಚ್ಚಿ, ಅದರಮೇಲೆ ಚಂದ್ರುವಿನ ಸಹಿ ಹಾಕಿಸಿಕೊಂಡರು.

"ಸಾಕ್ಷಿ ಹಾಕುವವರು ಯಾರು ಭಾವ ?"

ಪಕ್ಕದ ಮನೆಯ ಶ್ಯಾನುಭೋಗರನ್ನು ಕರೆಯೋಣವೇ ಎಂದಿತು ನಾಗಪ್ಪನವರ ಮನಸ್ಸು. ಇಂಥ ವ್ಯವಹಾರವೆಲ್ಲ ಅವರ ಕಿವಿಗೆ ಬೀಳಬಾರದೆಂದಿತು ಅದೇ ಮನಸ್ಸು ಇನ್ನೊಮ್ಮೆ. ಆದರೆ ಶ್ಯಾನುಭೋಗರಿಗೆ ಇದೆಲ್ಲಾ ತಿಳಿಯದ ವಿಷಯವೇ ?

ನಾಗಪ್ಪನವರು ಯೋಚಿಸುತ್ತಿದ್ದುದನ್ನು ಕಂಡು,

"ಹೋಗಲಿ ಬಿಡಿ ಭಾವ ಬೇರೆ ಸಾಕ್ಷಿಯಾಕೆ ಬೇಕು ? — ಆ ಉರಿಯುತ್ತಿರುವ ದೀಪವೇ ಸಾಕ್ಷಿ. ಅದು ಬೆಳಗುತ್ತಿರುವ ಹಾಗೆಯೇ ನನ್ನ ತಂಗಿಯೂ ನಿಮ್ಮ ಮನೆಯನ್ನು ಬೆಳಗಬೇಕಲ್ಲವೇ ?"

—ಎಂದ ಚಂದ್ರು.

"ಹೌದು ಹೌದು" ಎಂದರು ನಾಗಪ್ಪ.

"ನಾಳೆ ಊರಿಗೆ ಹೋಗೋಣವೇ ಭಾವ?"

ಮೃದುವಾಗಿ ಕೇಳಿದ ಚಂದ್ರು.

"ನಾನು ಬರುವುದಕ್ಕಾಗುವುದಿಲ್ಲ"

"ವೆಂಕುವನ್ನು ಕರೆದುಕೊಂಡು ಬರುವುದಿಲ್ಲವೇ ಭಾವ?"

"ನೀನೇ ಕರೆದುಕೊಂಡು ಬಂದು ಬಿಡು."

ಆ ಮಾತು ಕೇಳಿ ಚಂದ್ರು ಆನಂದದಿಂದ ಉಬ್ಬಿಹೋದ. ಒಡೆದ ಬಾಳು ಕೂಡಿಕೊಂಡಿತೆಂದು ಕುಣಿದಾಡಿದ.

"ಹಾಗಾದರೆ ಇನ್ನೆರಡು ದಿನದಲ್ಲಿ ಅವಳನ್ನು ಕರೆದುಕೊಂಡು ಬರಲೇ ಭಾವ?"

"ಹ್ಞಾ" ಎಂದರು ನಾಗಪ್ಪ.

ಆ ರಾತ್ರಿ ಅವರ ಕನಸಿನಲ್ಲೆಲ್ಲಾ ಎಂಟು ನೂರು ರೂಪಾಯಿಗಳ ನೋಟಿನ ಕಟ್ಟೇ ಹೊರಳಾಡುತ್ತಿತ್ತು.

ಶ್ಯಾನುಭೋಗರ ಮನೆಯಲ್ಲೇ ಮಲಗಿಕೊಂಡು ಬೆಳಗ್ಗೆ ಬೇಗನೆ ಎದ್ದು ಚಂದ್ರು ಹೊರಡಲನುವಾದ ಲಕ್ಷ್ಮಮ್ಮನವರು ಕಾಫಿ ತಿಂಡಿಯ ಉಪಚಾರ ಮಾಡಿದರು.

"ನಾನು ಕೇಳಿದೆನೆಂದು ವೆಂಕುವಿಗೆ ಹೇಳಪ್ಪ"

"ಅವಳೇ ಬರುತ್ತಾಳಲ್ಲಮ್ಮ ಇನ್ನೆರಡು ಮೂರು ದಿನಗಳಲ್ಲಿ."

ಚಂದ್ರುವಿನ ಮಾತು ಕೇಳಿ ಲಕ್ಷ್ಮಮ್ಮನವರಿಗೆ ಆಶ್ಚರ್ಯವೇ ಆಯಿತು.

"ನಿಜವೇನಪ್ಪಾ?"

"ಹೌದಮ್ಮ. ನಾನೇ ಕರೆದುಕೊಂಡು ಬರುತ್ತೇನೆ"

ಎಂದು ಚಂದ್ರು, ಶ್ಯಾನುಭೋಗರಿಗೂ, ತನ್ನ ಭಾವನಿಗೂ ಹೇಳಿ ರೈಲಿಗೆ ಹೊರಟ.

ಮನಸ್ಸು ಪ್ರಫುಲ್ಲವಾಗಿತ್ತು. ಮಹತ್ಕಾರ್ಯವೊಂದನ್ನು ಸಾಧಿಸಿದಂತೆ ಅವನು ಗೆಲುವಾಗಿದ್ದ. ಹೇಗೋ ತನ್ನ ತಂಗಿ ಗಂಡನ ಮನೆಯಲ್ಲಿ ಸುಖವಾಗಿ ಬಾಳಿದರೆ ಸಾಕೆಂದುಕೊಂಡ.

ರೈಲು ನಿಂತಿತು. ಚಂದ್ರು ನಿಲ್ದಾಣದಲ್ಲಿಳಿದು ಅಷ್ಟಗ್ರಾಮಕ್ಕೆ

ನಡೆದ. ಮಧ್ಯಾಹ್ನದ ಬಿಸಿಲು ಪ್ರಖರವಾಗಿತ್ತು. ಮನೆಯ ಮುಂಗಡೆಗೆ ಬರುವ ವೇಳೆಗೆ ಚಂದ್ರುವಿನ ಬಟ್ಟೆಗಳು ಬೆವರಿನಿಂದ ತೊಯ್ದು ಹೋಗಿದ್ದವು. ಜಗುಲಿಯ ಮೇಲೆಯೇ ಕುಳಿತಿದ್ದ ತಂದೆ ಕೆಂಗಣ್ಣಿನಿಂದ ಮಗನನ್ನು ನೋಡಿದರು; ಮಾತನಾಡಲಿಲ್ಲ.

ಒಳಗೆ ಬಂದ ಚಂದ್ರುವನ್ನು ಕಂಡು ಚಿಕ್ಕಮ್ಮ ಸಂತೋಷಗೊಂಡರು. ನಡೆದ ಸಂಗತಿಯ ವರದಿಯಾಯಿತು.

"ನಿನ್ನಿಂದ ಇಷ್ಟೆಲ್ಲಾ ಮಾಡುವುದಕ್ಕೆ ಆಗುತ್ತದೆಯೆಂದು ನಾನು ನಂಬಿರಲಿಲ್ಲ ಚಂದ್ರು"

"ನಿಮ್ಮ ಆಶೀರ್ವಾದವಿದ್ದರೆ, ನಾನು ಏನು ಬೇಕಾದರೂ ಮಾಡಬಲ್ಲೆ ಚಿಕ್ಕಮ್ಮ."

ಚಿಕ್ಕಮ್ಮನ ಕಣ್ಣುಗಳು ಆನಂದದಿಂದ ತುಂಬಿದವು; ಹನಿಗಳೂ ಉದುರಿದವು. ಪಕ್ಕದಲ್ಲೇ ಇದ್ದ ವೆಂಕಮ್ಮ ಅಣ್ಣನನ್ನು ಕೃತಜ್ಞತೆಯಿಂದ ನೋಡಿದಳು.

ಊಟವಾಯಿತು.

ಎಲ್ಲರಿಗೂ ತುಂಬ ಸಂತೋಷದ ದಿನ ಅದು.

ಸಂಜೆಯ ಉಪಾಹಾರಕ್ಕೆಂದು ಕಾಫಿಮಾಡಿ, ಜೋಂಡ ಕರಿದಿಟ್ಟರು ಚಿಕ್ಕಮ್ಮ. ಚಂದ್ರುವನ್ನೂ-ವೆಂಕಮ್ಮನನ್ನೂ ಜೊತೆಯಲ್ಲೇ ಕೂಡಿಸಿಕೊಂಡು, ಮನದಣಿಯ ಮಾತನಾಡುತ್ತಾ ಉಪಾಹಾರ ತಿನ್ನಿಸಿದರು. ಅನಂತಯ್ಯನವರಂತೂ ಮಗ ಅಡಿಗೆ ಮನೆಯಲ್ಲಿರುವವರೆಗೂ ಅತ್ತ ಮುಖ ತೋರಿಸಲಿಲ್ಲ.

ಮರುದಿನ ಮಂಗಳವಾರವಾಗಿದ್ದರಿಂದ ಮಗಳನ್ನು ಕಳುಹಲು ಚಿಕ್ಕಮ್ಮ ಒಪ್ಪಲಿಲ್ಲ.

ಬುಧವಾರದ ಸಂಜೆಯ ರೈಲಿಗೆ ಹೋಗುವುದೆಂದು ನಿಶ್ಚಯವಾಯಿತು. ಅನಂತಯ್ಯನವರಂತೂ ಮಂಗಳವಾರದ ಮುಂಜಾನೆಯ ರೈಲಿಗೇ ಬೆಂಗಳೂರಿಗೆ ಹೊರಟು ಹೋಗಿದ್ದರು-ಕೋರ್ಟಿನ ಕೆಲಸದ ನೆಪಹೇಳಿ.

ಚಿಕ್ಕಮ್ಮ ನಾಲ್ಕಾರು ಬಗೆಯ ತಿಂಡಿಮಾಡಿಟ್ಟರು. ಹಪ್ಪಳ-ಸಂಡಿಗೆ ಬುಟ್ಟಿಗಳಲ್ಲಿ ತುಂಬಿಕೊಂಡವು. ಚಂದ್ರುವಿನ ಮದುವೆಯಲ್ಲಿ

ತನಗೆ ತೆಗೆದಿದ್ದ ಭಾರಿ ಧರ್ಮಾವರದ ಸೀರೆಯನ್ನು ಮಗಳಿಗೆ ಕೊಟ್ಟು ಬಿಟ್ಟರು.

ಬುಧವಾರದ ಮಧ್ಯಾಹ್ನ ಊಟವಾದ ನಂತರ ವಿಶ್ರಮಿಸಿ ಕೊಳ್ಳಲೂ ಅವಕಾಶವಿಲ್ಲದೆ ಚಂದ್ರು ಗಾಡಿ ಕಟ್ಟಿಸಿದ.

"ಮದುವೆಯಾದ ಹೊಸದರಲ್ಲಿ, ಯಾವ ಚಿಂತೆಯೂ ಇಲ್ಲದೆ, ಹಾಯಾಗಿ ಹೆಂಡತಿ ಜೊತೆಯಲ್ಲಿರಬೇಕಾದವನು ಎಷ್ಟೊಂದು ತೊಂದರೆ ತೆಗೆದುಕೊಳ್ಳುತ್ತಿದ್ದೀಯಪ್ಪಾ !" ಎಂದರು ಚಿಕ್ಕಮ್ಮ

"ಬಿಡು ಚಿಕ್ಕಮ್ಮ, ಆ ಸುಖಕ್ಕಿಂತ ಈ ತೊಂದರೆಯೇ ನನಗೆ ಹೆಚ್ಚು ಸಂತೋಷ" ಎಂದ ಚಂದ್ರು.

ವೆಂಕಮ್ಮ ಅಲ್ಲಿಯೇ ನಿಂತಿದ್ದಳು.

ಚಿಕ್ಕಮ್ಮ ಅವಳ ಬಳಿಗೆ ಬಂದು, ತನ್ನ ಕೊರಳಲ್ಲಿದ್ದ ಚಿನ್ನದ ಸರವನ್ನು ಅವಳ ಕೊರಳಿಗೆ ಹಾಕಿ, ತಲೆಯನ್ನು ಮೃದುವಾಗಿ ತಡವುತ್ತಾ—

"ಹೋಗಿ ಬಾ ತಾಯಿ. ಕೊಟ್ಟಮನೆ-ಹೊಕ್ಕಮನೆ ಬೆಳಗುತ್ತಾ ಸುಖವಾಗಿ ಬಾಳು ಕಂದ. ದೇವರು ಯಾವಾಗಲೂ ಒಳ್ಳೆಯದನ್ನೇ ಮಾಡುತ್ತಾನೆ"

ಎಂದರು ವೆಂಕಮ್ಮನಿಗೆ ಅಳು ಒತ್ತರಿಸಿ ಬಂತು. ಮಾತನಾಡ ಲಾಗದಷ್ಟು ಹೃದಯ ತುಂಬಿತ್ತು. ಚಿಕ್ಕಮ್ಮನ ಎದೆಯಲ್ಲಿ ತನ್ನ ಮುಖ ವನ್ನಡಗಿಸಿ ಕಣ್ಣೀರು ಒರಸಿಕೊಂಡಳು.

ಗದ್ಗದ ಕಂಠದಿಂದ ಚಿಕ್ಕಮ್ಮ-

"ಅಳಬೇಡ ಪುಟ್ಟ" ಎಂದರು. ಆದರೆ ಅವರೇ ಅಳುವಂತಿತ್ತು.

"ಹೊತ್ತಾಯಿತು"

ಚಂದ್ರುವಿನ ಅವಸರಕ್ಕೆ ವೆಂಕಮ್ಮ ಗಾಡಿ ಹತ್ತಿದಳು ಚಂದ್ರುವೂ ಕುಳಿತುಕೊಂಡ. ಗಾಡಿ ಹೊರಟಿತು.

................

ರೈಲುಪ್ರಯಾಣದ ನಂತರ ಮೂರು ಮೈಲಿಯ ನಡಿಗೆ. ಅಣ್ಣನೂ ತಂಗಿಯೂ ಮೆಲ್ಲಮೆಲ್ಲನೆ ಹೆಜ್ಜೆಯಿಡುತ್ತಾ ಅಗ್ರಹಾರ ಸೇರಿದರು

ಅವರನ್ನು ಸ್ವಾಗತಿಸುತ್ತಿರುವಂತೆ ಬಾಗಿಲು ತೆರೆದಿತ್ತು. ವೆಂಕಮ್ಮ

ತನ್ನ ಮನೆಯ ಹೊಸಿಲೊಳಗೆ ಕಾಲಿಟ್ಟಳು. ಚಂದ್ರು ಹಿಂಬಾಲಿಸಿದ. ಇಬ್ಬರನ್ನೂ ನೋಡಿದ ನಾಗಪ್ಪನವರು ಮಾತನಾಡದೆ ಮೆಲುನಗೆ ನಕ್ಕರು.

ಶ್ಯಾನುಭೋಗರ ಮನೆಯ ಲಕ್ಷ್ಮಮ್ಮನೂ ಸೀತುವೂ ಬಂದು ಕ್ಷೇಮಸಮಾಚಾರ ವಿಚಾರಿಸಿಕೊಂಡು ಹೋದರು. ವೆಂಕಮ್ಮ ಅಡಿಗೆಗೆ ತೊಡಗಿದಳು

ಊಟಕ್ಕೆ ಕುಳಿತಾಗಲಂತೂ ನಾಗಪ್ಪನವರು ಹಿಂದಿನದೆಲ್ಲವನ್ನೂ ಮರೆತವರಂತೆ ಹೆಂಡತಿಯೊಡನೆ ಸಲಿಗೆಯಿಂದಲೇ ಮಾತನಾಡಿದರು.

"ಸದ್ಯ, ತನ್ನನ್ನು ಮಾತನಾಡಿಸಿದರಲ್ಲ, ಅಷ್ಟೇ ಸಾಕು"

ಎಂದು ವೆಂಕಮ್ಮನಿಗೆ ತುಂಬ ಸಂತೋಷವಾಗಿತ್ತು.

ಆ ರಾತ್ರಿಯಂತೂ ಆಕೆಗೆ ಸ್ಮರಣೆಯಲ್ಲುಳಿಯುವಂಥ ರಾತ್ರಿಯಾಗಿತ್ತು. ಆ ರಾತ್ರಿಯ ಹಾಗೆ, ಅವರೆಗೆ ಎಂದೂ ನಾಗಪ್ಪನವರು ನಗೆಸುಖದಿಂದಿರಲಿಲ್ಲ; ಪ್ರಸನ್ನತೆಯೂ ಅವರ ಮುಖದಲ್ಲಿ ಮೂಡಿರಲಿಲ್ಲ. ಆ ಅಪ್ಪುಗೆಯಲ್ಲೂ ಪ್ರೀತಿಯಿದ್ದಂತೆ ತೋರಿರಲಿಲ್ಲ ವೆಂಕಮ್ಮನಿಗೆ. ಹಿಂದಿನ ಆದಿನಗಳ ಸುಖವನ್ನು ಬರಿಯ ಪಶುವೃತ್ತಿಯಂತೆ ಭಾವಿಸಿದ್ದಳು ಆಕೆ. ಆದರೆ ಆರಾತ್ರಿ ಹಾಗಾಗಿರಲಿಲ್ಲ. ಬಾಯ್ತುಂಬ ಮಾತನಾಡಿ, ಪ್ರಸನ್ನತೆಯಿಂದ ಮುಖದಲ್ಲಿ ಮುಖವಿಟ್ಟು ಸುಖ ಕೊಟ್ಟಿದ್ದರು ನಾಗಪ್ಪ. ಎಂತಲೇ ಅದು ತನ್ನ ಬಾಳಿನ ಭಾಗ್ಯೋದಯವಾದ ರಾತ್ರಿ ಎಂದು ಭಾವಿಸಿದ್ದಳು ವೆಂಕಮ್ಮ.

ಯಾವೊಂದು ಕಹಿಪ್ರಸಂಗವೂ ನಡೆಯಲಿಲ್ಲವೆಂಬಂತೆ, ಮರುದಿವಸದಿಂದ ಹೊಸ ಜೀವನ ಪ್ರಾರಂಭವಾಯಿತು. ಅದೇ ದಿನ ಚಂದ್ರು ಬೆಂಗಳೂರಿಗೆ ಮರಳಿದ ಯಥಾಪ್ರಕಾರ ಮನೆಯಲ್ಲಿ ಉಳಿದವರು ಇಬ್ಬರೇ ಗಂಡ - ಹೆಂಡತಿ !

ತೌರಿನ ತುಂಬಿದಮನೆಯಿಂದ ಬಂದ ವೆಂಕಮ್ಮನಿಗೆ ಅಗ್ರಹಾರ 'ಬಿಕೋ' ಎನಿಸಿತ್ತು. ನಾಗಪ್ಪನವರು ನಿಂಗನಹಳ್ಳಿಯ ಶಾಲೆಗೆ ಹೋದಾಗಲಂತೂ ಆಕೆಗೆ ಸೀತುವೇ ಜೊತೆಗಾತಿಯಾಗಬೇಕಾಗುತ್ತಿತ್ತು. ಅಕ್ಕನಿಲ್ಲದಿದ್ದರೆ ಅವಳಿಗೂ ಬೇಸರಿಕೆಯೇ ! ಬಗೆ ಬಗೆ ಚಿತ್ತಾರದ ರಂಗವಲ್ಲಿಯನ್ನು ಸೀತೆಗೆ ಕಲಿಸುವುದರಲ್ಲಿಯೇ – ತನ್ನ

ತೌರಿನ ಕತೆಯನ್ನು ಆ ಪುಟ್ಟ ಹುಡುಗಿಗೆ ಹೇಳುವುದರಲ್ಲಿಯೇ ವೆಂಕಮ್ಮ ಹೊತ್ತು ಕಳೆಯುತ್ತಿದ್ದಳು.

ಕಲಹವಿಲ್ಲದೆ ಸಂಸಾರ ಸಾಗುತ್ತಿತ್ತು. ಬೇಕಾದುದನ್ನೆಲ್ಲಾ ಮನೆಗೆ ತಂದುಹಾಕುತ್ತಿದ್ದರು ನಾಗಪ್ಪ. ಕೈಯಲ್ಲಿ ಕಾಸೂ ಚೆನ್ನಾಗಿ ಓಡಾಡುತ್ತಿತ್ತು. ಆದರೆ ಅದು ವರದಕ್ಷಿಣೆಯ ಹಣವಲ್ಲ; ಗೋಪಾಲಯ್ಯನವರ ಕಕ್ಷಿಗಳಿಗೆ ಸುಳ್ಳು ಪತ್ರ ಬರೆದುಕೊಟ್ಟು ಸಂಪಾದಿಸುತ್ತಿದ್ದ ಹಣ

ಕ್ರಮೇಣ ಶಾನುಭೋಗರು ಗೋಪಾಲಯ್ಯನವರ ಸಂಬಂಧವನ್ನು ಕಡಿದುಕೊಂಡರು. ಅವರ ಸ್ಥಾನಕ್ಕೆ ನಾಗಪ್ಪನವರು ಬಂದರು. "ತನ್ನಂತಹ ಬಡ ಉಪಾಧ್ಯಾಯನನ್ನು ಇಷ್ಟು ಪಟ್ಟಿಗೆ ಆದರಿಸುವವರಾರು? ಈ ಪುಣ್ಯಾತ್ಮರಿಂದ ನನ್ನ ಭಾಗ್ಯದ ಬಾಗಿಲೇ ತೆರೆಯಿತು" ಎಂದು ತೃಪ್ತಿಪಟ್ಟುಕೊಂಡ ನಾಗಪ್ಪನವರು ಗೋಪಾಲಯ್ಯನವರ ಬಲಗೈಯ್ಯಾದರು.

ವೆಂಕಮ್ಮ ಮರಳಿ ಮನೆಗೆ ಬಂದಮೇಲೆ ರಾಮಕ್ಕನನ್ನು ಸಂಧಿಸಲು ಪ್ರಯತ್ನಪೂರ್ವಕವಾಗಿ ತಡೆದುಕೊಂಡಿದ್ದರು ನಾಗಪ್ಪ. ಆಕೆಯಂತೂ ಮಕ್ಕಳಿಲ್ಲದ ಕೊರಗಿನಿಂದ ದಿನದಿನಕ್ಕೆ ಕ್ಷೀಣಿಸಿ ಹೋಗುತ್ತಿದ್ದಳು ನಾಗಪ್ಪನವರಿಂದ ಸಂತಾನವನ್ನು ಪಡೆಯುವ ನಿರೀಕ್ಷೆಯೂ ಬಯಲಾಗಿ, ತನ್ನ ಬಂಜೆತನ ಸ್ಥಿರಪಟ್ಟಾಗ ರಾಮಕ್ಕ ಪಾತಾಳಕ್ಕಿಳಿದು ಹೋದಳು. ವಂಶೋದ್ಧಾರಕನ ಚಿಂತೆ ಬಲಿತಾಗ, ಗೌಡರಿಗೆ ಎರಡನೆಯ ಮದುವೆಯನ್ನು ಮಾಡಲೇಬೇಕೆಂದು ನಿಶ್ಚಯಿಸಿ, ನಾಗಪ್ಪನವರ ನೆರವಿನಿಂದ ನಿಂಗನಹಳ್ಳಿಯ ಕೆಂಪಯ್ಯನ ಮಗಳು ಗೌರಿಯನ್ನು ತಾನೇ ಹುಡುಕಿದಳು. ಇಷ್ಟವಿಲ್ಲದಿದ್ದರೂ, ರಾಮಕ್ಕನ ಬಲವಂತಕ್ಕೆ ಗೌಡರು ಗೌರಿಯ ಕೈ ಹಿಡಿಯಲು ಒಪ್ಪಬೇಕಾಯಿತು.

ಒಂದು ದಿನ ಮಾತಿನ ಮಧ್ಯೆ —

"ನಿಮ್ಮಲ್ಲೇನು ಹೆಣ್ಣಿನ ಕಡೆಯವರು ಗಂಡಿಗೆ ಏನೂ ಕೊಡುವ ಹಾಗಿಲ್ಲವೋ?" ಎಂದು ಗೌಡರನ್ನು ಕೇಳಿದರು ನಾಗಪ್ಪ.

"ಏನು ಕೊಡಬೇಕು ಸ್ವಾಮಿ? ಹೆಣ್ಣನ್ನೇ ಕೊಡುತ್ತಾರಲ್ಲ! ಸಾಲದೇ?"

"ಹೆಣ್ಣು ಕೊಡದೆ ಹೋದರೆ ಮದುವೆ ಹೇಗಾಗುವುದು ಹೇಳಿ. ಅದಲ್ಲ ಗೌಡರೆ ನಾನು ಕೇಳಿದ್ದು – ದುಡ್ಡು ಗಿಡ್ಡು ಕೊಡುವುದಿಲ್ಲವೋ ಅಂತ ?"

"ಓ ! ನೀವು ಹೇಳೋದು ವರದಕ್ಷಿಣೆ ಅಂತಾರಲ್ಲ ನಿಮ್ಮಲ್ಲಿ – ಅದು ತಾನೇ ಸ್ವಾಮಿ ?"

"ಹ್ಞೂಂ"

"ಇಲ್ಲ ಬುದ್ಧಿ, ನಮ್ಮಲ್ಲೇನೂ ಅಂಥ ಕೆಟ್ಟ ಅಭ್ಯಾಸ ಇಲ್ಲ. ಹೆಣ್ಣು ಕೊಡುವುದೂ ಅಲ್ಲದೆ ಹಣವನ್ನೂ ಕೊಡಬೇಕೇ ಸ್ವಾಮಿ ? ಇನ್ನೂ ನಾವೇ ಖರ್ಚು ಹಾಕಿ ಮದುವೆ ಮಾಡಿಕೊಂಡು ಬರಬೇಕು. ಕೈಲಾದರೆ ಹೆಣ್ಣಿಗೆ ಒಡವೆ ಹಾಕುತ್ತೇವೆ. ಇಲ್ಲದಿದ್ದರೆ ಯಾರದ್ದೇನೂ ಆಕ್ಷೇಪಣೆ ಇಲ್ಲ, ನಿಮ್ಮ ಹಾಗೆ ವರದಕ್ಷಿಣೆ ಅಂತ ಪಟ್ಟು ಹಿಡಿದು, ಹೆಣ್ಣಿನ ಜೊತೆಗೆ ಹಣವೂ ಬೇಕೆಂದು ಹಟ ಮಾಡುವುದಿಲ್ಲ."

ಗೌಡರ ಮಾತುಗಳು ನಾಗಪ್ಪನವರ ಕಣ್ಣು ತೆರಸುವಂತಿದ್ದವು. ಆದರೆ ಹಾಗಾಗದಿದ್ದುದು ನಾಗಪ್ಪನವರ ದೌರ್ಭಾಗ್ಯ !

'ಬುದ್ಧಿಯಿಲ್ಲದ ಶುದ್ಧ ಮಂಕು ದಿಣ್ಣೆಗಳು !'

ಎಂದು ಮನಸ್ಸಿನಲ್ಲಿಯೇ ಅಂದುಕೊಂಡು ಸುಮ್ಮನಾದರು ನಾಗಪ್ಪ.

ಆದರ ಮರುದಿನವೇ ಬಂದ ಚಂದ್ರು ಭಾವನಿಗೆ ಬಾಕಿಯಿದ್ದ ಇನ್ನೂರು ರೂಪಾಯಿಗಳನ್ನು ಬಡ್ಡಿ ಸಹಿತ ಎಣಿಸಿ ಪತ್ರದಲ್ಲಿ ಜಮಾ ಷರಾ ಬರೆಸಿಕೊಂಡು ಹಿಂತಿರುಗಿದ. ನಾಗಪ್ಪನವರಿಗೆ ತೃಪ್ತಿಯಾಯಿತು.

ನಿಶ್ಚಯಿಸಿದ್ದಂತೆ ಗೌರಿ – ಗೌಡರ ಮದುವೆ ನೆರವೇರಿತು. ಆ ಸಂತೋಷದಲ್ಲಿ ಗೌಡರು, ನಾಗಪ್ಪನವರಿಗೆ ಒಂದು ಜರತಾರಿ ಪಂಚೆಯನ್ನೂ, ಹಸಿರು ಮುಗುಟವನ್ನೂ ಉಡುಗೊರೆಯಾಗಿ ಕೊಟ್ಟರು.

"ನಿಮ್ಮ ಮನೆ ನಂದಗೋಕುಲವಾಗಲಿ ಗೌಡತಿ"

ಎಂದು ನಾಗಪ್ಪನವರೂ ಬಾಯ್ತುಂಬ ಹರಸಿದರು.

ಅವರ ಹರಕೆ ಬೇಗನೆ ಕೈಗೂಡಿತು. ಗೌರಮ್ಮ ಮಕ್ಕಳಹಿಂದೆ ಮಕ್ಕಳನ್ನು ಹೆತ್ತು ಮನೆತುಂಬಿಸಿದಳು. ಆದರೆ ಆ ಸೌಭಾಗ್ಯವನ್ನು ನೋಡಲು ರಾಮಕ್ಕ ಬದುಕಿರಲಿಲ್ಲ. ಆಕೆ ಗೌರಿಯ ಮದುವೆಯಾದ

ಒಂದು ವರ್ಷದ ನಂತರ, ಇದ್ದಕ್ಕಿದ್ದಂತೆ ಹಾಸಿಗೆ ಹಿಡಿದು ಕಣ್ಣು ಮುಚ್ಚಿಕೊಂಡಿದ್ದಳು. ಆಗ ಗೌಡರಷ್ಟೇ ಸಮದುಃಖಿಗಳಾಗಿದ್ದರು ನಾಗಪ್ಪ.

ದಿನದ ಹಿಂದೆ ದಿನ ಓಡಿತು ತಿಂಗಳುಗಳು ಕಳೆದವು ವರುಷ ಗಳು ಉರುಳಿದವು. ನಾಗಪ್ಪನವರ ಹಂಗಾಮಿ ಉಪಾಧ್ಯಾಯರ ವೃತ್ತಿ ಖಾಯಂ ಆಯಿತು. ಗೋಪಾಲಯ್ಯನವರ ಬಲಗೈಯಾಗಿ, ಕೋರ್ಟ್ ಕಛೇರಿ ತಿರುಗಿ ಒಳ್ಳೆಯ ಅನುಭವಗಳಿಸಿಕೊಂಡರು. ಜೊತೆಗೆ ಪರಿ ಚಾರಕತನಕ್ಕೂ ನಿಂತು, ಮದುವೆ ಮುಂಜಿ ಮಹೋತ್ಸವಗಳಲ್ಲಿ ಅಡಿ ಗೆಯ ನಿಪುಣರಾಗಿ ಹೆಸರು ಗಳಿಸಿಕೊಂಡರು. ಆ ಮೂಲಕ ದೊಡ್ಡ ಮನುಷ್ಯರ–ಅಧಿಕಾರಿಗಳ ಪರಿಚಯವಾಯಿತು. ಅಗ್ರಹಾರದ ಸುತ್ತ ಮುತ್ತ 'ಮೇಷ್ಟ್ರು ನಾಗಪ್ಪ'ನವರು ಜನಪ್ರಿಯರಾದರು. ತಾಲ್ಲೋಕಿಗೆ ಬಂದ ಅಧಿಕಾರಿಗಳಿಗೆ ಒಂದಲ್ಲ ಒಂದು ರೀತಿ ಪರಿಚಿತರಾಗಿ ಅವರ ನೆನ ಪಿನಲ್ಲಿ ಉಳಿಯುವಂತಾದರು ವರದಕ್ಷಿಣೆಯಾಗಿ ಬಂದಿದ್ದ ಸಾವಿರ ರೂಪಾಯಿ ಜೊತೆಗೆ ಇನ್ನಷ್ಟು ಹಣ ಕೂಡಿಸಿ, ಸಿಂಗನ ಹಳ್ಳಿಯ ಬಳಿ ಸ್ವಲ್ಪ ಜಮೀನು ಕೊಂಡರು ಅಂತೂ ಹಿಂದೊಮ್ಮೆ ತಾವು ಕಟ್ಟಿದ ಕನಸು ನನಸಾಗುವ ದಾರಿಯಲ್ಲಿ ನಡೆದಿದ್ದರು ನಾಗಪ್ಪ.

ಆದರೆ ಅದು ಒಂದು ದಿನಸದ ಪ್ರಯಾಣವಾಗಿರಲಿಲ್ಲ; ಒಂದು ವರ್ಷದ ಪ್ರಯಾಣವೂ ಅಲ್ಲ ...ಮೂವತ್ತು ವರ್ಷಗಳ ಪ್ರಯಾಣ! ಈ ಅವಿಶ್ರಾಂತ ಪ್ರಯಾಣದಲ್ಲಿ ಹೆಚ್ಚು ಆಯಾಸವಾಗಿರಲಿಲ್ಲ ಅವರಿಗೆ.

ಆ ಮೂವತ್ತು ವರುಷಗಳೂ ಮೂವತ್ತು ತಿಂಗಳುಗಳಂತೆ ಕಳೆದು ಹೋದುವು. ದುಃಖ – ಕಷ್ಟಗಳು ಬಂದಾಗ 'ಎಂದಿಗೆ ಕಳೆಯುತ್ತದೋ' ಎಂದು ಪ್ರತಿಕ್ಷಣದಲ್ಲಿಯೂ ದಿನಗಳನ್ನೆಣಿಸುವುದು ಮನುಷ್ಯ ಸ್ವಭಾವ. ಆದರೆ ಸುಖದ ದಿನಗಳು ಬಂದಾಗ – ಅವು ಸಾಧಾರಣ ಸುಖದ ದಿನ ಗಳಾದರೂ – 'ಎಷ್ಟು ಬೇಗ ಕಳೆದು ಹೋಯಿತು' ಎನ್ನುವುದೂ ಸಹಜ. ಹಾಗೆಯೇ ನಾಗಪ್ಪನವರಿಗೆ ಮೂವತ್ತು ವರ್ಷಗಳು ಎಷ್ಟು ಬೇಗ ಕಳೆದು ಹೋಯಿತೆಂದು ಆಶ್ಚರ್ಯವೇ ಆಗಿತ್ತು.

ಆ ದೀರ್ಘ ಅವಧಿಯಲ್ಲಿ ನಡೆದ ಕೆಲವೇ ಸಂಗತಿಗಳು ನಾಗಪ್ಪ ನವರ ಸ್ಮರಣೆಯಲ್ಲಿ ಉಳಿದಿದ್ದವು––

ಅದುವರೆಗೆ ವೆಂಕಮ್ಮ ಆರು ಬಾರಿ ಗರ್ಭ ಧರಿಸಿದ್ದಳು.

ಮೊದಲನೆಯ ಮಗು ಶ್ರೀನಿವಾಸ ಹುಟ್ಟಿದಾಗ ಮೊಮ್ಮಗನನ್ನು ನೋಡಲು ಸಾಧ್ಯವಾಗದಷ್ಟು ಮುಟ್ಟಿಗೆ ಚಿಕ್ಕಮ್ಮ ಹಾಸಿಗೆ ಹಿಡಿದಿದ್ದಳು. ವೆಂಕಮ್ಮನಿಗೆ ಚೊಚ್ಚಲು ಬಾಣಂತನ ತೌರಿನಲ್ಲಾಗುವ ಬದಲು ಅಗ್ರಹಾರದಲ್ಲಿಯೇ ಆಯಿತು. ಶ್ಯಾನುಭೋಗರ ಹೆಂಡತಿ ಲಕ್ಷ್ಮಮ್ಮನೇ ಆಕೆಯ ಆರೈಕೆ ಮಾಡಿದರು.

ಮತ್ತೆ ಎರಡನೆಯ ಬಾರಿಗೂ ಹುಟ್ಟಿದ್ದು ಇನ್ನೊಂದು ಗಂಡು– 'ಸುಂದರು' ಎಂದು ಹೆಸರಿಟ್ಟಳು ವೆಂಕಮ್ಮ.

ಆಗ ನಾಗಪ್ಪನವರಿಗೆ ಗೋಪಾಲಯ್ಯನವರ ಅನ್ಯಾಯದ ವ್ಯವಹಾರದಿಂದ ಹಣದ ಮಳೆಯೇ ಸುರಿದು ಹೋಯಿತು– ಒಂದೇ ಬಾರಿಗೆ ಐದುನೂರು ರೂಪಾಯಿ ! ಆ ಹಣದಿಂದ ವಿಜ್ಞಾನಹಳ್ಳಿ ದೇವೇಗೌಡನಿಗೆ ಭೋಗ್ಯಕ್ಕೆ ಹಾಕಿದ್ದ ಜಮೀನನ್ನು ಬಿಡಿಸಿಕೊಂಡು ತಮ್ಮ ಹೆಸರಿಗೆ ಖಾತೆ ಮಾಡಿಸಿಕೊಂಡರು ನಾಗಪ್ಪ.

ವೆಂಕಮ್ಮ ಮೂರನೆಯ ಗಂಡು ಮಗುವನ್ನು ಹೆತ್ತಾಗ, ಚಂದ್ರುವಿನಿಂದ ಆಕೆಗೊಂದು ಕಾಗದ ಬಂದಿತ್ತು.

"ನನಗೊಬ್ಬಳು ಸೊಸೆ ಹುಟ್ಟಿದ್ದಾಳೆ" ಎಂದು ಆತ ಬರೆದಿದ್ದ. ತನ್ನ ಮಗಳಿಗೆ 'ರತ್ನ' ಎಂದು ಹೆಸರಿಟ್ಟಿರುವುದಾಗಿಯೂ, ಅದು ತನ್ನ ತಾಯಿಯಂತೆ ಕಪ್ಪು ಬೊಂಬೆಯಾಗದೆ, ಚೆಲುವಿನ ಗಣಿಯಾಗಿದೆ ಎಂದೂ ವರ್ಣಿಸಿ ವರ್ಣಿಸಿ ಹೆಮ್ಮೆಯಿಂದ ಬರೆದಿದ್ದ ಚಂದ್ರು. ಅಣ್ಣನ ಕಾಗದ ನೋಡಿ ವೆಂಕಮ್ಮ ತುಂಬ ಸಂತೋಷಪಟ್ಟಳು

ಆದರೆ ಆಕೆ ಆಗ ಹೆತ್ತಿದ್ದ ಮೂರನೆಯ ಗಂಡು ಮಗು ಕಪ್ಪು ಬೊಂಬೆಯೇ ಆಗಿತ್ತು ! ಅದನ್ನು ಕಂಡು ನಾಗಪ್ಪ ಮೂಗುಮುರಿದು ಮುಖ ಸಿಂಡರಿಸಿಕೊಂಡರು. ಆದರೆ ತಾಯಿಯಾದ ವೆಂಕಮ್ಮ ಆ ಕಪ್ಪು ಬೊಂಬೆಯನ್ನೇ ಅಪ್ಪಿಕೊಂಡು, 'ಕೃಷ್ಣ', 'ಮುದ್ದುಕೃಷ್ಣ', 'ಕಿಟ್ಟು' ಎಂದು ಕರೆದಳು. ಕೊನೆಗೆ 'ಕಿಟ್ಟು' ಎನ್ನುವ ಹೆಸರೇ ಉಳಿಯಿತು.

ನಾಲ್ಕನೆಯದು ಹೆಣ್ಣಾಗಲಿ ಎಂದುಕೊಂಡಳು ವೆಂಕಮ್ಮ. ಬರಿಯ ಗಂಡು ಮಕ್ಕಳನ್ನೇ ಕಂಡು ಆಕೆಗೆ ಬೇಸರವಾಗಿತ್ತು. ನಾಗಪ್ಪ

ನವರು ಮಾತ್ರ 'ದೇವರೇ, ನನಗೆ ಹೆಣ್ಣುಮಕ್ಕಳು ಬೇಡಪ್ಪಾ, ಮನೆ ತುಂಬ ಗಂಡುಮಕ್ಕಳನ್ನು ಕೊಡು' ಎಂದು ಬೇಡಿಕೊಳ್ಳುತ್ತಿದ್ದರು. ಹೆಣ್ಣು ಹುಟ್ಟಿದರೆ ತಾವೇ ಖರ್ಚು ಮಾಡಬೇಕಾಗುತ್ತದೆ, ಅದು ನಷ್ಟ, ಗಂಡು ಮಕ್ಕಳು ಹುಟ್ಟಿದರೆ ವರದಕ್ಷಿಣೆಯ ಮಳೆಯೇ ಸುರಿಯುತ್ತದೆ, ಅದು ಲಾಭ ಎಂದು ಅವರ ಮನಸ್ಸು ಸದಾ ಗುಣಾಕಾರ ಹಾಕುತ್ತಿತ್ತು. ನಾಗಪ್ಪನವರ ಆ ಪ್ರಾರ್ಥನೆ ದೇವರಿಗೆ ಮುಟ್ಟಿತೇನೋ! ವೆಂಕಮ್ಮ ಹೆತ್ತ ಆ ನಾಲ್ಕನೆಯ ಮಗುವೂ ಗಂಡೇ!

'ನಾಣಿ' ಎಂದು ಹೆಸರಿಟ್ಟಳು ವೆಂಕಮ್ಮ.

ಆಗಲೇ, ತಮ್ಮ ಜೀವಮಾನದಲ್ಲಿಯೇ ಪ್ರಥಮ ಬಾರಿ ಎಂಬಂತೆ ನಾಗಪ್ಪನವರು ಹಾಸಿಗೆ ಹಿಡಿದರು. ಬದುಕುವುದೇ ಕಷ್ಟವೆನ್ನುವಂತೆ ಆಯಿತು. ಅಷ್ಟಗ್ರಾಮದಿಂದ ಮುದಿ ಅನಂತಯ್ಯನವರೂ, ಚಿಕ್ಕಮ್ಮನೂ ಬಂದರು. ಗೌಡರಂತೂ ಸದಾ ಅಗ್ರಹಾರದಲ್ಲಿಯೇ ಉಳಿದರು.

ಹಳ್ಳಿಯ ವೈದ್ಯರಿಂದ ಗುಣ ಕಾಣಲಿಲ್ಲ. ನಾಗಪ್ಪನವರನ್ನು ಬೆಂಗಳೂರಿನ ವಿಕ್ಟೋರಿಯಾ ಆಸ್ಪತ್ರೆಗೆ ಸಾಗಿಸಬೇಕಾಯಿತು. ಗೌಡರು ಹಣ ಸಹಾಯ ಮಾಡಿದರು. ವೆಂಕಮ್ಮ ಅಣ್ಣ ಚಂದ್ರುವಿನ ಮನೆಯಲ್ಲಿ ಇಳಿದುಕೊಂಡು ಆಸ್ಪತ್ರೆಗೆ ಹೋಗಿ ಬರುತ್ತಿದ್ದಳು. ವಯಸ್ಸಿಗೆ ಬಂದ ಮಕ್ಕಳು ತಂದೆಯ ಉಪಚಾರವನ್ನು ಆಸ್ಥೆಯಿಂದ ಮಾಡಿದರು. ಅಂತೂ ಇವೆಲ್ಲದರ ಫಲವಾಗಿ, ಎರಡು ತಿಂಗಳಿನ ನಂತರ ನಾಗಪ್ಪನವರಿಗೆ ಗುಣ ವಾಯಿತು. ಅವರು ಪುನರ್ಜನ್ಮಪಡೆದಂತಾದರು.

ಅದೇ ವರ್ಷವೇ ಸುಂದರು ಹೈಸ್ಕೂಲಿಗೆ ಸೇರಲು ಬೆಂಗಳೂರಿಗೆ ಬರಬೇಕಾಯಿತು. 'ಶ್ರೀನಿವಾಸನಿಗಂತೂ ಸರಸ್ವತಿ ಒಲಿದಿಲ್ಲ. ಸುಂದರು ವಾದರೂ ವಿದ್ಯಾವಂತನಾಗಲಿ' ಎಂದುಕೊಂಡು ನಾಗಪ್ಪನವರು ತಮ್ಮ ಮಗನನ್ನು ಚಂದ್ರುವಿನ ಮನೆಯಲ್ಲಿ ಬಿಟ್ಟು ಬಂದರು. ತಮ್ಮ ಮನೆ ಯಲ್ಲಿ ಗಂಡುಮಕ್ಕಳಿಲ್ಲವೆಂದು ಚಿಂತಿಸುತ್ತಿದ್ದ ಚಂದ್ರು – ಪದ್ಮ, ಸುಂದರುವಿಗೆ ಸುಸ್ವಾಗತವನ್ನೇ ನೀಡಿದರು. ಅವನ ವಿದ್ಯಾಭ್ಯಾಸದ ಖರ್ಚನ್ನು ತಾವೇ ವಹಿಸುವುದಾಗಿ ಚಂದ್ರು ನಾಗಪ್ಪನವರಿಗೆ ಭರವಸೆ ಕೊಟ್ಟ.

ಒಮ್ಮೆ ಅಣ್ಣನನ್ನು ನೋಡಲು ಬೆಂಗಳೂರಿಗೆ ಹೋಗಿದ್ದಾಗ

ವೆಂಕಮ್ಮ—

"ನೀನೂ ಒಬ್ಬಳೇ ಮಗಳನ್ನಿಟ್ಟುಕೊಂಡಿದ್ದೀಯೆ. ಅವಳನ್ನೇ ಸುಂದರುವಿಗೆ ಕೊಟ್ಟು ಮದುವೆ ಮಾಡಿ ಬಿಡಣ್ಣ"

ಎಂದಿದ್ದಳು. ಚಂದ್ರುವಿಗೂ ಆ ಆಸೆ ಇತ್ತು. ಆದರೆ ಅದನ್ನು ಆತ ಹೊರಗೆಡವಿರಲಿಲ್ಲ.

"ವರದಕ್ಷಿಣೆ ಎಷ್ಟು ಕೇಳುತ್ತೀ ವೆಂಕು ?"

ಎಂದಾಗ, ಇಬ್ಬರೂ ತಮ್ಮತಮ್ಮ ಕತೆಯನ್ನು ನೆನಸಿಕೊಂಡು ನಕ್ಕರು. ಅವರಿಗೆ ಜೊತೆಯಾಗಿ, ಪದ್ಮಳೂ ನಗುತ್ತಾ–

"ಐದು ಕೇಳುತ್ತಾನೇನೋ ನಿಮ್ಮ ಹುಡುಗ"

ಕೈ ಬೆರಳುಗಳನ್ನು ತೋರಿಸಿ ಅಣಕಿಸಿದಳು ಅನಂತಯ್ಯ ಹಿಂದೊಮ್ಮೆ ತನ್ನ ತಂದೆಯ ಬಳಿ ಹೇಳಿದ – ಆ ಮಾತುಗಳು ಇನ್ನೂ ಆಕೆಯ ನೆನಪಿನಲ್ಲಿದ್ದವು. ಅದನ್ನೇ ಪದ್ಮ ಹೇಳಿದಾಗ ಚಂದ್ರುವಿನ ಮುಖ ಕ್ಷಣಕಾಲ ವಿವರ್ಣವಾಯಿತು.

ಆ ಬಳಿಕ, ನಾಲ್ಕುವರ್ಷಗಳ ನಂತರ ವೆಂಕಮ್ಮ ಇನ್ನೂ ಒಂದು ಗಂಡು ಮಗುವನ್ನು ಹೆತ್ತಳು. ಅದು ಐದನೆಯ ಗಂಡು ಆಗ ನಾಗಪ್ಪ ನವರು ಅಗ್ರಹಾರದ ವರದರಾಜಸ್ವಾಮಿ ದೇವರಿಗೆ ಜೋಡಿ ತೆಂಗಿನ ಕಾಯಿ ಒಡೆದು ತಮ್ಮ ಭಕ್ತಿಯನ್ನು ಪ್ರದರ್ಶಿಸಿದ್ದರು. ಅದೇ ಸಮಯಕ್ಕೆ, ಮಗಳನ್ನು ನೋಡುವ ಆಸೆಯಿಂದ ಅಗ್ರಹಾರಕ್ಕೆ ಬಂದ ಚಿಕ್ಕಮ್ಮ ಹೊಸ ಮೊಮ್ಮಗನನ್ನು ಕಂಡು ತುಂಬ ಸಂತೋಷಪಟ್ಟರು.

"ನಿನ್ನ ಎಲ್ಲಾ ಮಕ್ಕಳಿಗಿಂತ ಇದು ತುಂಬ ಚೆನ್ನಾಗಿದೆ ಕಣೆ ವೆಂಕು." ಎಂದರು. ಮಗುವಿಗೆ ಒಂದು ಸರ, ಕಾಲಿಗೆ ಒಂದು ಜತೆ ಅಂದಿಗೆ ಮಾಡಿಸಿ ಹಾಕಿ ತಮ್ಮ ಪ್ರೀತಿಯನ್ನು ಪ್ರದರ್ಶಿಸಿದರು. ಆ ಮಗುವಿಗೆ 'ಶ್ಯಾಮು' ಎಂದು ಹೆಸರಿಟ್ಟವರೂ ಅವರೇ.

ಅಷ್ಟಗ್ರಾಮಕ್ಕೆ ಹಿಂತಿರುಗುವಾಗ, "ಐದು ಗಂಡು ಮಕ್ಕಳು– ಪಂಚಪಾಂಡವರ ಹಾಗೆ ಬೆಳೆಯಲಮ್ಮ" ಎಂದು ಹರಸಿಹೋದರು. ಅದೇ ಕೊನೆಯ ಬಾರಿ ಆಕೆ ಅಗ್ರಹಾರಕ್ಕೆ ಬಂದಿದ್ದುದು. ಅನಂತರ ಒಂದು ವರ್ಷ ಮಾತ್ರ ಆಕೆ ಬದುಕಿದ್ದರು. ಅಷ್ಟಗ್ರಾಮಕ್ಕೆ ಬಂದ ಪ್ಲೇಗ್‌ಮಾರಿ ಚಿಕ್ಕಮ್ಮನನ್ನೂ ಅನಂತಯ್ಯನವರನ್ನೂ ಒಂದೇ

ವಾರದಲ್ಲಿ ಕಬಳಿಸಿತು.

ಅದು ವೆಂಕಮ್ಮನಿಗೆ ತುಂಬ ಕೆಟ್ಟ ವರ್ಷ. ಹುಟ್ಟಿಸಿದ ತಂದೆ, ದೇವಿಯ ಸಮಾನಳಾದ ತಾಯಿ ತೀರಿಕೊಂಡ ದುಃಖವೇ ಇನ್ನೂ ಆರದಿದ್ದಾಗ, ಇನ್ನೊಂದು ಸಾವಿನ ಸುದ್ದಿಯನ್ನು ಆಕೆ ಎದುರಿಸ ಬೇಕಾಯಿತು. ಚಂದ್ರು ಮೋಟಾರು ಅಪಘಾತದಿಂದ ಮರಣಹೊಂದಿದ ನೆಂಬ ಸುದ್ದಿಯ ಕಾಗದ ಕೈಸೇರಿದಾಗ, ಆಕೆ ಮೂರ್ಛೆಹೋದಳು. ತನ್ನ ಒಡೆದ ಬಾಳನ್ನು ಒಂದುಗೂಡಿಸಿ, ಸುಖದ ಪನ್ನೀರೆರಚಿ, ಕಣ್ಣೀರು ತೊಡೆದಿದ್ದ ಪ್ರೀತಿಯ ಅಣ್ಣನೂ ತೀರಿಕೊಂಡ ಆ ದಿನದಿಂದ ತಾನು ಅನಾಥಳಾದೆನೆಂದು ತುಂಬ ದುಃಖಿಸಿದಳು ವೆಂಕಮ್ಮ.

ಇನ್ನೂ ಒಂದು ಕೆಟ್ಟ ವರ್ತಮಾನ ಅವಳನ್ನು ಹಣ್ಣು ಮಾಡಿತು.

ಶ್ಯಾನುಭೋಗರ ಮನೆಯ ಸೀತು ಮದುವೆಯಾದ ಎರಡನೇ ವರ್ಷದಲ್ಲಿಯೇ ಗಂಡನನ್ನು ಕಳೆದುಕೊಂಡಳು. ತನ್ನ ಒಂದು ವರ್ಷದ ಮಗು ಶಾಂತುವಿನೊಡನೆ ಅಗ್ರಹಾರಕ್ಕೆ – ತಂದೆಯ ಮನೆಗೆ ಬಂದಳು. ಆ ಪುಟ್ಟ ವಿಧವೆಯನ್ನು ನೋಡಿ 'ಗೊಳೋ' ಎಂದು ಅತ್ತುಬಿಟ್ಟಳು ವೆಂಕಮ್ಮ.

ಇಷ್ಟೆಲ್ಲಾ ದುರ್ಘಟನೆಗಳು ನಡೆದ ಆ ಕೆಟ್ಟ ವರ್ಷವನ್ನು ವೆಂಕಮ್ಮ ಎಂದೂ ಮರೆಯುವಂತಿಲ್ಲ

ಮುಂದಿನ ವರ್ಷ – ಆರನೆಯ ಬಾರಿಗೆ ಗರ್ಭವತಿಯಾದಳು ವೆಂಕಮ್ಮ. ಆಗ ಹುಟ್ಟಿದ್ದು ಹೆಣ್ಣು. ತೀರಿಕೊಂಡ ಚಿಕ್ಕಮ್ಮನೇ ತನ್ನ ಹೊಟ್ಟೆಯಲ್ಲಿ ಹುಟ್ಟಿದಳೆಂದು ವೆಂಕಮ್ಮನಿಗೆ ಭ್ರಾಂತಿ. ಆಕೆಗಾಗ ತುಂಬ ಸಂತೋಷವಾಗಿತ್ತು.

ಹೆಣ್ಣು ಮಕ್ಕಳು ಹುಟ್ಟುವುದು ಬೇಡವಾಗಿದ್ದ ನಾಗಪ್ಪನವರೂ ಆ ಮಗುವನ್ನು ನೋಡಿ 'ಕನ್ಯಾದಾನಕ್ಕೊಂದು ಹೆಣ್ಣಿರಲಿ' ಎಂದು ಕೊಂಡು ಸುಮ್ಮನಾದರು

ಮಗುವಿಗೆ 'ಸುಮಿತ್ರ' ಎಂದು ಹೆಸರು ಸೂಚಿಸಿದಳು ನೆರಮನೆಯ ಸೀತು. ವೆಂಕಮ್ಮನಿಗೂ ಅದು ಚೆನ್ನಾಗಿಯೇ ಕಂಡಿತು.

ಮತ್ತೆ ವೆಂಕಮ್ಮ ಗರ್ಭವತಿಯಾಗಲಿಲ್ಲ. ಸುಮಿತ್ರೆಯೇ ಕೊನೆಯ ಮಗುವಾದಳು. ಅವಳಿಗೆ ಮೂರು ವರ್ಷವಾದಾಗ ನಾಗಪ್ಪನವರಿಗೆ

ಉಪಾಧ್ಯಾಯ ವೃತ್ತಿಯಿಂದ ನಿವೃತ್ತಿಯಾಯಿತು.

ಆರು ಮಕ್ಕಳಿಂದ ನಾಗಪ್ಪನವರ ಸಂಸಾರ ತುಂಬಿಕೊಂಡಿತ್ತು. ಮಕ್ಕಳೆಲ್ಲ ದಿನದಿನಕ್ಕೆ ದೊಡ್ಡವರಾಗುತ್ತಿದ್ದರು. ಶ್ರೀನಿವಾಸನಂತೂ ಮದುವೆಯ ವಯಸ್ಸಿಗೆ ಬಂದಿದ್ದ. ಹೆಣ್ಣು ಕೊಡುತ್ತೇನೆಂದು ಅಷ್ಟ ಗ್ರಾಮದಿಂದ ಬಂದಿದ್ದ ಅವಧಾನಿಗಳು, ನಾಗಪ್ಪನವರು ಕೇಳಿದಷ್ಟು ವರದಕ್ಷಿಣೆ ಕೊಡಲಾರದೆ ಹಿಂತಿರುಗಿದ್ದರು. ಅನಂತರ ಕನ್ಯಾಪಿತೃಗಳಾರೂ ನಾಗಪ್ಪನವರ ಮನೆಯ ಹೊಸಿಲು ತುಳಿಯುವ ಸಾಹಸ ಮಾಡಿರಲಿಲ್ಲ. ತಮ್ಮ ಮಗನಿಗೆ ಹೆಣ್ಣು ಕೊಡುತ್ತೇನೆಂದು ಯಾರೂ ಮುಂದೆ ಬರುವುದಿಲ್ಲವೆಂಬುದು ನಾಗಪ್ಪನವರಿಗೆ ತಿಳಿದಿತ್ತು. ಅದಕ್ಕೆ ಕಾರಣ ಶ್ರೀನಿವಾಸನ ಕಲ್ಯಾಣ ಗುಣಗಳೇ!

ಪ್ರಾಥಮಿಕ ಶಾಲೆಯ ಓದು ಮುಗಿದನಂತರ ಶ್ರೀನಿವಾಸ ಮುಂದೆ ಓದುವ ಸಾಹಸ ಮಾಡಲಿಲ್ಲ. 'ಗಂಡು ಹುಡುಗ ಹೇಗಿದ್ದರೇನು? ಅವನ ಪಾಡು ಅವನು ನೋಡಿಕೊಳ್ಳುತ್ತಾನೆ—ದೊಡ್ಡವನಾದ ಮೇಲೆ' ಎಂದು ಉದಾಸೀನದಿಂದ ಸುಮ್ಮನಾದರು ನಾಗಪ್ಪ.

ಶ್ರೀನಿವಾಸನಿಗೆ ಅಗ್ರಹಾರದಲ್ಲಿ ಅಲೆಯುವುದೇ ಕೆಲಸವಾಯಿತು. ಅಸಂಸ್ಕೃತ ಯುವಕರ ಸ್ನೇಹವಾಯಿತು. ಅಜ್ಞಾನ – ಅವಿದ್ಯೆ ಅವನನ್ನು ಪೋಷಿಸುತ್ತಾ, ಅವನ ಮೈ ತುಂಬಿಕೊಂಡು ದೊಡ್ಡವನನ್ನಾಗಿ ಮಾಡಿದ್ದುವು. ಮನೆಯಲ್ಲಿ ಮುಚ್ಚಿಟ್ಟ ಮೂರು ಕಾಸು – ಆರು ಕಾಸುಗಳೆಲ್ಲ ಅವನ ಸಿಗರೇಟಿಗಾಗಿ ಮಾಯವಾಗುತ್ತಿದ್ದವು. ಮಾಡು – ಗೂಡುಗಳಲ್ಲಿ ಕಣ್ಣಿಗೆ ಬೀಳುವ ಹಾಗೆ ಯಾವೊಂದು ಬೆಲೆಯುಳ್ಳ ವಸ್ತುವನ್ನೂ ಇಡುವುದು ದುಸ್ಸಾಧ್ಯವಾಯಿತು.

ದಿನ ಕಳೆದಂತೆ, ಶ್ರೀನಿವಾಸನ ಕೈ ಚಳಕದಿಂದ ವೆಂಕಮ್ಮನ ಸಣ್ಣಪುಟ್ಟ ಒಡವೆಗಳು ಮಾಯವಾಗತೊಡಗಿದವು. ಮಗನ ಮೇಲಿನ ವಾತ್ಸಲ್ಯದಿಂದ ತಾಯಿ ಅವನ ಕೆಟ್ಟ ನಡವಳಿಕೆಯನ್ನು ಮುಚ್ಚಿಟ್ಟಳು. ಆದರೆ ಕೊಳೆತ ಪದಾರ್ಥದ ಕೆಟ್ಟನಾಥ ಹೊರಬರದಿರುವುದೇ?

ಒಂದು ಸಾರಿ ವೆಂಕಮ್ಮನ ಚಿನ್ನದಸರ ಮಾಯವಾಯಿತು. ಅದೊಂದೇ ಒಂದು ಆಕೆಯ ಬಳಿ ಇದ್ದ ದೊಡ್ಡ ಒಡವೆ. ಸುಮಾರು ನಾನ್ನೂರು ರೂಪಾಯಿಗಳಿಗಿಂತ ಹೆಚ್ಚು ಬೆಲೆ ಬಾಳುವ ಆ ಸರವನ್ನು

ಗಂಡನ ಮನೆಗೆ ಬರುವಾಗ ಆಕೆಗೆ ಚಿಕ್ಕಮ್ಮ ಕೊಟ್ಟಿದ್ದರು. ತೌರಿನ ನೆನಪಾಗಿ ವೆಂಕಮ್ಮನ ಬಳಿ ಇದ್ದ, ಉಳಿದಿದ್ದ ವಸ್ತು ಅದೊಂದೇ. ಅದು ಕಾಣದಾದಾಗ ಆಕೆ ಬಿಕ್ಕಿ ಬಿಕ್ಕಿ ಅಳುತ್ತಿದ್ದಳು. ಶ್ರೀನಿವಾಸ ಅದನ್ನು ಗಮನಿಸದೆ, ಆ ವಿಷಯವೇ ತನಗೆ ತಿಳಿಯದೆಂಬಂತೆ ಹೊರಟು ಹೋದ.

ಆಗ ನೆರವಿಗೆ ಬಂದವಳು ಸೀತು. ನಡೆದ ಸಂಗತಿಯನ್ನು ವೆಂಕಮ್ಮನಿಂದ ತಿಳಿದುಕೊಂಡ ಆಕೆ, ಸರದ ಗತಿಯೇನಾಗಿರಬಹುದೆಂದು ಊಹಿಸಿದಳು. ಶ್ರೀನಿವಾಸನ ಒಗ್ಗೆ ಹರಡಿದ್ದ ಒದಕು ಸುದ್ದಿ ತಂದೆಯ ಮೂಲಕ ಆಕೆಗೆ ಮೊದಲೇ ತಿಳಿದಿದ್ದರೂ, ಅದನ್ನು ಹೇಳಿ ವೆಂಕಮ್ಮನ ಮನ ನೋಯಿಸಲು ಇಚ್ಛಿಸದೆ ಆಕೆ ಸುಮ್ಮನಿದ್ದಳು. ಆದರೆ ಆ ಸರ ಮಾಯವಾದ ವಿಷಯ ತಿಳಿದ ಕೂಡಲೆ ಸದ್ದಿಲ್ಲದೆ ಸುಮ್ಮನಿರಲಾಗಲಿಲ್ಲ.

ಆದರೆ ಆ ಸರ ಮಾಯವಾದ ವಿಷಯ ಸಹನೆ ಮೀರಿಸಿಯಿತು.

ಮನೆಗೆ ಬಂದ ಆಕೆ ವಿಷಯವನ್ನು ತಂದೆಗೂ ತಿಳಿಸಿದಳು. ಶ್ಯಾನುಭೋಗರು ಕನಿಕರಪಟ್ಟು, ಸರ ಪತ್ತೆಮಾಡುವ ಕೆಲಸಕ್ಕೆ ಕೈ ಹಾಕಿದರು.

ತಡಮಾಡದೆ ನಿಂಗನ ಹಳ್ಳಿಯ ಅಕ್ಕಸಾಲಿಗ ಕಾಳಿಂಗಾಚಾರಿಯನ್ನು ಕಂಡ ಶ್ಯಾನುಭೋಗರು ಅವನನ್ನು ಉಪಾಯವಾಗಿ ತನಿಖೆ ಮಾಡಿ ಸರವನ್ನು ಪತ್ತೆಹಚ್ಚಿಯೇ ಹಚ್ಚಿದರು. ಅದರೊಡನೆ ಶ್ರೀನಿವಾಸನ ಪ್ರೇಯಸಿಯ ವೃತ್ತಾಂತವೂ ಹೊರಗೆ ಬಂದಿತು.

ನಿಂಗನ ಹಳ್ಳಿಯ ಚೆನ್ನಮ್ಮನ ಮಗಳು ಕೆಂಪಿ ಶ್ರೀನಿವಾಸನ ಪ್ರೇಯಸಿಯಾಗಿರುವಳೆಂದೂ, ಆಕೆಯ ಆಸೆಯಂತೆ ಶ್ರೀನಿವಾಸ ಬುಗಡಿ ಮಾಡಿಸಲು ಒಪ್ಪಿ, ತಾಯಿಯ ಚಿನ್ನದ ಸರವನ್ನು ತಂದುಕೊಟ್ಟನೆಂದು ನಿಜಸಂಗತಿ ಬಯಲಾಯಿತು. ಚೆನ್ನಮ್ಮನ ವಶವಾಗಲಿದ್ದ ಸರ ಹಿಂತಿರುಗಿಬಂದಿತು. ವೆಂಕಮ್ಮನಿಗೆ ಸಂತೋಷವಾದರೂ ತನ್ನ ಮಗನ ಮಾನ ಹತ್ತು ಜನರೆದುರಿಗೆ ಕಳೆದೆನಲ್ಲಾ ಎಂದು ದುಃಖವಾಯಿತು.

ನಾಗಪ್ಪನವರು ವಯಸ್ಸಿಗೆ ಬಂದ ಮಗನನ್ನು ಹೊಡೆಯುವಂತಿರಲಿಲ್ಲ. ಶ್ರೀನಿವಾಸನ ಪ್ರಣಯ ಪ್ರಸಂಗ ಬಯಲಾದ ದಿನ ಅವರು 'ಬುಸು ಬುಸು' ನಾಗಪ್ಪನೇ ಆಗಿದ್ದರು. ಮನೆಗೆ ಬಂದ ಶ್ರೀನಿವಾಸ

ನನ್ನು ಕೋಪಾವೇಶದಿಂದ ಬೈದು ದಂಡಿಸಿದರು.

"ಇನ್ನೊಂದು ಕ್ಷಣವೂ ಈ ಮನೆಯಲ್ಲಿರಬೇಡ ಹಾಳಾಗು" ಎಂದು ಅವರು ನುಡಿದಾಗ—

"ಹೋಗುತ್ತೇನೆ ಯಾಕೆ ಸುಮ್ಮನೆ ಹೊಟ್ಟೆ ಉರಿದುಕೊಳ್ಳುತ್ತೀಯೋ ? ನೀನೇ ತಣ್ಣಗಿರು"

ಎಂದು ಶ್ರೀನಿವಾಸನೂ ಎದುರುತ್ತರ ಕೊಟ್ಟು, ಆ ಕ್ಷಣವೇ ಮನೆ ಬಿಟ್ಟು ಹೊರಟುಬಿಟ್ಟ. ವೆಂಕಮ್ಮ, ತಾನೇ ಇಷ್ಟಕ್ಕೆಲ್ಲ ಕಾರಣ ಎಂದು ಮಮ್ಮಲ ಮರುಗಿ ಎರಡು ದಿನ ಅನ್ನ-ನೀರು ಬಿಟ್ಟು ಅತ್ತಳು. ನಾಗಪ್ಪನವರಿಗೂ ತಾವು ಆ ಮಾತು ಆಡಬಾರದಾಗಿತ್ತು ಎನ್ನಿಸಿತ್ತು.

ಅಂದು ಮನೆಯಿಂದ ಹೊರಟ ಶ್ರೀನಿವಾಸ ಬೆಂಗಳೂರಿಗೆ ಬಂದು, ತಮ್ಮ ಸುಂದರುವನ್ನು ಸಂಧಿಸಿ, ಅವನೊಡನೆ ಎರಡು ದಿನ ಇದ್ದು, ಅನಂತರ ಒಂದಿರುಗುವಾಗ ಅವನ ಬೆಲೆಬಾಳುವ ಪಾರ್ಕರ್ ಪೆನ್ ಹಾರಿಸಿಕೊಂಡು ಮಾಯವಾದ. ಅದನ್ನು ಮಾರಿ, ಕಂಡದ್ದನ್ನು ಕೊಂಡು ತಿಂದು ಮೂರು ದಿನ ಬೆಂಗಳೂರಿನಲ್ಲಿ ಕಳೆದ ಶ್ರೀನಿವಾಸ. ನಾಲ್ಕನೇ ದಿನ ಉಪವಾಸಬಿದ್ದು. ಕೊನೆಗೆ ತನ್ನ ಊರೇ ಗತಿಯೆಂದು, ಟಿಕೆಟ್ ಇಲ್ಲದೆಯೇ ರೈಲು ಹತ್ತಿ ಅಗ್ರಹಾರಕ್ಕೆ ದಯಮಾಡಿಸಿದ.

ಈ ಸಂಗತಿಗಳೆಲ್ಲಾ ಒಬ್ಬರಿಂದೊಬ್ಬರಿಗೆ ತಿಳಿದು, ವೆಂಕಮ್ಮನ ಬಳಗಕ್ಕೂ, ನಾಗಪ್ಪನವರ ಪರಿಚಯ ವೃಂದಕ್ಕೂ ಹರಡಿತು. ಎಂತಲೇ ಶ್ರೀನಿವಾಸ ವಯಸ್ಸಿಗೆ ಬಂದಿದ್ದರೂ ಸಹ ಅವನ ಕಲ್ಯಾಣ ಗುಣಗಳನ್ನು ಕಂಡು ಯಾರೂ ಹೆಣ್ಣು ಕೊಡಲು ಮುಂದೆ ಬಂದಿರಲಿಲ್ಲ-ಅವಧಾನಿಗಳೊಬ್ಬರನ್ನು ಬಿಟ್ಟು.

ಆದರೆ ನಾಗಪ್ಪನವರೇ ಹೆಣ್ಣು ಹುಡುಕಿದರು.

ಒಂದು ದಿನ ತಾಲ್ಲೂಕು ಕಚೇರಿಯಲ್ಲಿ, ಗುಮಾಸ್ತೆ ಗುಂಡಣ್ಣನ ಮೂಲಕ ಕಪ್ಪುಹಳ್ಳಿಯ ರಂಗಯ್ಯನವರ ಪರಿಚಯವಾಯಿತು. ಪರಸ್ಪರ ಮಾತು ಬೆಳದು, ಕುಟುಂಬ ಸಮಾಚಾರಗಳು ಹೊರ ಬಂದವು.

"ನನಗೂ ದೇವರು ಐದು ಗಂಡು ಕೊಟ್ಟಿದ್ದಾನೆ. ಮೊದಲನೆಯವನಿಗೆ ಈಗಾಗಲೇ ಹೆಣ್ಣುಗಳು ಬರುತ್ತಿವೆ. ಹುಡುಗನ ಮನಸ್ಸಿಗೆ ಯಾವುದೂ ಒಪ್ಪಿಲ್ಲ. ಅವನ ಹಣೆಯಲ್ಲಿ ಯಾವ ಹುಡುಗಿಯನ್ನು

ಬರೆದಿದ್ದಾನೋ ಆ ಬ್ರಹ್ಮ?"

"ನೀವು ಮನಸ್ಸು ಮಾಡಿದರೆ ನನ್ನ ಮೊಮ್ಮಗಳನ್ನು ಮಾಡಿ ಕೊಳ್ಳಬಹುದು."

"ನಾನೇನು ಮನಸ್ಸು ಮಾಡುವುದು ರಂಗಯ್ಯನವರೇ ಹುಡುಗಿ ಯನ್ನು ಮದುವೆಯಾಗುವವನು ನನ್ನ ಮಗ. ಮುಖ್ಯ ಅವನೂ ಅವನ ತಾಯಿಯೂ ಒಪ್ಪಿದರೆ ಎಲ್ಲಾ ಆಗಬಹುದು."

"ಹಾಗಾದರೆ ನಾನು ಇವತ್ತೇ ಊರಿಗೆ ಹೋಗಿ ನಾಳೆ ನನ್ನ ಸೊಸೆಯನ್ನೂ ಮೊಮ್ಮಗಳನ್ನೂ ಕರೆದುಕೊಂಡು ಬರುತ್ತೇನೆ. ಕಂಕಣ ಪ್ರಾಪ್ತಿಯಿದ್ದರೆ ಆಗಿ ಹೋಗಲಿ ಎಲ್ಲಕ್ಕೂ ನಿಮ್ಮ ದೊಡ್ಡ ಮನಸ್ಸೇ ಮುಖ್ಯ."

"ಆಗಲಿ ರಂಗಯ್ಯನವರೇ. ಸಂತೋಷ ಹಾಗೇ ಮಾಡಿ. ಶುಭಸ್ಯ ಶೀಘ್ರಂ"

ಎಂದು ನಾಗಪ್ಪ ಅವರನ್ನು ಬೀಳ್ಕೊಟ್ಟು ಮನೆಗೆ ಬಂದರು. ಆ ವೇಳೆಗೆ ರಾತ್ರಿಯಾಗಿತ್ತು ಕೈಕಾಲು ತೊಳೆದು ಊಟಕ್ಕೆ ಕುಳಿ ತಾಗ, ಆ ಸಂತೋಷದ ಸುದ್ದಿಯನ್ನು ಹೆಂಡತಿಗೂ ಹೇಳಿದರು.

ಸದ್ಯ, ತಮ್ಮ ಮಗನಿಗೆ ಮದುವೆಯಾದರೆ ಸಾಕು ಎಂದು ಹಂಬಲಿಸುತ್ತಿದ್ದ ವೆಂಕಮ್ಮನಿಗೆ ಆ ಸುದ್ದಿ ತುಂಬ ಆನಂದವನ್ನುಂಟು ಮಾಡಿದ್ದಿತು.

ಆ ರಾತ್ರಿ ಮಲಗಿಕೊಂಡಾಗ ನಾಗಪ್ಪನವರಿಗಾಗಲಿ, ವೆಂಕಮ್ಮನಿ ಗಾಗಲಿ ಬೇಗನೆ ನಿದ್ದೆ ಹತ್ತಲಿಲ್ಲ ಇಬ್ಬರ ಮನಸ್ಸಿನಲ್ಲಿಯೂ ಶ್ರೀನಿವಾಸನ ಮದುವೆ ವಿಚಾರದಲ್ಲಿ, ಕೋಲಾಹಲವೇ ನಡೆದಿತ್ತು. ಇಬ್ಬರ ಮನಸ್ಸೂ ಒಂದೇ ವಿಚಾರವಾಗಿ, ಒಂದೇ ಸಮಯದಲ್ಲಿ, ಒಂದೇ ರೀತಿ ಯೋಚಿಸುತ್ತ ಯೋಚಿಸುತ್ತ ಹಿಂದು ಹಿಂದಕ್ಕೆ ಓಡಿ, ತಮ್ಮ ಮದುವೆಯ ನೆನಪನ್ನು ತಂದುಕೊಟ್ಟಿತು. ವೆಂಕಮ್ಮ ತಾನು ಅನು ಭವಿಸಿದುದನ್ನೆಲ್ಲಾ ಮರೆತಿರಲಿಲ್ಲ; ಆ ದಿನಗಳ ಪರಿಸ್ಥಿತಿ-ಘಟನೆಗಳು ಆಕೆಯ ಮನಃಪಟಲದಲ್ಲಿ ಆ ರಾತ್ರಿ ಸುಳಿದುಹೋದವು. ಹಾಗೆಯೇ ನಿದ್ರೆ ಬಾರದ ನಾಗಪ್ಪನವರೂ ತಮ್ಮ ಐವತ್ತೆಂಟು ವರ್ಷಗಳ ಆಯುಷ್ಯ ದಲ್ಲಿ ನಿಂಗನಹಳ್ಳಿ-ಅಗ್ರಹಾರಗಳಲ್ಲಿ ಕಳೆದ ಸುಮಾರು ಮೂವತ್ತೆರಡು

ವರ್ಷಗಳ ಬಾಳಿನ-ಬದುಕಿನ ಚಿತ್ರಗಳನ್ನು ಸ್ಮರಿಸಿಕೊಂಡರು.

'ಬಡವಂ ಬಲ್ಲಿದನಾಗನೇ....?'

ಸೋಮೇಶ್ವರ ಶತಕದ ಈ ವಾಕ್ಯ ನಾಗಪ್ಪನವರಿಗೆ ಅಂದು ರಾತ್ರಿ ಲೆಕ್ಕವಿಲ್ಲದಷ್ಟು ಬಾರಿ ನೆನಪಾಗಿತ್ತು.

ರಾತ್ರಿ ಕಳೆದು, ಸೂರ್ಯೋದಯವಾಯಿತೆಂದರೆ ಹಾಗೆ ಬಲ್ಲಿದನಾಗುವ – ಭಾಗ್ಯವಂತನಾಗುವ ಸುದಿನ ಬಂದೇ ಬಂದೀತೆಂದು ಅವರು ಭಾವಿಸಿದ್ದರು. ಮಗನೆಂಬ ಅಪೂರ್ವ ವಸ್ತುವನ್ನು ಕೊಳ್ಳಲು ಬರುವ ಗಿರಾಕಿಯಾದ ಕನ್ಯಾ ಪಿತೃವಿನ ಮೇಲೆ ತಂದೆಯಾದ ತಾನು ಮಾಲೀಕನ ಹಕ್ಕು ಚಲಾಯಿಸುವುದು ಹೇಗೆ ಎಂದು ಪರಿ ಪರಿ ಯೋಚನೆ ಮಾಡಿದರು ಎಲ್ಲಕ್ಕಿಂತ ಅವರ ಮನಸ್ಸಿನಲ್ಲಿದ್ದ ದೊಡ್ಡ ಪ್ರಶ್ನೆ – ವರದಕ್ಷಿಣೆ ಎಷ್ಟು ಕೇಳಬೇಕೆಂಬುದು

ಅವರ ಮನಸ್ಸು ತನ್ನಷ್ಟಕ್ಕೆ ತಾನೇ ಮಾತನಾಡಿಕೊಳ್ಳುತ್ತಿತ್ತು.

'ವರದಕ್ಷಿಣೆ ಕೇಳಿದರೆ' ತನ್ನಿಂದ ಕೊಡಲು ಸಾಧ್ಯವಿಲ್ಲವೆಂದು ಕನ್ಯಾ ಪಿತೃ ಹೇಳಬಹುದು.

"ಹೇಳಿದರೆ ಹೇಳಲಿ; ವರದಕ್ಷಿಣೆ ಕೊಡದಿದ್ದರೆ ಕನ್ಯೆಯೂ ಬೇಡ"

"ಕನ್ಯೆ ಬೇಡವೆಂದರೆ ಮಗನಿಗೆ ಮದುವೆ ಹೇಗಾಗುತ್ತದೆ ?"

"ಗಂಡಸು ಎಂದು ಹುಟ್ಟಿದ ಮೇಲೆ, ಅವನಿಗಾಗಿ ಒಂದು 'ಹೆಂಗಸು' ಎಂಬ ಜೀವ ಎಲ್ಲೋ ಒಂದು ಕಡೆ ಹುಟ್ಟಿಲ್ಲದೇ ಇರುತ್ತದೆಯೋ ?"

"ಹುಟ್ಟಿಲ್ಲದೆಯೂ ಇರಬಹುದು – ಅದರಲ್ಲೇನು ಆಶ್ಚರ್ಯ ? ಎಷ್ಟೋ ಮಂದಿ ಗಂಡಸರು ಹೆಣ್ಣಿನ ಸಂಗ ಇಲ್ಲದೆ ಹಾಗೆಯೇ ಉಳಿದಿಲ್ಲವೇ ?"

"ಆದರೆ ಶ್ರೀನಿವಾಸ ಹಾಗೆ ಉಳಿಯಲಾರ. ಅವನು ಜಿತೇಂದ್ರಿಯನಲ್ಲ ; ಅತಿ ಕಾಮಿ. ಎಷ್ಟೇ ಪ್ರಯತ್ನಪಟ್ಟರೂ ಸ್ವಭಾವಜನ್ಯವಾದ ಅತಿ ಕಾಮವನ್ನು ತಡೆಯಲು ಅವನಿಗೆ ಸಾಧ್ಯವಿಲ್ಲ !"

"ನಿನಗೆ ಹೇಗೆ ಗೊತ್ತು ?"

"ನನಗೇನು – ಊರಿಗೇ ಗೊತ್ತು ! ಚೆನ್ನಪ್ಪನ ಮಗಳು ಕೆಂಪಿ

ಅವನ ಖಾಯಂ ಪ್ರೇಯಸಿ ಎಂಬುದನ್ನು ತಿಳಿಯದವರೇ ಇಲ್ಲ. ಶೀಲಕ್ಕೆ ಗಮನ ಕೊಡದ ಎಷ್ಟೋ ಮಂದಿ ಹೊಲಗದ್ದೆಗಳಲ್ಲಿ ಕೂಲಿ ಮಾಡುವ ಹುಡುಗಿಯರು ಶ್ರೀನಿವಾಸನ ಕಾಮುಕ್ಕೆ ತುತ್ತಾಗಿದ್ದಾರೆ"

"ಆಗಲಿ ಬಿಡು ಅದರಿಂದ ನಿನಗೇನು ನಷ್ಟ ?"

"ನಷ್ಟವೇ. ಅದೂ ಅಲ್ಪಸಲ್ಪ ನಷ್ಟವಾದರೆ ಸುಮ್ಮನಿರಬಹುದಾಗಿತ್ತು. ಆದರೆ ಮಾನವೇ ನಷ್ಟವಾಗುತ್ತಿದೆಯಲ್ಲಾ....!"

"ಮಾನ ನಷ್ಟವೇ ?"

"ಹೌದು, ಕಂಡ ಕಂಡವರೆಲ್ಲಾ 'ನಿಮ್ಮ ಮಗ ಹಾಗೆ ಮಾಡಿದ ನಿಮ್ಮ ಮಗ ಹೀಗೆ ಮಾಡಿದ' ಎಂದು ನನ್ನ ಬಳಿ ಬಂದು ದೂರಿದರೆ ನನಗೆ ಅಪಮಾನವಲ್ಲವೇ ? ಅದು ಮಾನ ನಷ್ಟವಲ್ಲವೇ ? ಬಂಧುಗಳೂ ಪರಿಚಿತರೂ ಆಕಸ್ಮಿಕವಾಗಿ ಒಂದೆಡೆ ಒಟ್ಟುಗೂಡಿದಾಗ, ಶ್ರೀನಿವಾಸನ ವಿಷಯದ ಮಾತುಬಂದರೆ, 'ಇಂಥವನ ಮಗ ಹೀಗಂತೆ ಆದಕ್ಕೇ ಯಾರೂ ಹೆಣ್ಣು ಕೊಡಲಿಲ್ಲ, ಮದುವೆಯಾಗದೆ ಬಿದ್ದಿದ್ದಾನೆ' ಎಂದು ಕೆಟ್ಟ ಮಾತು ಆಡಿಕೊಂಡರೆ ನಾನು ಹುಟ್ಟಿ ಏನು ಸಾರ್ಥಕ ?"

"ಹಾಗಾದರೆ ಏನು ಮಾಡುತ್ತೀಯೋ ?"

"ಮಾಡುವುದೇನು ? ಮಗನಿಗೆ ಮದುವೆ ಮಾಡಿಯೇ ಮಾಡುತ್ತೇನೆ"

"ವರದಕ್ಷಿಣೆ ತೆಗೆದುಕೊಳ್ಳದೆಯೇ ಮಾಡುತ್ತೀಯಾ ?"

"ಉಂಟೆ ! ವರದಕ್ಷಿಣೆ ಕೊಡದಿದ್ದರೆ ಕೊರಳಿಗೆ ತಾಳಿ ಕಟ್ಟಿಸುತ್ತೇನೆಯೇ ?"

"ವರದಕ್ಷಿಣೆ ಕೊಡುವುದು ತಮ್ಮಿಂದ ಸಾಧ್ಯವಿಲ್ಲವೆಂದು ಕನ್ಯಾಪಿತೃ ಹೇಳಿದರೆ ಆಗೇನು ಮಾಡುತ್ತೀಯೇ ?"

ಮನಸ್ಸಿನ ಮಾತುಕತೆ ವಿಷಯವನ್ನು ಸುತ್ತಿ ಸುತ್ತಿ, ಗುರಿಗಾಣದೆ ಕೊನೆಗೆ ಅಲ್ಲೇ ಬಂದು ನಿಂತಿತು.

"ಹೇಗಾದರಾಗಲಿ, ಒಂದು ಸಾವಿರ ಕೇಳುವುದನ್ನು ಕೇಳಿಯೇ ಬಿಡುತ್ತೇನೆ. ಮುಂದೆ ಹೇಗಾಗುವುದೋ ನೋಡೋಣ"

ಆಗ ಮತ್ತೆ ನಾಗಪ್ಪನವರ ನೆನಪಿನಲ್ಲಿ ಸುಳಿದ ಪದ್ಯದ ಸಾಲು–

'ಬಡವಂ ಬಲ್ಲಿದನಾಗನೇ........?'

ಮತ್ತೆ ಮತ್ತೆ ಹಾಸಿಗೆಯ ಮೇಲೆ ಹೊರಳಾಡಿದರು ನಾಗಪ್ಪ. ಬೇಗನೆ ನಿದ್ದೆ ಬರಲೆಂದು ಬಿಗಿಯಾಗಿ ಕಣ್ಣು ಮುಚ್ಚಿಕೊಂಡರು. ಹಟಮಾಡಿದ್ದ ನಿದ್ದೆಗೆ ನಾಗಪ್ಪನವರ ಮೇಲೆ ಕರುಣೆ ಬಂತೇನೋ ಬೆಳಗಿನ ಝಾವದಲ್ಲಿ ವೆಂಕಮ್ಮ ಬೇಗನೆ ಹಾಸಿಗೆಯಿಂದೆದ್ದಾಗ, ನಾಗಪ್ಪ ನವರಿಗೆ ಸ್ವಲ್ಪ ಹೊತ್ತು ಜೊಂಪುಹತ್ತಿತು. ಆ ಸಣ್ಣ ನಿದ್ದೆಯಲ್ಲೂ ಅವರು ಅಸ್ಪಷ್ಟವಾಗಿ ಕನವರಿಸುತ್ತಿದ್ದರು :

"ಸಾವಿರ ಕೊಡಬೇಕು ಸ್ವಾಮಿ ... ಸಾವಿರ !"

೨

"ಅಷ್ಟು ಕೇಳಬೇಡಿ ಅಂದ್ರೆ"

ಕಾಫಿ ಬಟ್ಟಲನ್ನು ಗಂಡನ ಕೈಗಿತ್ತು ದೈನ್ಯದ ಧ್ವನಿಯಲ್ಲಿ ಹೇಳಿದಳು ವೆಂಕಮ್ಮ.

"ಅದೇನು ಮಹಾ ಹೆಚ್ಚೇ ?"

"ಹೆಚ್ಚೂಂತ ಅಲ್ಲ........"

"ಮತ್ತೇನು? ನಿಮ್ಮಪ್ಪನಿಗಂತೂ ಕೊಡುವುದಕ್ಕಾಗಲಿಲ್ಲ ಅಂದರೆ ಮಿಕ್ಕವರಿಗೂ ಆಗುವುದಿಲ್ಲ ಅಂತಲೇನು ?"

"ಏಕೆ ಹಾಗಂತೀರಿ–ತೆಗೆದ.ಕೊಂಡೂ ಇಲ್ಲಾಂತ !"

ಎಂದು ನಗುತ್ತಲೇ ನುಡಿದಳು ವೆಂಕಮ್ಮ. ನಾಗಪ್ಪನವರು ಕಾಫಿ ಕುಡಿದು ಲೋಟವನ್ನು ಕೆಳಗಿಟ್ಟು—

"ಮನೇಲ್ಲೇ ಇರೂಂತ ಹೇಳೇ ಶೀನಸಿಗೆ ನಾನು ಬಸ್ಸಿನ ಹತ್ತಿರಕ್ಕೆ ಹೋಗಿ ಬರುತ್ತೇನೆ"

ಎನ್ನುತ್ತಾ ಹೊರಗೆ ಹೊರಟರು

ಎಳೆಬಿಸಿಲು ಹಿತವಾಗಿತ್ತು. ಶ್ರೀನಿವಾಸ ಬೀದಿಯ ಜಗುಲಿಯ ಮೇಲೆ ಕುಳಿತು ಹತ್ತು ಮಾರು ದೂರದಲ್ಲಿದ್ದ ಬಾವಿಯ ಕಡೆಗೆ ನಿಟ್ಟಿಸುತ್ತಿದ್ದ. ಮನಸ್ಸಿನಲ್ಲಿ ಯಾವ ಉದ್ದೇಶವೂ ಇಲ್ಲದಿದ್ದರೂ

ಕಣ್ಣುಗಳು ಮಾತ್ರ ಏನೋ ಅಸ್ಪಷ್ಟ ಆಶೆಯಿಂದ ಬಾವಿ ಕಟ್ಟೆಯ ಬಳಿಯಿದ್ದ ಹೆಂಗಸರನ್ನೇ ನೋಡುತ್ತಿದ್ದವು. ಹಾಗೆ-ಹೀಗೆ ಓಲಾಡುತ್ತಾ ನೀರು ಸೇದುವಾಗ ಗಲಗುಟ್ಟುವ ಬಳೆಗಳ ಸಂಗೀತ, ಅದನ್ನಾಲಿಸಿ ತಲೆದೂಗುವಂತೆ ಉಸಿರಿನ ವೇಗಕ್ಕೆ ಏರಿಳಿಯುವ ಉಬ್ಬಿದ ಎದೆ, ಸುತ್ತೆಲ್ಲ ಚೆಲ್ಲಿರುವ ನೀರಿನ ಮೇಲೆ ಈಜಾಡಿ ನೆನೆದ ಹೋಗುವುದೆಂದೋ ಅಥವಾ ನೀರು ಹೊತ್ತು ನಡೆಯುವಾಗ ತೊಡೆಕಾಗದಿರಲೆಂದೋ – ಕೋಮಲವಾದ ತೊಡೆಗಳು ಇಣುಕುವಂತೆ ಮೇಲಕ್ಕೆ ಕಟ್ಟಿದ ಸೀರೆ, ಹೆಜ್ಜೆಯಂಚಿನಲ್ಲಿ ಹೊಳೆಯುವ ಕಾಲಂದಿಗೆ, ಮದುವೆಯಾಗಿದ್ದರೆ 'ಆಗಿದೆ'ಯೆಂದು ಸಾರುವ ಕಾಲುಂಗುರಗಳು, ಇಲ್ಲದಿದ್ದರೆ 'ಇಲ್ಲ'ವೆಂದು ಹೇಳುವ ಆಭರಣವಿಲ್ಲದ ಕಿವಿ ಮೂಗು–ಎಲ್ಲವನ್ನೂ ಎಡೆಬಿಡದೆ ನೋಡುತ್ತಿದ್ದ ಶ್ರೀನಿವಾಸ.

ಹೊರಗೆ ಬಂದ ನಾಗಪ್ಪನವರು ತಮ್ಮ ಮಗ ಎತ್ತ ನೋಡುತ್ತಿದ್ದಾನೆ–ಏನು ಮಾಡುತ್ತಿದ್ದಾನೆ ಎಂದು ಸೂಕ್ಷ್ಮವಾಗಿ ಪರಿಶೀಲಿಸಿದರು.

'ಏನು ಹೆಣ್ಣಿನ ಹುಚ್ಚೋ! ನಮ್ಮ ವಂಶದಲ್ಲೇ ಇಂಥವರಿರಲಿಲ್ಲ !!' ಎಂದುಕೊಂಡು—

"ಒಳಕ್ಕೆ ಹೋಗಿ ಸ್ನಾನ ಮಾಡೋ. ಒಗೆದ ಬಟ್ಟೆ ಹಾಕ್ಕೊಂಡು ಮನೇಲ್ಲೇ ಇರು, ಎಲ್ಲೂ ಹೋಗ್ಬೇಡ"

ಎಂದು ಮಗನಿಗೆ ಆಜ್ಞಾಪಿಸಿ ಬೀಗರಾಗುವವರನ್ನು ಇದಿರುಗೊಳ್ಳಲು ಜಡಿಗೇನ ಹಳ್ಳಿಯ ಕಡೆಗೆ ಹೊರಟರು.

ಮಾಸ್ತಿಯಿಂದ ಕಪ್ಪು ಹಳ್ಳಿಯನ್ನು ಹಾದು ಬೆಂಗಳೂರಿಗೆ ಹೋಗುವ ಬಸ್ಸು ಜಡಿಗೇನ ಹಳ್ಳಿಯ ಮೇಲೆಯೇ ಬರಬೇಕು. ಕಪ್ಪು ಹಳ್ಳಿಯಿಂದ ಬರುವ ಬೀಗರು ಅದೇ ಬಸ್ಸಿನಲ್ಲಿಯೇ ಬರುತ್ತೇವೆಂದು ಹೇಳಿದ್ದರು ಅಗ್ರಹಾರಕ್ಕೆ ಬರಬೇಕಾದವರು ಜಡಿಗೇನ ಹಳ್ಳಿಯಲ್ಲೇ ಇಳಿಯಬೇಕು. ಅಲ್ಲಿಂದ ಮೂರು ಮೈಲಿಯ ನಡಿಗೆ ಅಗ್ರಹಾರ

ನಾಗಪ್ಪನವರು ಬೇಗ ಬೇಗ ನಡೆದು ಜಡಿಗೇನ ಹಳ್ಳಿಯನ್ನು ತಲುಪಿದರು. ಬಸ್ಸು ನಿಲ್ಲುವಕಡೆ ಇದ್ದ ಹಾಸುಗಲ್ಲಿನ ಮೇಲೆ ಕುಳಿತಾಗ

ಹಾಯೆನಿಸಿತು ತಾವೇ ಅಲ್ಲಿಗೆ ಬರುವ ಬದಲು ಬೇರೆ ಯಾರನ್ನಾದರೂ ಕಳಿಸಬೇಕೆಂದು ಹಿಂದಿನ ರಾತ್ರಿಯೇ ಯೋಚಿಸಿದ್ದರು. ಆದರೆ, ಹಾಗೆ ಬೇರೆ ಯಾರನ್ನಾದರೂ ಕಳಿಸಿದ್ದರೆ, ಹೆಣ್ಣು ಕೊಡಲು ಬರುವ ರಂಗಯ್ಯ ನವರು ಅವರೊಡನೆ ಮಾತಿಗೆ ತೊಡಗಿ, ಶ್ರೀನಿವಾಸನ ಪೂರ್ವೋತ್ತರ ಗಳನ್ನೆಲ್ಲಾ ತಿಳಿದುಕೊಂಡುಬಿಡುವರೆಂದು ಊಹಿಸಿ ಮುಂಜಾಗ್ರತೆ ಯಿಂದ ತಾವೇ ಬಂದಿದ್ದರು ನಾಗಪ್ಪ.

ಹತ್ತು ಗಂಟೆಯ ವೇಳೆಗೆ ಮಾಸ್ತಿಯಿಂದ ಬಂದ ಭಗವಾನ್ ಬಸ್ಸು ಜಡಿಗೇನ ಹಳ್ಳಿಯಲ್ಲಿ ನಿಂತಿತು. ನಾಗಪ್ಪನವರ ಕಣ್ಣುಗಳು ತಮ್ಮ ಬೀಗರಾಗುವವರನ್ನು ಹುಡುಕುವಷ್ಟರಲ್ಲಿ ರಂಗಯ್ಯನವರೇ ಕಾಣಿಸಿಕೊಂಡು, ಕೈ ಮುಗಿಯುತ್ತಾ ತಮ್ಮ ಊರುಗೋಲಿನೊಡನೆ ಕೆಳಗಿಳಿದರು. ಅವರ ಹಿಂದೆ ಮೊಮ್ಮಗಳೂ, ಸೊಸೆಯೂ, ಇನ್ನೊಂದು ಸಣ್ಣ ಹುಡುಗಿಯೂ ಇಳಿದರು.

"ಗಾಡಿ ಕಟ್ಟಿಸಿಕೊಂಡು ಬರೋಣವೆಂದರೆ ರಸ್ತೆ ಚೆನ್ನಾಗಿಲ್ಲ – ತುಂಬಾ ಕೊರಕಲು. ಪಾಪ ಮೂರು ಮೈಲಿ ದೂರ ನಡೆಯಬೇಕಲ್ಲ"

ಎಂದು ನಾಗಪ್ಪನವರು ಉಪಚಾರದ ಮಾತನಾಡುತ್ತಾ ಕನಿಕರ ನಟಿಸುವ ಕಣ್ಣುಗಳಿಂದ ಆ ಇಬ್ಬರು ಹೆಂಗಸರ ಕಡೆಯೂ ನೋಡಿದರು.

"ಪರವಾಗಿಲ್ಲ, ಇದೆಲ್ಲ ಏನು ಮಹಾ ದೂರ? ಎಷ್ಟೋಸಾರಿ ನಮ್ಮೂರಿನಿಂದ ಮಾಲೂರಿಗೆ ನಡೆದು ನಮಗೆ ಅಭ್ಯಾಸವಾಗಿ ಹೋಗಿದೆ!"

ಎಂದರು ರಂಗಯ್ಯ.

"ಕಪ್ಪು ಹಳ್ಳಿಯಿಂದ ಮಾಲೂರಿಗೆ ತುಂಬಾ ದೂರವಲ್ಲವೇ?"

"ದೂರವೇನೋ ದೂರವೆ. ಆದರೆ ಹೈಸ್ಕೂಲಿಗೆ ಬರುವ ಹುಡು ಗರು ದಿನವಹಿ ನಡೆದುಬರಬೇಕಲ್ಲ........ನಮ್ಮ ನಾಗರತ್ನಳೂ ಒಂದು ವರ್ಷ ನಡೆದಿದ್ದಾಳೆ....ಬಸ್ಸು ಸಿಕ್ಕಿದರೆ ಸಿಕ್ಕಿತು – ಇಲ್ಲದಿದ್ದರೆ ಇಲ್ಲ!"

ಎನ್ನುತ್ತಾ ರಂಗಯ್ಯ ಮೊಮ್ಮಗಳ ಕಡೆ ನೋಡಿದರು. ಆ ಹುಡುಗಿಯೇ 'ನಾಗರತ್ನ' ಇರಬಹುದೆಂದು ಊಹಿಸಿಕೊಂಡರು ನಾಗಪ್ಪ

"ಅಂದರೆ ಮೊಮ್ಮಗಳು ಹೈಸ್ಕೂಲಿಗೂ ಹೋಗಿದ್ದಾಳೆ ಅನ್ನಿ!"

"ಪೋರ್ತ್ ಫಾರಂ ಪ್ಯಾಸಾಗಿದೆ. ಅವಳಿಗೇನೋ ಓದ ಬೇಕೆಂಬಾಸೆ. ಆದರೆ ಅಷ್ಟುದೂರ ನಡೆಯುವುದನ್ನು ನೋಡಲಾರದೆ ನಾವೇ ಬೇಡವೆಂದು ನಿಲ್ಲಿಸಿಬಿಟ್ಟೆವು."

"ಒಳ್ಳೇಕೆಲಸವೇ ಮಾಡಿದಿರಿ ಬಿಡಿ....ಹೆಣ್ಣುಮಕ್ಕಳಿಗೆಲ್ಲಾ ಓದಿ ನಿಂದೇನಾಗಬೇಕು ?"

ಎಂದರು ನಾಗಪ್ಪ. ಅದನ್ನೇ ಮುಂದುವರಿಸುವಂತೆ–

"ಎಷ್ಟು ಓದಿದರೂ ಮುಸುರೆ ತೊಳೆಯುವುದು ತಪ್ಪೋಲ್ಲ !"

ಎಂದಳು ರಂಗಯ್ಯನವರ ಸೊಸೆ ರಾಜಮ್ಮ. ನಾಗರತ್ನಳನ್ನು ಬಿಟ್ಟು ಮಿಕ್ಕವರೆಲ್ಲಾ ನಕ್ಕರು.

"ನೋಡಿ, ಆ ಸರ್ವೆ ತೋಪು ದಾಟಿದರೆ ನಮ್ಮೂರು...."

ರಂಗಯ್ಯನವರ ಪರಿವಾರ ನಾಗಪ್ಪನವರು ಕೈ ತೋರಿದ ಕಡೆಗೆ ದಿಟ್ಟಿಸಿತು. ಎರಡು ತೋಪುಗಳ ನಡುವಣ ಬಯಲು ದಾರಿಯಿಂದ ಊರಿನ ವರದರಾಜಸ್ವಾಮಿ ದೇವಾಲಯದ ಗೋಪುರ ಸ್ಪಷ್ಟವಾಗಿ ಕಾಣಿಸುತ್ತಿತ್ತು.

"ಊರೇನೋ ಸೊಗಸಾಗಿದೆ ಸ್ವಾಮಿ, ತುಂಬ ವಿಶಾಲವಾಗಿದೆ. ಆದರೆ ಊರಿನ ಜನಗಳ ಮನಸ್ಸು ಮಾತ್ರ ವಿಶಾಲವಾಗಿಲ್ಲ."

"ಎಲ್ಲಾ ಊರುಗಳಲ್ಲಿಯೂ ಹಾಗೆಯೇ ಸ್ವಾಮಿ. ಕಾಲವೇ ಹಾಗೆ ಬಂದು ಬಿಟ್ಟಿದೆಯಲ್ಲ."

ಲೋಕಾಭಿರಾಮದ ಮಾತುಗಳು ಬೇಸರ ಬರದಂತೆ ಅತಿಥಿ ಗಳನ್ನು ಅಗ್ರಹಾರಕ್ಕೆ ತಂದುಬಿಟ್ಟವು. ನಾಗಪ್ಪನವರು ಎಲ್ಲರನ್ನೂ ಕರೆದುಕೊಂಡು ಮನೆಯೊಳಗೆ ಬಂದರು. ಅಂಗಳದಲ್ಲಿ ಕುಳಿತಿದ್ದ ಶ್ರೀನಿವಾಸ ಅವರನ್ನು ಕಂಡು ಎದ್ದು ನಿಂತ.

ರಾಜಮ್ಮನನ್ನೂ ನಾಗರತ್ನಳನ್ನೂ ಮೆಲು ನಗೆ ನಗುತ್ತಾ ಒಳಕ್ಕೆ ಕರೆದುಕೊಂಡು ಹೋದಳು ವೆಂಕಮ್ಮ.

ಕೋಟು ತೆಗೆಯದೆ ಹಾಗೆಯೇ ಕುಳಿತ ರಂಗಯ್ಯನವರನ್ನು—

"ಏಳಿ, ಕೈಕಾಲು ತೊಳೆದುಕೊಳ್ಳಿ"

ಎಂದರು ನಾಗಪ್ಪ. ಅಷ್ಟರಲ್ಲಿ ಕಾಫಿ ತಂದುಕೊಟ್ಟ ಸುಮಿತ್ರ ಳನ್ನು ನೋಡಿದ ರಂಗಯ್ಯ—

"ನಿಮ್ಮ ಮಗಳೋ ?"—ಎಂದರು.

"ಹ್ಞೂಂ"

"ವಯಸ್ಸು ?"

"ಅವಳಿಗೂ ಹನ್ನೊಂದಾಯಿತು....ಹೆಣ್ಣು ಮಕ್ಕಳೇನು ಬೇಗ ಬೆಳೆದು ಬಿಡುತ್ತಾರೆ !"

ನಾಗಪ್ಪನವರು ಹೇಳಿದ ಮಾತಿನ ಆ ಕೊನೆ ವಾಕ್ಯವನ್ನು ತಾವೇ ಹೇಳಬೇಕೆಂದಿದ್ದರು ರಂಗಯ್ಯ........

"ಅದೇನೋ ನಿಜಾನ್ನಿ ! ನೋಡಿ. ನಮ್ಮ ನಾಗರತ್ನಳಿಗೆ ಇನ್ನೂ ಹದಿನಾರು ತುಂಬಿಲ್ಲ–ಆಗಲೇ ಹೇಗೆ ಬೆಳೆದುಬಿಟ್ಟಿದ್ದಾಳೆ !!"

ನಾಗಪ್ಪನವರ ಮುಖದಲ್ಲಿ ಮಂದಹಾಸ ಮೂಡಿತು. ಅವರ ಮನಸ್ಸು ನಾಗರತ್ನಳ ಸುತ್ತ ಕನಸು ಕಟ್ಟಿತು........

....ನಾಗರತ್ನ–ಹೆಸರು ಚೆನ್ನಾಗಿದೆ; ತಕ್ಕಮಟ್ಟಿಗೆ ಓದಿದ್ದಾಳೆ; ವಯಸ್ಸಿನ್ನೂ ಹದಿನಾರೂ ತುಂಬಿಲ್ಲ ! ಶ್ರೀನಿವಾಸ ನಿಜವಾಗಿಯೂ ಅದೃಷ್ಟವಂತ-ಇಂಥ ಹೆಂಡತಿ ಸಿಕ್ಕುವುದಕ್ಕೆ ಪುಣ್ಯ ಮಾಡಿದ್ದ........

"ಅಣ್ಣಾ, ಊಟಕ್ಕೇಳಬೇಕಂತೆ"

ಎಂದು ನಾಣಿ ಕರೆದಾಗಲೇ ನಾಗಪ್ಪನವರಿಗೆ ಎಚ್ಚರ; ಅವರು ಕನಸಿನ ಲೋಕದಿಂದ ನನಸಿನ ಲೋಕಕ್ಕೆ ಇಳಿದು ಬಂದರು.

"ಏಳಿ, ಕೈಕಾಲು ತೊಳೆದುಕೊಳ್ಳಿ" ಎಂದು ಇನ್ನೊಮ್ಮೆ ನುಡಿದರು ನಾಗಪ್ಪ. ಹಿಂದುಮುಂದು ತುಳಿಯುತ್ತಿದ್ದ ರಂಗಯ್ಯನವರು ಏಕೋ ಅನುಮಾನಿಸುತ್ತಿದ್ದರು. ಅದೇ ಸಮಯಕ್ಕೆ ಹೊರಗಡೆ ಬಂದಳು ವೆಂಕಮ್ಮ.

"ಏಕೆ ಯೋಚಿಸುತ್ತಿದ್ದೀರಿ. ಕೋಟು ತೆಗೆಯಿರಿ. ಹೆಣ್ಣು ಕೊಡಲು ಬಂದವರು ಗಂಡಿನ ಮನೆಯಲ್ಲಿ ಊಟ ಮಾಡಬಾರದು ಎಂದು ಯೋಚಿಸುತ್ತಿದ್ದಾರೇನೋ ! ನಾನೇನೂ ನಮ್ಮ ಮನೆಯಲ್ಲಿ ಅಡಿಗೆ ಮಾಡಲಿಲ್ಲ. ಶ್ಯಾನುಭೋಗರ ಮನೆಯ ಸೀತಮ್ಮನೇ ಮಾಡಿ ತಂದಿಟ್ಟಿದ್ದಾಳೆ; ಬಡಿಸುವುದಕ್ಕೂ ನಾನು ನಿಲ್ಲುವುದಿಲ್ಲ, ಅವಳೇ ಬಡಿಸುತ್ತಾಳೆ"

ಎಂದು ವೆಂಕಮ್ಮ ರಂಗಯ್ಯನವರ ಅನುಮಾನವನ್ನು ಪರಿ

ಹರಿಸಿದಳು.

"ಓಹೋ ! ಹೀಗೋ ಸಮಾಚಾರ !!"

ಎನ್ನುತ್ತಾ ಅವರನ್ನು ಕರೆದುಕೊಂಡು ಬಚ್ಚಲು ಮನೆಗೆ ಹೋದರು ನಾಗಪ್ಪ. ಅವರು ಬರುವಷ್ಟರಲ್ಲಿ ಒಳ ಅಂಗಳದಲ್ಲಿ ಬಾಳೆ ಎಲೆ ಹಾಸಿದ್ದಳು ಸೀತು ಅಡಿಗೆ ಮನೆಯಲ್ಲಿಯೇ ಕುಳಿತು ನಾಗ ರತ್ನಳೂ ರಾಜಮ್ಮನೂ ಆಗಲೇ ಊಟ ಮಾಡುತ್ತಿದ್ದರು ಕೋಸಂ ಬರಿ, ಹುರಳಿಕಾಯಿ ಪಲ್ಯ, ಬೆಂಡೇಕಾಯಿ ಗೊಜ್ಜು, ಅಮಟೇ ಕಾಯಿ–ಮಾಗಳ ಬೇರಿನ ಉಪ್ಪಿನಕಾಯಿ ಎಲೆಯಂಚಿನಲ್ಲಿ ನಾಲಾಗಿ ಅಲಂಕರಿಸಿದವು ವೆಂಕಮ್ಮನ ಆದೇಶದಂತೆ ಪೂರಿ–ಪಾಯಸದ ಪುಟ್ಟ ಔತಣವನ್ನು ಮಾಡಿದ್ದಳು ಸೀತು.

ಊಟ ಮುಗಿಯುವಷ್ಟರಲ್ಲಿ ರಾಹುಕಾಲ ಬಂದಿತು ಮೂರು ಗಂಟೆ ಕಳೆಯುವವರೆಗೂ ಮದುವೆಯ ಮಾತು ಆಡುವಂತಿರಲಿಲ್ಲ. ಕಾಡುಹರಟೆಯೂ ಸಾಕಾಗಿದ್ದರಿಂದ ವಿಶ್ರಾಂತಿಯ ನೆಪದಲ್ಲಿ ಸ್ವಲ್ಪ ಹೊತ್ತು ಕಣ್ಣು ಮುಚ್ಚಿಕೊಂಡರು – ಹಿರಿಯರಾದವರು. ವೆಂಕಮ್ಮ ಮಾತ್ರ ಹಿತ್ತಲ ಕಲ್ಲ ಮೇಲೆ ಅಡಿಗೆ ಮನೆಯ ಪಾತ್ರೆಗಳನ್ನು ತೊಳೆ ಯುವುದರಲ್ಲಿ ಮಗ್ನಳಾಗಿದ್ದಳು ರಾಜಮ್ಮ ನಿದ್ರಿಸುತ್ತಿದ್ದ ಹೊರಗಿನ ಕೋಣೆಯೊಳಗಡೆ ನಿಂತಿದ್ದ ನಾಗರತ್ನ ಕಿಟಕಿಯ ಕಡೆಗೆ ದಿಟ್ಟಿಸು ತ್ತಿದ್ದಳು. ಅವಳಿಗೆ ತಾನು ಕಾಣದಂತೆ ಜಗುಲಿಯ ಮೇಲೆ ಕುಳಿತಿದ್ದ ಶ್ರೀನಿವಾಸ ಅವಳನ್ನೇ ನೋಡುತ್ತಿದ್ದ.

ಹುಡುಗಿ ಎತ್ತರವಾಗಿದ್ದಳು. ಹೆಚ್ಚು ದಪ್ಪವೂ ಇಲ್ಲದ – ತೆಳುವೂ ಇಲ್ಲದ ಸಾಮಾನ್ಯ ಮೈಕಟ್ಟು. ಸಾಧಾರಣ ಬಿಳುಪಿನ ಮೈ, ಮಾಟವಾದ ಉಬ್ಬಿದ ಎದೆ, ಉದ್ದವಾದ ಕೊರಳು, ಹಾಗೆಯೇ ಕೋಲು ಮುಖ. ವಿಶಾಲವಾದ ಹಣೆ, ಕೂಡಿದ ಹುಬ್ಬು, ಒಳಕ್ಕೆಳೆದಿದ್ದ ಕಣ್ಣು ಗಳು, ಮೊಂಡಾದ ಮೂಗು, ಮೂಳೆ ಕಾಣುವ ತೆಳ್ಳಗಾದ ಕೆನ್ನೆ, ಅಗಲವಾದ ಬಾಯಿ, ಉಟ್ಟಿದ್ದು ಬಿಳಿಯ ಸೀರೆ, ತೊಟ್ಟಿದ್ದು ಬಿಳಿಯ ಕುಪ್ಪಸ – ನಾಗರತ್ನಳನ್ನು ಹೆಂಗಸೆಂದು ಸಾರುತ್ತಿದ್ದವೇ ಹೊರತು ಸೌಂದರ್ಯವತಿಯೆಂದು ಹೇಳುವ ಧೈರ್ಯ ಅವಕ್ಕಿರಲಿಲ್ಲ.

ಶ್ರೀನಿವಾಸ ಬಹಳ ಹೊತ್ತು ಅವಳನ್ನು ನೋಡಿದ. ಅವನು

ಅವಳ ರೂಪವನ್ನು ಸವಿದನೋ ಇಲ್ಲವೋ! ಅಂತೂ ಆ ಹೆಣ್ಣು ತನಗಾಗಿ ಬಂದಿರುವಳೆಂದು ಹೆಮ್ಮೆಪಟ್ಟುಕೊಂಡ.

ಅವಳೂ ಹಾಗೆಯೇ ನಿಂತಿದ್ದಳು – ಹೊರಗೆ ನೋಡುತ್ತಾ. ಶ್ರೀನಿವಾಸ ಜಗುಲಿಯಿಂದೆದ್ದು ಕಿಟಕಿ ಬಳಿಗೆ ಕಳ್ಳಹೆಜ್ಜೆಯಿಟ್ಟ. ಹುಡುಗಿ ಅವನನ್ನು ನೋಡಿ ನಾಚಿಕೆ ಪಡದೆ ಹಾಗೆಯೇ ನಿಂತಿದ್ದಳು. ಶ್ರೀನಿವಾಸ ಅವಳ ಎದುರಿಗೇ ಬಂದು ನಿಂತ. ಆಗ ಆಕೆ ಮುಚ್ಚಿದ್ದ ತುಟಿಯನ್ನು ಒಗ್ಗಿಸಿ ನಕ್ಕಂತೆ ಮಾಡಿದಳು. ಅವರಿಬ್ಬರ ಮಧ್ಯೆ ಕಿಟಕಿಯ ಸರಳುಗಳು ಅಡ್ಡವಾಗಿದ್ದವು.

"ನಿನ್ನ ಹೆಸರು – ನಾಗರತ್ನ ಅಂತಲೇ ?"

"ಹ್ಞ" ಎಂಬಂತೆ ತಲೆ ಗಮುಕುಹಾಕಿದಳು ಹುಡುಗಿ.

"ನನ್ನನ್ನು ನೋಡಿದಿಯಾ ?"

ಶ್ರೀನಿವಾಸನ ಆ ಹುಚ್ಚು ಪ್ರಶ್ನೆಗೆ ಹುಡುಗಿ ಏನುತ್ತರಿಸಬೇಕು? ಮೊದಲಿನ ಹಾಗೆಯೇ ಶಬ್ದವಿಲ್ಲದೆ ನಕ್ಕಳು.

"ನನ್ನನ್ನು ಮದುವೆ ಆಗುತ್ತೀತಾನೇ ?"

ಮೆಲ್ಲನೆ ಸರಳಿನೊಳಗಡೆ ಕೈಯಿಟ್ಟು, ಅವಳ ಕೈಗಳನ್ನು ಹಿಡಿದುಕೊಂಡು. ಅವಳ ತೋಳಿನ ಮೇಲೆಲ್ಲಾ ಕೈಯಾಡಿಸಿ ಮೃದುವಾಗಿ ಅಮುಕಿದ. ಅಷ್ಟರಲ್ಲಿ

"ನೀನೂ ಒಂದು ಕ್ಷಣ ಮಲಗಿಕೋಬಾರದೇನೇ ನಾಗೂ"

ಎಂದು ಮಗ್ಗಲು ಬದಲಿಸುತ್ತಾ ರಾಜಮ್ಮ ಹೇಳಿದಾಗ, ಹಿಂದುಹಿಂದಕ್ಕೆ ಸರಿಯುತ್ತ ನಾಗರತ್ನ ಅವಳ ಪಕ್ಕದಲ್ಲಿ ಬಂದು ಮಲಗಿದಳು.

ಅದೇ ಸಮಯಕ್ಕೆ ಗಟ್ಟಿಯಾಗಿ ಕೇಳಿಸಿದ ಆಕಳಿಕೆಯ ಶಬ್ದ, ಒಳಗಿನಿಂದ ನಾಗಪ್ಪನವರು ಬರುತ್ತಿದ್ದಾರೆಂದು ಸೂಚಿಸಿತು. ಶ್ರೀನಿವಾಸ ಹಾಗೆಯೇ ಜಗುಲಿಯ ಮೇಲೆ ಮಲಗಿ, ನಿದ್ರಿಸುವವನಂತೆ ನಟಿಸಿದ.

ನಾಗಪ್ಪನವರು ಎರಡು ಬಾರಿ ಕೂಗಿದಾಗ ಅವನು ಎದ್ದು ಕುಳಿತ. ಅವನೇನು ನಿದ್ರೆಮಾಡುತ್ತಿದ್ದನೇ? ಮಾಡುತ್ತಿದ್ದೆನೆಂದು ಹೇಳುವಂತೆ ಕಣ್ಣುಜ್ಜಿಕೊಂಡ.

"ಶ್ಯಾನುಭೋಗರ ಮನೆಯಲ್ಲಿ ಗಂಟೆ ಎಷ್ಟಾಯಿತೋ ನೋಡಿಕೊಂಡು ಬಾರೋ"

ಎಂದು ಅವನನ್ನು ಅಟ್ಟಿ ಮತ್ತೆ ಒಳಕ್ಕೆ ಹೋದರು ನಾಗಪ್ಪ. ಆಗತಾನೆ ರಂಗಯ್ಯನವರೂ ಎದ್ದು ಕುಳಿತಿದ್ದರು ಮನೆಯಲ್ಲೆಲ್ಲಾ ನೀರವತೆ ತುಂಬಿತ್ತು. ಕಿಟ್ಟು, ನಾಣಿ, ಶ್ಯಾಮು ಮೂವರೂ ಶಾಲೆಗೆ ಹೋಗಿದ್ದರು. ಸುಮಿತ್ರೆಯನ್ನು ಮಾತ್ರ ಆ ದಿನ ಶಾಲೆಗೆ ಹೋಗ ಬೇಡವೆಂದು ಹೇಳಿ, ತನ್ನ ನೆರವಿಗಾಗಿ ನಿಲ್ಲಿಸಿಕೊಂಡಿದ್ದಳು ವೆಂಕಮ್ಮ ಆದರೆ ಆಗ ಸುಮಿತ್ರೆಯೂ ನೆರಮನೆಯ ಸೀತಮ್ಮನ ಮಗಳು ಶಾಂತುವಿ ನೊಡನೆ ಅವರ ಮನೆಯಲ್ಲಿಯೇ 'ಪಲ್ಲಾಂಗುಣಿ' ಆಡುತ್ತಾ ಕುಳಿತು ಬಿಟ್ಟಿದ್ದಳು.

ಗಂಟೆ ನೋಡಿ ಬರಲು ಹೋದ ಶ್ರೀನಿವಾಸ, ಆಡುತ್ತಿದ್ದ ಸುಮಿತ್ರೆಯನ್ನು ಕಂಡು-'ಅಮ್ಮ ಕರೀತಾಳೆ ಬಾರೆ ಸುಮಿತ್ರ' ಎಂದು ಸುಳ್ಳು ಕರೆ ಕೊಟ್ಟು ಬಂದ ಅಷ್ಟಕ್ಕೇ ಆಟವನ್ನು ನಿಲ್ಲಿಸಿ ಅವನ ಹಿಂದೆಯೇ ಓಡಿ ಬಂದಳು ಸುಮಿತ್ರ

"ನಾಲ್ಕೂವರೆಗೆ ಇನ್ನೂ ಐದು ನಿಮಿಷ ಇದೆಯ ಣ್ಣ"

ಎಂದು ಶ್ರೀನಿವಾಸ ಹೇಳಿದ ಐದು ನಿಮಿಷಗಳ ನಂತರ ಸುಮಿತ್ರ ಎಲ್ಲರಿಗೂ ಕಾಫಿ ತಂದು ಕೊಟ್ಟಳು ರಾಜಮ್ಮನೂ ನಾಗರತ್ನಳೂ ಕಾಫಿ ಕುಡಿದು ಹೆಳಲು ಹಾಕಿಕೊಂಡರು ನಾಗರತ್ನ ತಾನು ತಂದಿದ್ದ ಕನಕಾಂಬರ ಬಣ್ಣದ ವಾಯಿಲ್ ಸೀರೆ ಉಟ್ಟಳು. ಸುಮಿತ್ರ, ಎಂದೋ ಬೆಂಗಳೂರಿನಿಂದ ತನ್ನಣ್ಣ ಸುಂದರು ತೆಗೆದು ಕಳುಹಿಸಿದ್ದ ಪೌಡರನ್ನೇ ಅವಳ ಮುಖಕ್ಕೆ ಬಳಿದಳು. ವೆಂಕಮ್ಮ ಮೊಗ್ಗು ಮಲ್ಲಿಗೆಯ ದಂಡೆಯನ್ನು ಮುಡಿಸಿದರು. ರಾಜಮ್ಮ ಮಗಳನ್ನು ಕರೆದು ಕೊಂಡು ಹೊರ ಅಂಗಳಕ್ಕೆ ಬಂದು ಚಾಪೆಯ ಮೇಲೆ ಕೂಡಿಸಿದಳು.

"ಮೊದಲು ನಮಸ್ಕಾರ ಮಾಡಮ್ಮ"

ಎಂದರು ರಂಗಯ್ಯ. ನಾಗರತ್ನ ನಾಗಪ್ಪನವರ ಕಾಲಿಗೆರಗಿದಳು. ವೆಂಕಮ್ಮನ ಪಾದಗಳನ್ನು ಕಣ್ಣಿಗೊತ್ತಿಕೊಂಡಳು. ಇಬ್ಬರೂ ಪಿಸು ದನಿಯಲ್ಲೇ ಅವಳನ್ನು ಆಶೀರ್ವದಿಸಿದರು

"ಹುಡುಗಿಗೆ ಹಾಡು ಹಸೆ ಏನಾದರೂ ಬರುತ್ತ್ಯೋ ?"

ನಾಗಪ್ಪನವರ ಪ್ರಶ್ನೆಗೆ ಉತ್ತರಿಸುವ ಮುನ್ನ ರಂಗಯ್ಯನವರು ಸುತ್ತಲೂ ನೋಡಿದರು. ಅವರು ನೋಡಿದ್ದು ಹಾರ್ಮೋನಿಯಂ

ಪೆಟ್ಟಿಗೆ ಎಲ್ಲಾದರೂ ಇದೆಯೋ ಎಂದು. ಅಂಗಳವಲ್ಲೆಲ್ಲೂ ಕಾಣಿಸಲಿಲ್ಲ. ಧೈರ್ಯ ಮಾಡಿಕೊಂಡು ಹೇಳಿದರು

"ಹುಡುಗಿ ಹಾರ್ಮೋನಿಯಂ ಸೊಗಸಾಗಿ ಬಾರಿಸುತ್ತಾಳೆ. ಕೀರ್ತನೆಗಳವರೆಗೂ ಚೆನ್ನಾಗಿ ಪಾಠ ಆಗಿದೆ"

"ಎಲ್ಲಮ್ಮ ಒಂದು ಹಾಡು ಹೇಳು"

ಎಂದು ಕೇಳಿಬಿಟ್ಟರು ನಾಗಪ್ಪ. ರಾಜಮ್ಮನ ಮುಖದಲ್ಲಿ ಕಳವಳ ಮೂಡಿದ್ದರೆ, ನಾಗರತ್ನಳ ಮುಖದಲ್ಲಿ 'ಒಳ್ಳೆ ಇಕ್ಕಟ್ಟಿಗೆ ಸಿಕ್ಕಿ ಹಾಕಿಕೊಂಡೆನಲ್ಲ' ಎಂಬ ಗಾಬರಿ ತಲೆದೋರಿತ್ತು.

"ಹುಡುಗಿಗೆ ಕಂಠ ಸಾಲದು. ಹಾರ್ಮೋನಿಯಂ ಇಲ್ಲದೆ ಇದ್ದರೆ ನಾಚಿಕೆ ಪಟ್ಕೋತಾಳೆ" ಎಂದರು ರಂಗಯ್ಯ ಆದರೆ ಸುಮಿತ್ರ—

"ಸೀತಕ್ಕನ ಮನೆಯಲ್ಲಿದೆ. ತರ್ತೀನಿ ತಾಳಮ್ಮ"

ಎನ್ನುತ್ತಾ ಓಡಿ ಹೋದಳು. ಹಾರ್ಮೋನಿಯಂ ಗಂಧವೇ ಇಲ್ಲದ ನಾಗರತ್ನ ನಿಜವಾಗಿಯೂ ಪೇಚಿಗೆ ಸಿಕ್ಕಿಕೊಂಡುಬಿಟ್ಟಳು. ತನ್ನ ಮಾನ ಪರೀಕ್ಷೆಯಾಗುವುದಲ್ಲಾ ಎಂದು ಅವಳ ಕಣ್ಣುಗಳು ಹನಿಗೂಡಿದವು ಇನ್ನು ಉಳಿದಿರುವುದೆಂದರೆ ಅಳುವುದು. ಆ ಕೊನೆಯ ಗಳಿಗೆಯಲ್ಲಿ ತಟ್ಟನೆ ಉಪಾಯ ಹೊಳೆಯಿತು ಕೂಡಲೇ ಶ್ರೀನಿವಾಸನ ಕಡೆಗೆ ನೋಡಿದಳು. ಅವನೂ ಅವಳನ್ನೇ ನೋಡುತ್ತಿದ್ದ. ಅವಳ ಕಣ್ಣುಗಳು ಅವನಿಗೆ ಏನೋ ಸಂಜ್ಞೆ ಮಾಡಿದವು ಅವನು ಎದ್ದು ಹೊರಗೆ ಹೋದ. ಅಷ್ಟರಲ್ಲಿ ಸುಮಿತ್ರೆಯೂ-ಶಾಂತುವೂ ಒಂದೊಂದು ಕಡೆ ಹಿಡಿದುಕೊಂಡು ಹಾರ್ಮೋನಿಯಂ ತರುತ್ತಿದ್ದರು. ಅವರನ್ನು ನೋಡಿ

"ಬೇಡವಂತೆ. ಕೊಟ್ಟು ಬಿಡು ಹೋಗೇ ಸುಮಿತ್ರ"

ಎಂದ ಶ್ರೀನಿವಾಸ. ಸುಮಿತ್ರೆಯ ಮುಖ ಸಪ್ಪೆಯಾಯಿತು.

ಅಷ್ಟರಲ್ಲಾಗಲೇ ಮಾತು ಬದಲಾಗಿತ್ತು—

"ಮನೆ ಕೆಲಸವೆಲ್ಲಾ ಮಾಡ್ತಾಳೆ, ಅಡಿಗೇನಲ್ಲೂ ಕೈ ಪಳಗಿದೆ. ಏನೋ ಅಷ್ಟು-ಇಷ್ಟು ಕಸೂತಿ ಹಾಕುವುದನ್ನೂ ಕಲಿತಿದ್ದಾಳೆ."

ರಾಜಮ್ಮ ಮಗಳ ಬೆನ್ನು ತೀಡುತ್ತಾ ಹೇಳಿದಳು.

"ಹುಡುಗನನ್ನು ಸರಿಯಾಗಿ ನೋಡಮ್ಮ"

ನಾಗಪ್ಪ ನಗುತ್ತಾ ಹೇಳಿದರು.

ಈಗೇನು ತಾನು ಹೊಸದಾಗಿ ನೋಡಬೇಕೆ ಹುಡುಗನನ್ನ ? ಮಧ್ಯಾಹ್ನವೇ ಕಣ್ತುಂಬ ನೋಡಿದ್ದಾಗಿದೆಯಲ್ಲ! — ಎನ್ನಿಸಿತ್ತು ನಾಗರತ್ನಳಿಗೆ.

"ಹುಡುಗನೂ ಒಪ್ಪಬೇಕಲ್ಲ !"

"ಅವನದೇನು ಬಿಡಿ, ಒಪ್ಪುತ್ತಾನೆ"

ಅನಂತರ ಕೊಡು – ಕೊಳ್ಳುವ ವಿಚಾರ ಬಂದಿತು.

ರಂಗಯ್ಯನವರು ಬುದ್ಧಿವಂತರು—

"ಹುಡುಗಿಗೆ ಏನೇನು ಒಡವೆ ಮಾಡಿಸುತ್ತೀರೋ ಮಾಡಿಸಿ ? ಇದೇ ಮಾಡಿಸಿ – ಅದೇ ಮಾಡಿಸಿ ಎಂದು ನಾವು ಕೇಳುವುದಿಲ್ಲ ಏನು ಮಾಡಿಸಿದರೂ ನಿಮ್ಮ ಹುಡುಗಿಗೇ ತಾನೆ ಮಾಡಿಸುತ್ತೀರಿ !"

"ನಾವು ಕೊಡಬೇಕಾದ್ದು ಒಂದು ಬೆಳ್ಳಿಯ ತಟ್ಟೆ, ಚೊಂಬು, ಪಂಚಪಾತ್ರೆ ಕೊಟ್ಟುಬಿಡುತ್ತೇವೆ"

ಎಂದು ರಾಜಮ್ಮನೂ ತನ್ನ ಮಾವನಂತೆಯೇ ಬುದ್ಧಿವಂತಿಕೆಯಿಂದ ಹೇಳಿದಳು. ನಾಗಪ್ಪನವರು ಕಣ್ಣು ಕಣ್ಣುಬಿಟ್ಟರು !

'ಕೊಡು – ಕೊಳ್ಳುವ ಜಗಳದ ಮಾತಿಗೆ ನಾನಂತೂ ಬರುವವಳಲ್ಲ. ನನ್ನ ಮಗನಿಗೆ ಮದುವೆ ಆದರೆ ಸಾಕು. ನೀವು ನೀವು ಏನು ಬೇಕಾದರೂ ಮಾಡಿಕೊಳ್ಳಿ' ಎಂದು ತಟಸ್ಥಳಾಗಿದ್ದುಬಿಟ್ಟಳು ವೆಂಕಮ್ಮ.

'ನೀನೇನೋ ಚಾಪೆ ಕೆಳಗೆ ತೂರಲು ನೋಡುತ್ತೀರಿ ! ನಾನು ರಂಗೋಲೆ ಕೆಳಗೇ ತೂರುತ್ತೇನೆ!!' ಎಂದು ಮನಸ್ಸಿನಲ್ಲಿಯೇ ಅಂದುಕೊಂಡರು ನಾಗಪ್ಪ.

"ನೋಡಿ, ಇದ್ದ ಮಾತು ಇದ್ದಹಾಗೆಯೇ ಹೇಳಿಬಿಡುವ ಸ್ವಭಾವ ನನ್ನದು – ಮುಚ್ಚುಮರೆಯಿಲ್ಲ. ಮೊನ್ನೆ ಮಾಗಡಿಯಿಂದ ಬಂದಿದ್ದ ಮಾಧವಯ್ಯನವರು – ಸಾವಿರದೈನೂರು ರೂಪಾಯಿ ವರದಕ್ಷಿಣೆ ಕೊಟ್ಟು, ಹುಡುಗ ಕೇಳಿದ್ದನ್ನೆಲ್ಲಾ ತೆಗೆದುಕೊಟ್ಟು ಮದುವೆ ಮಾಡುತ್ತೇನೆ ಎಂದರು. ಆದರೆ ಜಾತಕ ಸರಿಹೋಗಲಿಲ್ಲ ಅಂತ ಮದುವೆ ನಿಲ್ಲಿಸಬೇಕಾಯಿತು. ಅದಕ್ಕೂ ಮೊದಲು ಐದಾರು ಜನ

ಹೆಣ್ಣು ಕೊಡುತ್ತೇವೆಂದು ಬಂದಿದ್ದರು. ಈಗೇನವಸರ – ಹುಡುಗನ ವಯಸ್ಸು ಇನ್ನೂ ಚಿಕ್ಕದು ಅಂತ ನಾವೇ ಬಂದವರನ್ನು ವಾಪಸ್ಸು ಕಳುಹಿಸಿ ಬಿಟ್ಟೆವು."

ನಾಗಪ್ಪನವರ ಮಾತು ಎಷ್ಟು ನಿಜ ಎಂಬುದು ವೆಂಕಮ್ಮನಿಗೂ ಶ್ರೀನಿವಾಸನಿಗೂ ತಿಳಿದಿತ್ತು !

ಅವರು ಮಾತು ಮುಂದುವರಿಸಿದರು—

"ಇನ್ನೊಂದು ಹುಡುಗಿ ಮೈಸೂರಿನಿಂದ ಬಂದಿತ್ತು. ಕೈತೊಳೆದು ಮುಟ್ಟಬೇಕು – ಹಾಗಿದ್ದಳು. ತಂದೆ ರಿಟೈರ್ಡ್ ಅಮಲ್ದಾರರು; ಮನೆತುಂಬ ಮಕ್ಕಳು. ನಮಗೂ ಆ ಸಂಬಂಧವೇನೋ ತುಂಬ ಒಪ್ಪಿತ್ತು. ಆದರೆ ವರದಕ್ಷಿಣೆ ವಿಚಾರದಲ್ಲಿ ಅವರು ಸ್ವಲ್ಪ ಹಿಂದು ಮುಂದು ನೋಡಿ, ಬರೀ ಮುನ್ನೂರು ರೂಪಾಯಿನಲ್ಲಿ ಚೌಕಾಸಿ ಮಾಡಿಬಿಟ್ಟು ವಾಪಸ್ಸು ಹೋದರು"

"ಅಂದರೆ ನಾವಿರದಿನ್ನೂರಕ್ಕೂ ನೀವು ಒಪ್ಪಲಿಲ್ಲವೇ ?"

ರಂಗಯ್ಯನವರ ಮಾತು ಆಶ್ಚರ್ಯವನ್ನು ಸೂಚಿಸಿತು

"ಹೇಗೆ ಒಪ್ಪಲಿ ಸ್ವಾಮಿ, ಆಡುವ ಮಾತು ಯಾವಾಗಲೂ ಒಂದೇ ಇರಬೇಕು ಒಬ್ಬರಿಗೊಂದು ಇನ್ನೊಬ್ಬರಿಗೆ ಇನ್ನೊಂದು ಹೇಳಿ ನಾನು ಯಾವ ನರಕಕ್ಕೆ ಹೋಗಲಿ"

"ಹಾಗೆಂದುಬಿಟ್ಟರೆ ಹೇಗೆ ?" ಎಂದಳು ರಾಜಮ್ಮ.

"ಏನೋ ಸ್ವಾಮಿ, ನಾನೂ ಹಾಗೂ-ಹೀಗೂ ಒಂದು ಸಾವಿರ ಅಂತ ಅವಳ ಮದುವೆಗೆ ಮುಡಿಪು ತೆಗೆದಿಟ್ಟಿದ್ದೇನೆ. ಇನ್ನೂ ಅವಳ ತಂದೆ ಚಿಕ್ಕ ವಯಸ್ಸಿನಲ್ಲೇ ನೆಳವುರೋಗ ಬಂದು ಕೆಲಸವಿಲ್ಲದೆ ಮನೆ ಯಲ್ಲೇ ಇದ್ದಾನೆ. ಅವನ ಸಂಸಾರವೆಲ್ಲಾ ನನ್ನ ಕೊರಳಿಗೇ ಬಿದ್ದಿದೆ. ಈ ಹುಡುಗಿಯ ಮದುವೆ ಆಯಿತೆಂದರೆ ಅವಳ ಹಿಂದೆಯೇ ಇನ್ನೂ ನಾಲ್ಕು ನೆರೆದು ನಿಂತಿವೆ. ಅವಕ್ಕೆಲ್ಲಾ ಒಂದೊಂದು ದಾರಿ ಮಾಡ ಬೇಕು....ಮುಖ್ಯ ದೇವರೇ ನನ್ನನ್ನು ಕಾಪಾಡಬೇಕು !"

ಮಾತಿಗೆ ಸೋತಿದ್ದರು ರಂಗಯ್ಯ. ತಮ್ಮ ಬುದ್ಧಿವಂತಿಕೆ ನಾಗಪ್ಪ ನವರ ಮುಂದೆ ಏನೂ ನಡೆಯುವಂತಿಲ್ಲ ಎಂದು ಅವರಿಗೆ ಅರಿವಾಗಿತ್ತು.

ಇಬ್ಬರೂ ಸ್ವಲ್ಪಹೊತ್ತು ಮೌನವಾದರು. ಕೊನೆಗೆ ನಾಗಪ್ಪ

ನವರೇ, "ನಮಗೇನೂ ಹೆಣ್ಣಿಗೆ ಬರವಿಲ್ಲ. ಒಂದು ಗಂಡು ಇದ್ದ ಕಡೆ ಹತ್ತು ಹೆಣ್ಣು ಬರುತ್ತವೆ. ಯಾವುದಕ್ಕೆ ಲಭ್ಯವಿದೆಯೋ ಅದು ನಮ್ಮ ಮನೆಗೆ ಬರುತ್ತದೆ."

"ನಮಗೂ ಬೇಕಾದಷ್ಟು ವರಗಳಿವೆ. ಏನೋ ಅನುಕೂಲ ವಾಗಲಿಲ್ಲ ಅಷ್ಟೆ?"

ಎಂದಳು ರಾಜಮ್ಮ. ಎರಡು ಪಕ್ಷಗಳವರಿಗೂ ತಾವು ಸುಳ್ಳಾಡು ತ್ತಿದ್ದೇವೆಂಬುದರ ಲಕ್ಷ್ಯವೇ ಇದ್ದಂತೆ ಕಾಣಲಿಲ್ಲ. ನೂರು ಸುಳ್ಳು ಹೇಳಿ ಒಂದು ಮದುವೆ ಮಾಡಿಸು ಎಂದು ಗಾದೆಯೇ ಇದೆ ಅಲ್ಲವೆ ?

"ಅನುಕೂಲವಾಗದಿದ್ದುದಕ್ಕೇ, ನಾವೂ ಬಂದ ಹೆಣ್ಣುಗಳ ನ್ನೆಲ್ಲಾ ಬಿಡುತ್ತಿದ್ದೇವೆ"

"ನೀವು ದೊಡ್ಡ ಮನಸ್ಸು ಮಾಡಿದರೆ ನಮ್ಮ ಹುಡುಗಿ ನಿಮ್ಮ ಮನೆ ಸೇರುತ್ತಾಳೆ !"

"ನನಗೂ ಅದೇ ಸಂತೋಷ. ಆದರೆ ನೀವು ಮನಸ್ಸು ಮಾಡ ಬೇಕು ರಂಗಯ್ಯನವರೇ"

"ನಾನೆಷ್ಟರವನು ಸ್ವಾಮಿ–ಬಡವ"

"ಈಗಿನ ಕಾಲದಲ್ಲಿ ಬಡವರು ಯಾರು – ಬಲ್ಲಿದವರು ಯಾರು ? ಎಲ್ಲಾ ಒಂದೇ ! ನೋಡಿ, ನಾನೂ ಕೊನೆ ಮಾತು ಹೇಳಿಬಿಡುತ್ತೇನೆ. ಹುಡುಗನಿಗೆ ಬೇಕಾದ ಬಟ್ಟೆಬರೆ, ಒಂದು ಕೈಗಡಿಯಾರ, ಒಂದು ಬೈಸಿಕಲ್ಲು, ಕೈಗೆ ಸಾವಿರದೈನೂರು ಕೊಟ್ಟುಬಿಡಿ ಲಗ್ನಪತ್ರಿಕೆ ಇವತ್ತೇ ಮಾಡಿಕೊಂಡು ಬಿಡೋಣ"

"ಬಡವನಿಂದ ಅಷ್ಟು ಸಾಧ್ಯವಿಲ್ಲ ಸ್ವಾಮಿ. ಕೈಗೆ ಎಂಟನೂರು ಕೊಡುತ್ತೇವೆ ಗಡಿಯಾರ ಬೈಸಿಕಲ್ಲು ನಿಧಾನವಾಗಿ ನೋಡೋಣ"

"ಅದೆಲ್ಲಾ ಸಾಧ್ಯವಿಲ್ಲ"

"ಹಾಗನ್ನಬಾರದು ಸ್ವಾಮಿ"

"ಇನ್ನೇನು–ಹುಡುಗನಿಗೆ ಉಪ್ಪು ಮೆಣಸಿನಕಾಯಿಗೆ ಕಾಸು ಕೊಡುವ ಹಾಗೆ ಚೌಕಾಸಿ ಮಾಡುತ್ತೀರಿ !"

"ಈಗಲೇ ಬಡವನ ಯೋಗ್ಯತೆ ಮೀರಿ ಹೋಗಿದೆ ನಾಗಪ್ಪ ನವರೇ !"

"ಹೋಗಲಿ, ಗಡಿಯಾರ-ಬೈಸಿಕಲ್ಲು ತೆಗೆದುಕೊಟ್ಟು ಸಾವಿರದ ಇನ್ನೂರು ಕೊಟ್ಟು ಬಿಡಿ"

"ಸಾವಿರ ಕೊಡುತ್ತೇನೆ ಸ್ವಾಮಿ"

"ಮುಖ್ಯ, ನಿಮ್ಮ ಸಂಬಂಧ ಬಿಡಬಾರದೂಂತ ನಾನು ಒಪ್ಪಿಕೊಳ್ಳಬೇಕಾಗಿದೆ"

"ಅಷ್ಟು ಮಾತ್ರ ಅಭಿಮಾನವಿದ್ದರೆ ಸಾಕು ಸ್ವಾಮಿ"

"ಎರಡು ಖರ್ಚೂ ನಿಮ್ಮದೇ. ಕೂರು ಸೀರೆ, ಮಾಂಗಲ್ಯ ಎರಡೂ ನೀವೇ ತರಬೇಕು"

"ಅವೆರಡನ್ನೂ ಗಂಡಿನ ಕಡೆಯುವರೇ ತರಬೇಕಾದುದು ನಾಗಪ್ಪನವರೇ"

"ಈ ನೆಲೆಯಲ್ಲಿ ಅದೆಲ್ಲಾ ಸಾಧ್ಯವಿಲ್ಲ. ವರದಕ್ಷಿಣೆಯಲ್ಲೇ ಕಡಿಮೆ ಮಾಡಿಕೊಂಡಿದ್ದೀರಿ. ಖರ್ಚು ಬೇರೆ ನಮ್ಮ ತಲೆಯ ಮೇಲೆ ಹೇರಿದರೆ ನಾವೇನು ಉಸಿರಾಡಬೇಕೋ ಬೇಡವೋ?"

"ಮಾಂಗಲ್ಯವನ್ನಾದರೂ ನೀವು ತರಬೇಕು"

"ನಾವು ಏನೂ ತರುವುದಿಲ್ಲ ರಂಗಯ್ಯನವರೇ. ಬರೀ ಕೈ ಬೀಸಿಕೊಂಡು ಬರುತ್ತೇವೆ. ಸಾಲಂಕೃತ ಕನ್ಯಾದಾನ ಮಾಡಿ ಕೊಟ್ಟರೆ ಕೊಡಿ-ಇಲ್ಲದಿದ್ದರೆ ಬೇಡವೇ ಬೇಡ"

ಎಂದು ನಿರ್ಧಾರದ ಮಾತನ್ನಾಡಿಬಿಟ್ಟು ಅಲ್ಲಿಂದೆದ್ದರು ನಾಗಪ್ಪ. ಇನ್ನು ಮಾತನಾಡಿ ಪ್ರಯೋಜನವಿಲ್ಲವೆಂದು ರಂಗಯ್ಯನವರು—

"ನಿಮ್ಮ ಇಷ್ಟದ ಹಾಗೆಯೇ ಆಗಲಿ ಸ್ವಾಮಿ" ಎಂದು ಒಪ್ಪಿಕೊಂಡರು.

"ದಿನ ಚೆನ್ನಾಗಿದ್ದರೆ ಇವತ್ತೇ ಲಗ್ನಪತ್ರಿಕೆ ಆಗಿ ಹೋಗಲಿ"

ರಾಜಮ್ಮನ ಮಾತು ಎಲ್ಲರಿಗೂ ಸುಮ್ಮತವಾಗಿಯೇ ಇತ್ತು. ಆದರೆ ನಾಗಪ್ಪನವರಿಗೆ ಮಾತ್ರ ಇಕ್ಕಟ್ಟಿನಲ್ಲಿ ಸಿಕ್ಕಿಕೊಂಡಂತಾಗಿತ್ತು. ಮೊದಲು ಲಗ್ನಪತ್ರಿಕೆ ಮಾಡಿಸಿಕೊಂಡು ಬಿಟ್ಟು, ಆಮೇಲೆ ವರದಕ್ಷಿಣೆಗೆ ಸತಾಯಿಸಿದರೆ ಏನು ಮಾಡುವುದು ಎಂದು ಯೋಚಿಸಿ—

"ಲಗ್ನಪತ್ರಿಕೆ ಹೆಣ್ಣಿನ ಮನೆಯಲ್ಲೇ ಆಗಬೇಕಾದ್ದು ಸಂಪ್ರದಾಯ......" ಎಂದು ತಡೆ ಹಾಕಿದರು.

"ಪದಕ್ಷೀನು ತಾವು ದಯಮಾಡಿಸಿದರೆ ನಮ್ಮ ಮನೆಯಲ್ಲೇ ಮಾಡಿ ಕೊಡುತ್ತೇವೆ."

ರಂಗಯ್ಯನವರು ಅದಕ್ಕೂ ಸಿದ್ಧರಾಗಿದ್ದರು.

"ಮದುವೆಯಲ್ಲಿ ವೃಥಾ ಮನಸ್ತಾಪ ಬರಬಾರದು ಸ್ವಾಮಿ; ಲಗ್ನಪತ್ರಿಕೆಯ ದಿನವೇ ವರದಕ್ಷಿಣೆ ಹಣವನ್ನೆಲ್ಲಾ ಪೂರ್ತಿ ಕೊಟ್ಟು ಬಿಡಬೇಕು ಇಲ್ಲದಿದ್ದರೆ ಆಗುವುದಿಲ್ಲ"

ಎಂದು ತೀರ್ಪು ನುಡಿದು ನಾಗಪ್ಪನವರು ಹೊರ ಅಂಗಳದ ಕಡೆಗೆ ಹೆಜ್ಜೆ ಹಾಕಿದರು.

ಆ ರಾತ್ರಿಯೂ ಸೀತುವಿನದೇ ಅಡಿಗೆ. ಲಗ್ನಪತ್ರಿಕೆ ಬರೆಸು ವವರೆಗೆ ಗಂಡಿನ ಮನೆಯಲ್ಲಿ ಊಟ ಮಾಡಬಾರದೆಂದೂ, ಹಾಗೊಂದು ಪಕ್ಷ ಊಟ ಮಾಡಿದರೆ ಸಂಬಂಧ ತಪ್ಪಿ ಮದುವೆ ನಿಂತು ಹೋಗುವು ದೆಂದೂ ಅನೂಚಾನವಾಗಿ ನಡೆದು ಬಂದ ಪದ್ಧತಿಯನ್ನು ರಂಗಯ್ಯ ನವರು ಪರಿಪಾಲಿಸಿದರು

ಶ್ರೀನಿವಾಸನಿಗೆ ನಾಗರತ್ನಳನ್ನು ಸಂಧಿಸುವ ಅವಕಾಶ ಮತ್ತೆ ಸಿಗಲಿಲ್ಲ. ಕಿಟ್ಟು, ನಾಣಿ, ಶಾಮು, ಸಾವಿತ್ರಿಯರು ನಾಗರತ್ನಳ ಸುತ್ತುಮುತ್ತಲೇ ತಿರುಗಾಡುತ್ತಿದ್ದರು ಶ್ರೀನಿವಾಸ ಒಂದೆರಡು ಬಾರಿ ಅವಳೆಡೆಗೆ ನೋಡಿ ಕಣ್ ಮಿಟುಕಿಸಿದ. ಹುಡುಗಿಯೂ ತನ್ನ ಅಸಹಾಯಕತೆಯನ್ನು ಕಣ್ಣಿನಿಂದಲೇ ಸೂಚಿಸಿದಳು. ಬೇರೆ ಉಪಾಯ ವಿಲ್ಲದೆ ಶ್ರೀನಿವಾಸ, ನಾಗರತ್ನಳೊಡನೆ ಬಂದಿದ್ದ ಅವಳ ಪುಟ್ಟ ತಂಗಿಯನ್ನು ಬಳಿಗೆ ಸೆಳೆದುಕೊಂಡು, ಅವಳೇ ನಾಗರತ್ನಳೆಂದು ಭಾವಿಸಿ, ಮುತ್ತಿಟ್ಟು ಅವಳ ಕೆನ್ನೆಗಳನ್ನು ರಮಿಸಿದ!

ಮರುದಿನ ಗಂಡಿನ ಕಡೆಯವರಾಗಿ ನಾಗಪ್ಪನವರೊಬ್ಬರೇ ರಂಗಯ್ಯನವರ ಪರಿವಾರದೊಡನೆ ಕಪ್ಪುಹಳ್ಳಿಗೆ ಪ್ರಯಾಣ ಮಾಡಿದರು. ಹೊರಡುವ ಮುನ್ನ ವೆಂಕಮ್ಮ—

"ತಿಳಿದವರ ಹತ್ತಿರ ಹುಡುಗಿಯ ವಿಚಾರ, ಬೀಗರ ವಿಚಾರ ಸ್ವಲ್ಪ ಕೇಳಿ ನೋಡಿ" ಎಂದು ಪಿಸು ಮಾತಿನಲ್ಲಿ ಸೂಚಿಸಿದಳು.

'ಯಾರನ್ನು ವಿಚಾರಿಸಿ ಏನಾಗಬೇಕು ದುಡ್ಡು ಕೈಗೆ ಬಂದ ಮೇಲೆ ಬೇಕಾದ್ದು ಆಗಿಹೋಗಲಿ' ಎಂದುಕೊಂಡರು ನಾಗಪ್ಪ.

"ಹುಡುಗನೂ ಬರಲಿ. ಊರು ನೋಡಿದ ಹಾಗಾಗುತ್ತೆ"

ಎಂದು ರಂಗಯ್ಯನವರು ನುಡಿದಾಗ, ಅಂತಹ ಅವಕಾಶವನ್ನೇ ಕಾಯುತ್ತಿದ್ದ ಶ್ರೀನಿವಾಸನಿಗೆ 'ಸ್ವರ್ಗಕ್ಕೆ ಬಾ' ಎಂದು ಆಹ್ವಾನ ಕೊಟ್ಟ ಹಾಗಿತ್ತು. ಅವನು ಹೊರಟು ನಿಂತ. ನಾಗಪ್ಪನವರು ದುರದುರನೆ ಅವನ ಮುಖ ನೋಡಿದರು. ಆದರೆ ಅದರಿಂದೇನೂ ಪ್ರಯೋಜನವಾಗಲಿಲ್ಲ.

ಎಲ್ಲರೂ ಕಪ್ಪು ಹಳ್ಳಿಯನ್ನು ಸೇರಿದರು. ಅಗ್ರಹಾರಕ್ಕಿಂತ ಅತಿ ಚಿಕ್ಕದಾದ ಆ ಊರಿನ ತುಂಬ ಕಂಬಳಿ ನೇಯುವ ಕುರುಬರೇ ಹೆಚ್ಚು. ಅವರನ್ನು ಬಿಟ್ಟರೆ ಮುಸಲ್ಮಾನರಿಗೇ ಎರಡನೆಯ ಸ್ಥಾನ. ಉಳಿದವರಲ್ಲಿ ನಾಲ್ಕಾರು ಮಂದಿ ಒಕ್ಕಲಿಗರು; ರಂಗಯ್ಯನವರ ಜಾತಿಯ ಎರಡು ಮನೆಗಳು ಮಾತ್ರ ಇದ್ದವು ಆ ಎರಡು ಮನೆಗಳವರೂ ದಾಯಾದಿಗಳಾದುದರಿಂದ ಯಾವುದೋ ಕಾಲದಲ್ಲಿ ಆಸ್ತಿಯ ವಿಷಯಕ್ಕೆ ದೊಡ್ಡ ವ್ಯಾಜ್ಯವೇ ನಡೆದು. ಒಬ್ಬರಿಗೊಬ್ಬರಿಗೆ ಮಾತು ನಿಂತುಹೋಗಿತ್ತು. ಆದ್ದರಿಂದ ರಂಗಯ್ಯನವರ ಮನೆಗೆ ಬಂದ ಅತಿಥಿಗಳನ್ನು ಆ ಮನೆಯವರು ಮಾತನಾಡಿಸುವಂತಿರಲಿಲ್ಲ. ಅದರಿಂದ ರಂಗಯ್ಯನವರಿಗೆ ಅನುಕೂಲವೇ ಒದಗಿತ್ತು ಅವರ ಮನೆಯ ಗುಟ್ಟು, ನಾಗರತ್ನಳ ವಿಷಯ ನಾಗಪ್ಪನವರಿಗೆ ತಿಳಿಯುವಂತಿರಲಿಲ್ಲ.

ರಂಗಯ್ಯನವರದ್ದು ಪೂರ್ವಕಾಲದ ಮಾಳಿಗೆ ಮನೆ. ಮೇಲಿನ ಮಣ್ಣು ಚಾವಣಿಗೆ ಊರೆಗೊಟ್ಟಂತೆ ಮನೆಯಲ್ಲೆಲ್ಲಾ ಮರದ ಕಂಬಗಳು ತುಂಬಿದ್ದವು. ಮನೆ ವಿಶಾಲವಾಗಿದ್ದುದರಿಂದ ಐದಾರು ಸಣ್ಣ ಸಣ್ಣ ಕೊಠಡಿಗಳನ್ನು ವಿಂಗಡಿಸಿದ್ದರು. ಹಿತ್ತಲೂ ವಿಶಾಲವಾಗಿದ್ದರಿಂದ ಹೂಗಿಡಗಳು, ಸೀಬೆಯ ಮರ, ದಾಳಿಂಬೆಯಗಿಡ, ಹುರುಳಿ – ಬದನೆಯ ತರಕಾರಿ ಗಿಡಗಳನ್ನು ಬೆಳೆಸಿದ್ದರು ನಾಗಪ್ಪನವರು ಮನೆಯನ್ನೆಲ್ಲಾ ಪರಿಶೀಲಿಸಿ, ಹಿತ್ತಲ ತೋಟವನ್ನೂ ಮೆಚ್ಚಿಕೊಂಡು 'ಒಳ್ಳೆ ಅನುಕೂಲಸ್ಥರ ಮನೆಯೇ' ಎಂದುಕೊಂಡರು.

ತಟ್ಟನೆ ಏನೋ ನೆನಪುಮಾಡಿಕೊಂಡು—

"ಹುಡುಗಿಯ ತಂದೆ ಎಲ್ಲಿ?"

ಎಂದರು ನಾಗಪ್ಪ. ಆ ಪ್ರಶ್ನೆಗೆ ರಂಗಯ್ಯನವರು ತುಂಬ ಅಲಕ್ಷ್ಯ

ವಾಗಿಯೇ ಉತ್ತರಿಸಿದರು.

"ಎಲ್ಲೋ ಹಿಂದಿನ ರೂಮಿನಲ್ಲಿ ಬಿದ್ದಿದ್ದಾನೆ"

ಆ ಮಾತು ನಿಜವೋ ಸುಳ್ಳೋ ಎಂದು ತಿಳಿಯಲು, ಯಾರೂ ಇಲ್ಲದ ಸಮಯದಲ್ಲಿ ನಾಗರತ್ನಳ ತಂದೆಯನ್ನು ನೋಡಲು ಹೋದರು ನಾಗಪ್ಪ.

ಎಲ್ಲಕ್ಕಿಂತ ಹಿಂದಿನ ಕೋಣೆಯಲ್ಲಿ ರಂಗಯ್ಯನವರ ಮಗ ಮಂಚದ ಮೇಲೆ ಮಲಗಿದ್ದ. ಅವನ ಪಕ್ಕದಲ್ಲಿದ್ದ ಚಿಕ್ಕ ಮಾಡಿನಲ್ಲಿ ನೀಲಗಿರಿ ಎಣ್ಣೆಯ ದೊಡ್ಡ ಸೀಸೆ, ಮಾಸ್ತಿ ವೆಂಕಟೇಶಯ್ಯಂಗಾರ್ಯರ ಸಣ್ಣ ಕತೆಗಳ ನಾಲ್ಕಾರು ಪುಸ್ತಕಗಳು ಇದ್ದುವು. ಆತ ಹಾಸಿಗೆ ಬಿಟ್ಟು ಏಳುವಂತೆಯೇ ಇರಲಿಲ್ಲ. ರಕ್ತ ಮಾಂಸಗಳಿಲ್ಲದೆ ಬರಿಯ ಅಸ್ತಿ ಪಂಜರವಾಗಿದ್ದ ಅವನನ್ನು ಆ ಮನೆಯಲ್ಲಿ ಯಾರೂ ಗಮನಿಸುತ್ತಲೂ ಇರಲಿಲ್ಲ ಆ ಉಸಿರಾಡುವ ಮೂಳೆಯ ಹಂದರವನ್ನು ಕಂಡ ನಾಗಪ್ಪ—

"ಇದಕ್ಕಿಂತಲೂ ಬೇರೆ ನರಕವಿದೆಯೇ ದೇವರೇ !"

ಎಂದು ನಿಟ್ಟುಸಿರು ಬಿಟ್ಟರು.

ಶ್ರೀನಿವಾಸನಿಗೂ ನಾಗರತ್ನಳಿಗೂ ಅವಕಾಶ ರಸಪಸ್ನಿವೇಶ ವನ್ನು ಒದಗಿಸಿತ್ತು. ಅವರಿಬ್ಬರೂ ಒಟ್ಟಿಗಿದ್ದುದನ್ನು ಕಂಡು ರಾಜಮ್ಮ ಆಕ್ಷೇಪಿಸಲಿಲ್ಲ ರೂಮಿನಲ್ಲಿ ಒಬ್ಬರನ್ನೊಬ್ಬರು ಗಟ್ಟಿಯಾಗಿ ತಬ್ಬಿ ಕೊಂಡಾಗಲಂತೂ – ಆಕಸ್ಮಿಕವಾಗಿ ನೋಡಿಬಿಟ್ಟ ರಾಜಮ್ಮ 'ಶ್ರೀನಿ ವಾಸ ಇನ್ನೂ ಎಳೆ ಸಂಬೇಕಾಯಿ !' ಎಂದು ಮನಸ್ಸಿನಲ್ಲಿಯೇ ಅಂದು ಕೊಂಡರು.

ರಾತ್ರಿ ಲಗ್ನಪತ್ರಿಕೆಯಾಯಿತು. ಮೂರು ಮೈಲಿ ದೂರವಿದ್ದ ಒಕ್ಕಲೂರಿನಿಂದ ಪುರೋಹಿತರು ಬಂದಿದ್ದರು ರಂಗಯ್ಯ ತಟ್ಟೆಯಲ್ಲಿ ನೋಟಿನ ಕಟ್ಟನ್ನು ಇಟ್ಟು—

"ಈ ಮಂಗಳದ್ರವ್ಯ ಸ್ವೀಕರಿಸಬೇಕು"

ಎನ್ನುತ್ತ ನಾಗಪ್ಪನವರ ಕೈಗಿತ್ತರು. ಕೈಗೆ ತೆಗೆದುಕೊಂಡ ನಾಗಪ್ಪನವರು ಮೊದಲು ನೋಟು ಎಣಿಸಿದರು – ಸಾವಿರಕ್ಕೆ ಐನೂರೇ ಕಡಿಮೆಯಾಗಿತ್ತು !

"ಇದೇನು ರಂಗಯ್ಯನವರೇ ?"

"ಮಿಕ್ಕಿದ್ದು ಮದುವೆದಿನ ಕೊಡುತ್ತೇನೆ"

"ಅದೆಲ್ಲಾ ಆಗುವುದಿಲ್ಲ"

"ಹಾಗನ್ನಬಾರದು ಸ್ವಾಮಿ"

"ಸಾಧ್ಯವಿಲ್ಲ ಒಂದು ಕಾಸು ಕಮ್ಮಿಯಾದರೂ ನಾನು ಮುಟ್ಟುವುದಿಲ್ಲ"

ಪುರೋಹಿತರು ಇಬ್ಬರ ಮುಖವನ್ನೂ ನೋಡಿದರು. ಯಾರು ಸೋಲುವರೋ – ಯಾರು ಗೆಲ್ಲುವರೋ ?

"ನಾವು ಮದುವೆಗೆಲ್ಲಾ ಹೊಂಚಿಕೊಳ್ಳಬೇಕು. ಸ್ವಲ್ಪ ತಡೆದರೆ"

ರಾಜಮ್ಮ ಗಂಡಸರ ಮಾತಿನಲ್ಲಿ ತಲೆಹಾಕಿದಳು.

"ನಮಗೂ ನೂರೆಂಟು ತಾಪತ್ರಯಗಳಿವೆ. ನೀವು ಹೀಗೆ ಮಾಡು ತ್ತೀರಿ ಎಂದು ತಿಳಿದಿದ್ದರೆ ಈ ಜುಜುಬಿ ಸಂಬಂಧವನ್ನು ದೂರವೇ ಇಡುತ್ತಿದ್ದೆ"

ನಾಗಪ್ಪನವರ ಆ ಮಾತು ರಂಗಯ್ಯನವರ ಕರುಳುಮುಟ್ಟಿತು. ಉಪಾಯಗಾಣದೆ ಮಿಕ್ಕ ಐನೂರು ರೂಪಾಯಿಗಳನ್ನು ತಂದು ತಟ್ಟೆ ಯಲ್ಲಿಟ್ಟರು. ನಾಗಪ್ಪನವರ ಮುಖ ಪ್ರಸನ್ನವಾಯಿತು. ಲಗ್ನಪತ್ರಿಕೆ ಬರೆದ ಪುರೋಹಿತರಿಗೂ ರಂಗಯ್ಯನವರ ಮನೆಯಲ್ಲೇ ಚೊಕ್ಕ ಭೋಜನವಾಯಿತು. ಆ ರಾತ್ರಿ ಶ್ರೀನಿವಾಸನೂ – ನಾಗರತ್ನಳೂ ಒಂದೇ ರೂಮಿನಲ್ಲಿ ಮಲಗಿದ್ದುದು ರಾಜಮ್ಮನಿಗೆ ಮಾತ್ರ ತಿಳಿದಿತ್ತು. ಆಕೆಯೂ ಅದಕ್ಕೆ ಬೆಂಬಲಕೊಟ್ಟಿದ್ದಳು.

ಆದರೆ ಆ ರಾತ್ರಿ ನಡೆದ ಸಂಗತಿ ಶ್ರೀನಿವಾಸನಿಗೆ ಸಂದೇಹವನ್ನು ತಂದಿತು—

ಅರ್ಧರಾತ್ರಿಯ ಸುಮಾರಿನಲ್ಲಿ ಕಿಟಕಿಯ ಬಳಿ ಒಂದು ನೆರಳು ಕಾಣಿಸಿತು. ನಾಗರತ್ನಳನ್ನು ಅಪ್ಪಿಕೊಂಡು ಮಲಗಿದ್ದ ಶ್ರೀನಿವಾಸನಿಗೆ ಇನ್ನೂ ನಿದ್ರೆ ಬಂದಿರಲಿಲ್ಲ ಅವನ ಒತ್ತಡವನ್ನು ಹಿತವಾಗಿ ಸಹಿಸುತ್ತಾ ನಾಗರತ್ನಳೂ ಕಣ್ಣುಬಿಟ್ಟುಕೊಂಡೇ ಕಿಟಕಿಯಕಡೆಗೆ ನೋಡು ತ್ತಿದ್ದಳು. ನೆರಳು ಕಾಣಿಸಿದೊಡನೆ ಆಕೆಯ ಹೃದಯ 'ಝಲ್' ಎಂದಿತು. ಆದರೂ ಧೈರ್ಯತಂದುಕೊಂಡು, ಶ್ರೀನಿವಾಸನ ಬಿಗಿತ

ದಿಂದ ಬಿಡಿಸಿಕೊಂಡು ಬೆತ್ತಲೆಯಾಗಿಯೇ ಎದ್ದು ನಿಂತಳು. ಆಗ ಶ್ರೀನಿವಾಸನೂ ಕಿಟಕಿಯ ಕಡೆಗೆ ನೋಡಿದ. ನೆರಳಿನ ಕೈಗಳು ಕರೆಯು ವಂತೆ ಸನ್ನೆಮಾಡಿದವು. ನಾಗರತ್ನಳ ಮುಖವನ್ನು ನೋಡಿದ ಶ್ರೀನಿವಾಸ.

"ಸ್ವಲ್ಪ ಇರಿ, ಬರುತ್ತೇನೆ" ಎನ್ನುತ್ತಾ ನಾಗರತ್ನ ಸೀರೆ ಸುತ್ತಿ ಕೊಂಡು, ಕೊಠಡಿಯ ಬಾಗಿಲು ತೆರೆದು ಹೊರಗೆ ಹೋದಳು. ಶ್ರೀನಿವಾಸ ಕಿಟಕಿಯಬಳಿಗೆ ಬಂದು ಹೊರಗೆ ದೃಷ್ಟಿಬೀರಿದ. ಕಂಬಳಿ ಹೊದ್ದುಕೊಂಡು ಯಾರೋ ನಿಂತಿರುವಂತೆ ಕಾಣಿಸಿತು ಆ ವ್ಯಕ್ತಿ ಗಂಡಸೋ – ಹೆಂಗಸೋಎಂದು ಎರಡು ನಿಮಿಷ ನಿಟ್ಟಿಸಿದ. ಆದರೆ ಆ ಕತ್ತಲೆಯಲ್ಲಿ ಹೇಗೆ ತಿಳಿಯಬೇಕು ?

ನಾಗರತ್ನ ಆ ವ್ಯಕ್ತಿಯ ಬಳಿಗೆ ನಡೆದಳು. ಆಮೇಲೆ ನಡೆದ ಪಿಸುಮಾತು ಶ್ರೀನಿವಾಸನಿಗೆ ಅಸ್ಪಷ್ಟವಾಗಿ ಕೇಳಿಸಿತು—

"ಎಷ್ಟು ಹೊತ್ತೇ ಬರೋದು ?"

ನಾಗರತ್ನ ಆ ವ್ಯಕ್ತಿಯ ಬಾಯಿಗೆ ಕೈ ಮುಚ್ಚಿದುದನ್ನೂ ಶ್ರೀನಿವಾಸ ನೋಡಿದ. ಜಲಬಾಧೆಗೆ ಹೋಗುವ ನೆಪದಲ್ಲಿ ಹೊರಗೆ ಹೋಗಿ ಆ ವ್ಯಕ್ತಿಯನ್ನು ಸರಿಯಾಗಿ ನೋಡಿಕೊಂಡು ಬರಬೇಕೆಂದು ಶ್ರೀನಿವಾಸನಿಗನ್ನಿಸಿತು. ಪರಸ್ಥಳ, ಕತ್ತಲೆ ಹೊತ್ತು, ಎಲ್ಲಿ ಏನು ಕಾದಿದೆಯೋ ಎಂದುಕೊಂಡು ಹಾಗೆಯೇ ಹಾಸಿಗೆಯಮೇಲೆ ಉರುಳಿ ಕೊಂಡ.

ಐದು ನಿಮಿಷಗಳ ನಂತರ ನಾಗರತ್ನ ಹೊರಟುಬಂದಳು. ಮೊದಲಿನಂತೆಯೇ ಶ್ರೀನಿವಾಸನ ಪಕ್ಕದಲ್ಲಿ ಮಲಗಿದಳು. ಶ್ರೀನಿವಾಸ ಅವಳಕಡೆಗೆ ತಿರುಗಿ, ಅವಳ ಬೆನ್ನಿನ ಮೇಲೆ ಕೈಯಾಡಿಸಿ—

"ಯಾರೇ ಅದು ?"

"ಎಲ್ಲಿ ?"

"ಅದೇ ಈಗ ನೀನು ಮಾತನಾಡುತ್ತಿದ್ದೆಯಲ್ಲಾ ಅವರು ?"

"ಅಮ್ಮ"

"ನಿಮ್ಮಮ್ಮನೇ ?"

"ಹ್ಞ"

"ಯಾಕಂತೆ ?"

ನಾಗರತ್ನ ಆ ಪ್ರಶ್ನೆಗೆ ಉತ್ತರಿಸಲಿಲ್ಲ.

"ಎಷ್ಟು ಹೊತ್ತೇ ಅಂತ ಕೇಳಿದಹಾಗಿತ್ತು !"

"ಹ್ಞಾ, ಇಲ್ಲೇ ಎಷ್ಟು ಹೊತ್ತು ಮಲಗಿರುತ್ತೀಯಾ ? ಎದ್ದು ಬಾ ಅಂದರು"

ಶ್ರೀನಿವಾಸನ ಸಂದೇಹ ಪರಿಹಾರವಾಯಿತು. ಹುಡುಗಿಯ ವಿಷಯದಲ್ಲಿ ಏನೇನೋ ತಪ್ಪು ತಿಳಿದುಕೊಂಡುಬಿಟ್ಟಿದ್ದೆನಲ್ಲಾ ಎಂದುಕೊಂಡ

"ಹಾಗಾದರೆ, ಈಗಲೇ ಇಲ್ಲಿಂದ ಹೊರಟು ಹೋಗುತ್ತೀಯಾ ನಾಗರತ್ನ ?"

"ನನ್ನ ರಾಜನನ್ನು ಬಿಟ್ಟು ಹೋಗುತ್ತೇನೆಯೇ ?"

ಮುಖಕ್ಕೆ ಮುಖವಿಟ್ಟು ನುಡಿದಳು ನಾಗರತ್ನ. ಆ ಸವಿಮಾತು ಕೇಳಿ ಸಂತೋಷಪಟ್ಟ ಶ್ರೀನಿವಾಸ ಅವಳನ್ನು ಇನ್ನಷ್ಟು ಬಿಗಿಯಾಗಿ ಬಂಧಿಸಿದ

"ಮದುವೆಯಾಗುವ ಮೊದಲೇ ನಾವಿಬ್ಬರೂ ಹೀಗಿರುವುದನ್ನು ನಿಮ್ಮ ತಾತನೋ–ನಮ್ಮ ತಂದೆಯೋ ನೋಡಿಬಿಟ್ಟರೆ....?"

"ಅವರೆಲ್ಲಿ ನೋಡುತ್ತಾರೆ; ನಾನು ಬೆಳಗಿನ ಝಾವದಲ್ಲೇ ಎದ್ದು ಹೋಗಿ, ಅಂಗಳದಲ್ಲಿ ಮಲಗಿ ಬಿಡುತ್ತೇನೆ."

ಹಾಗೆಯೇ ಮಾಡಿದಳು ನಾಗರತ್ನ.

ರಾಜಮ್ಮ ಬೇಗನೆ ಎದ್ದು ಉಪ್ಪಿಟ್ಟು–ಕಾಫಿ ಸಿದ್ಧಮಾಡಿದಳು. ಉಪಹಾರದ ನಂತರ ನಾಗಪ್ಪನವರೂ ಶ್ರೀನಿವಾಸನೂ ಹೊರಟು ನಿಂತರು.

"ಕೈಗಡಿಯಾರ, ಬೈಸಿಕಲ್ಲು ಯಾವಾಗ ತೆಗೆಸಿಕೊಡುತ್ತೀರಿ ಸ್ವಾಮಿ ?"

"ಮದುವೆ ಆಗಲಿ ನಾಗಪ್ಪನವರೇ; ಆಮೇಲೆ ನೋಡೋಣ"

ಗಡಿಯಾರ ಮಾತ್ರ ಮದುವೆಯಲ್ಲಿ ಕೊಟ್ಟುಬಿಡಿ. ಬೈಸಿಕಲ್ಲು ಪ್ರಸ್ಥದ ವೇಳೆಗೆ ತೆಗೆದುಕೊಡಿ, ಪರವಾಗಿಲ್ಲ"

"ಆಗಲಿ ನೋಡೋಣ" ಎಂದರು ರಂಗಯ್ಯ.

ನಾಗಪ್ಪನವರು ಹೊಸಲು ದಾಟಿದರು. ಶ್ರೀನಿವಾಸ ಹಿಂದು ಹಿಂದಕ್ಕೆ ತಿರುಗಿ ನೋಡುತ್ತಾ, ನಾಗರತ್ನಳನ್ನು ಕಣ್ಣು ತುಂಬ ತುಂಬಿ ಕೊಂಡು ತಂದೆಯನ್ನು ಹಿಂಬಾಲಿಸಿದ.

ನೋಟಿನ ಕಟ್ಟುಗಳು ಭದ್ರವಾಗಿದೆಯೋ ಇಲ್ಲವೋ ಎಂದು ಜೇಬು ಮುಟ್ಟಿಕೊಳ್ಳುತ್ತಾ ನಾಗಪ್ಪನವರು ಭಗವಾನ್ ಬಸ್ಸು ಹತ್ತಿದರು.

೩

"ಅತ್ತೆ ಶೀನಣ್ಣನಿಗೆ ಮದುವೇನಂತೆ!"

ಆಗತಾನೆ ಅಂಚೆಯಲ್ಲಿ ಬಂದ ಲಗ್ನಪತ್ರಿಕೆಯನ್ನೂ, ಕಾಗದ ವನ್ನೂ ಓದಿಕೊಂಡ ಸುಂದರು ಅಡಿಗೆ ಕೋಣೆಯ ಕಡೆಗೆ ಬರುತ್ತಾ ಹೇಳಿದ

"ಯಾವಾಗ ಸುಂದರು? ಹೆಣ್ಣು ಯಾವುದು? ಮದುವೆ ಎಲ್ಲಿ?"

ಸುಂದರು ಲಗ್ನ ಪತ್ರಿಕೆಯನ್ನೇ ಪದ್ಮಮ್ಮನ ಕೈಗಿತ್ತ ಅದನ್ನು ಓದಿಕೊಂಡ ಆಕೆ—

"ಓಹೋ ಕಪ್ಪುಹಳ್ಳಿ ಹೆಣ್ಣೋ! ಸರಿಹೋಯಿತು–ಕಂತೆಗೆ ತಕ್ಕ ಬೊಂತೆ!!"

"ಯಾಕತ್ತೆ ಹಾಗಂತಿ? ನಿನಗೆ ಗೊತ್ತೇ ಅವರು?"

"ಗೊತ್ತಿಲ್ಲದೆ ಏನು–ಚೆನ್ನಾಗಿ ಗೊತ್ತು. ನಮ್ಮ ತಂದೆಗೆ ಈ ರಂಗಯ್ಯ ದೂರದ ಸಂಬಂಧ"

"ಹಾಗಾದರೆ ನೀನು ಆ ಹುಡುಗಿಯನ್ನು ನೋಡಿದ್ದೀಯಾ?"

"ನೋಡಿಯೂ ಇದ್ದೀನಿ; ಹುಡುಗಿಯ ಪುಟ್ಟ ಪೂರ್ವೋತ್ತರವೆಲ್ಲ ಕೇಳಿಯೂ ಇದ್ದೀನಿ. ಅದಕ್ಕೂ ಅವರಮ್ಮನ ಚಾಲೇ!"

"ಅಂದರೆ ಕಪ್ಪುಹಳ್ಳಿ ಹುಡುಗಿ ಕಪ್ಪು ಅಂತಲೇ ಅತ್ತೆ?"

"ಬಣ್ಣ ಕಪ್ಪಾದರೆ ಒಂದು ಸಮಯ ಒಪ್ಪಿಕೊಳ್ಳಬಹುದಪ್ಪಾ. ಆದರೆ ಆ ಹುಡುಗಿಯ ಗುಣವೇ ಕಪ್ಪಲ್ಲ! ನಿಮ್ಮ ತಂದೆಗೆ ಇದಕ್ಕಿಂತ

ಒಳ್ಳೆಯ ಸಂಬಂಧ ಯಾವುದೂ ಸಿಕ್ಕಲಿಲ್ವೇ ?"

"ಹಾಗಾದರೆ ಹುಡುಗಿ ತುಂಬ ಕೆಟ್ಟವಳು ಅಂತೀಯಾ ?"

"ಅಯ್ಯೋ, ಅದ್ಯಾಕೆ ಕೇಳ್ತಿ. ಆ ಸಂಸಾರದ ಕಥೇನೇ ತುಂಬ ವಿಚಿತ್ರ ಸುಂದರು."

"ಅದೇನು ಹೇಳತ್ತೆ."

"ನಮ್ಮ ಜಾತಿ ಜನಗಳಿಗೆಲ್ಲಾ ಆ ಕತೆ ಗೊತ್ತಿದೆ. ಆ ಮನೆಯವರ್ನ ಯಾರು ಆದರಿಸುತ್ತಾರೆ ಅಂತ ತಿಳಿದುಕೊಂಡಿದ್ದೀ ? ನಿಮ್ಮ ತಂದೆಗೆ ಗೊತ್ತಿದ್ದು ಗೊತ್ತಿದ್ದು ಆ ಸಂಬಂಧ ಬೆಳಸಿದರಲ್ಲ !"

"ಶೀನಣ್ಣನಿಗೂ ವಯಸ್ಸಾಯಿತು. ಅವಧಾನಿಗಳು ಬಂದು ಹೋದ ಮೇಲೆ, ಹೆಣ್ಣು ಕೊಡುತ್ತೀನಿ ಅಂತ ಬೇರೆ ಯಾರೂ ಬರಲಿಲ್ಲವೆಂದು ಅಮ್ಮ ತುಂಬ ಪೇಚಾಡುತ್ತಿದ್ದಳು. ಕೊನೆಗೆ ಇವರು ಬಂದರೂಂತ ಕಾಣುತ್ತ. ಬಂದ ಸಂಬಂಧ ಕಳಕೋಬಾರದೂಂತ ಒಪ್ಪಿಕೊಂಡಿರಬಹುದು "

"ಹುಡುಗನಿಗೂ ಹೆಣ್ಣಿರಲಿಲ್ಲ; ಹುಡುಗಿಗೂ ಗಂಡು ಇರಲಿಲ್ಲ. ನಾಯಿ ಹಸಿದಿತ್ತು – ಹಿಟ್ಟೂ ಹಳಸಿತ್ತು. ಹಳಸಿತ್ತೇನು – ಪೂರ್ತಿ ಕೆಟ್ಟೇ ಹೋಗಿತ್ತು. ಆದರೆ ಹಸಿದ ನಾಯಿ ಬಿಡುತ್ಯೇ ?"

"ಇದೇನು ಅತ್ತೆ, ನಿಮ್ಮ ಮಾತು ಒಗಟು ಇದ್ದಹಾಗೆ ಇದೆಯಲ್ಲಾ !"

"ಹೌದು ಸುಂದರು ಅದೆಲ್ಲಾ ಬಿಡಿಸಿ ಬಿಡಿಸಿ ಹೇಳುವಂಥ ಮಾತೇ? ನಿಮ್ಮಣ್ಣನ ವಿಚಾರ ನಿನಗೇ ಗೊತ್ತು. ಅವನ ಗುಣ, ನಡತೆ ಎಂಥಾದ್ದು ಅಂತ ಎಲ್ಲಾ ಕಡೆಯೂ ಡಂಗುರವಾಗಿ ಹೋಗಿದೆ. ಹಾಗೇನೇ ಹುಡುಗಿ ವಿಚಾರವೂ...."

"ಹುಡುಗಿ ವಿಚಾರ ಏನು ಹೇಳು ಅತ್ತೆ ?"

"ಹುಡುಗಿ ವಿಚಾರ ಅಂದರೆ, ಅವರ ಮನೇ ವಿಚಾರವೇ ಹೇಳಬೇಕು ಸುಂದರು. ಆ ರಂಗಯ್ಯ ಇದ್ದಾರಲ್ಲ – ಅವರಿಗೆ ಇಬ್ಬರು ಗಂಡು ಮಕ್ಕಳು. ಮೊದಲನೆಯವನಿಗೆ ಸೆಳವುರೋಗ. ಒಂದೊಂದು ಸಾರಿ ಸೆಳವು ಬಂದಾಗಲೂ, ಅವನನ್ನು ನೋಡುವವರಿಗೆ 'ಯಾಕೆ ಬದುಕಿದ್ದಾನಪ್ಪ ?' ಅಂತ ಅನ್ನಿಸಿಬಿಡುತ್ತೆ. ಅವನ ದುರದೃಷ್ಟಕ್ಕೆ

ಅವನ ಮದುವೆ ಆದಮೇಲೆ ಬಂತು ಆ ರೋಗ. ಆ ಮಹರಾಯಿತಿ ರಾಜಮ್ಮ ಯಾವಾಗ ಅವನ ಕೈ ಹಿಡಿದಳೋ – ಅವಳ ಪುಣ್ಯಕ್ಕೆ ಗಂಡ ಪೂರ್ತಿ ಹಾಸಿಗೆ ಹಿಡಿದುಬಿಟ್ಟ. ಅನ್ನ ಸೇರದು – ನೀರು ಸೇರದು ಅಂತ ಜೀವ ಇಟ್ಟುಕೊಂಡು ಅಸ್ಥಿಪಂಜರವಾಗಿದ್ದಾನೆ ಅವನು. ಗಂಡನ ಮನೇಲ್ಲಿ ಸುಖ ಪಡೋದಿಕ್ಕೆ ಬಂದ ಹುಡುಗೀನ ಮಾವನೇ ನೋಡಿ ಕೊಂಡ. ರಾಜಮ್ಮನೂ ಅಂಥ ಚಾಲಿನವಳೇ. ಮಾವನೂ ಸೊಸೆಯೂ ಗಂಡ ಹೆಂಡತಿಯರಾದರು. ರಾಜಮ್ಮನಿಗೆ ಒಂದರ ಹಿಂದೊಂದು ಮಕ್ಕಳಾದವು. ಎಲ್ಲಾ ಹೆಣ್ಣುಮಕ್ಕಳೇ. ಮೊದಲನೆಯವಳೇ ಈ ನಾಗರತ್ನ. ಹೆಸರಿಗೆ ತಾತನಾದರೂ ರಂಗಯ್ಯನೇ ಆ ಹುಡುಗಿಯ ತಂದೆ !"

"ಅಬ್ಬಾ ಅಬ್ಬ ! ಎಂಥ ಜನ–ಮಾನ ಮರ್‍ಯಾದೆ ಇಲ್ಲದೋರು !"

"ಅಷ್ಟೇ ಆದರೆ ಏನೋ ಅನ್ನಬಹುದು. ಆ ಹುಡುಗಿಗೂ ಅವರಮ್ಮನ ಚಾಲೇ ! ಈಗಾಗಲೇ ಎರಡುಸಾರಿ ಬಸಿರು ಬಂದು ಇಳಿಸಿ ಕೊಂಡಳಂತೆ !! ಇನ್ನು ಅಂಥ ಹುಡುಗೀನ ಯಾರು ಮದುವೆ ಯಾಗ್ತಾರೆ ಹೇಳು ?"

"ಅಪ್ಪ ಒಳ್ಳೆ ಸಂಬಂಧಾನೇ ಹುಡುಕಿದ್ದಾರೆ ಅತ್ತೆ ! ಇದಕ್ಕೆ ಅಮ್ಮ ಹೇಗೆ ಒಪ್ಪಿದರೋ ನಾಕಾಣೆ"

"ಅಮ್ಮ ಏನು ಮಾಡ್ತಾಳಪ್ಪ – ಹೆಂಗಸು. ಎಲ್ಲಾ ನಿಮ್ಮ ತಂದೆಯೇ ಮಾಡಿರಬೇಕು"

"ಹೌದತ್ತೆ. ಎಲ್ಲಾ ಅಪ್ಪನೇ ಮಾಡಿರಬೇಕು."

"ಸದ್ಯ ಈ ವಿಷಯವೆಲ್ಲಾ ನಿಮ್ಮ ತಾಯಿ ಕಿವಿಗೆ ಹಾಕಬೇಡಪ್ಪ. ತುಂಬ ನೊಂದುಕೊಳ್ಳುತ್ತಾರೆ"

"ನಾನೇಕೆ ಹೇಳಲಿ ಅತ್ತೆ. ಅಂತೂ ಶೀನಣ್ಣನ ಹಣೆಯಲ್ಲಿ ಮದುವೆ ಅನ್ನೋದು ಬರೆದಿತ್ತು."

"ಅದೂ ಒಳ್ಳೆಯದಕ್ಕೇ ಆಯಿತು. ಅವನಿಗಾಗದಿದ್ದರೆ ನಿನಗೆ ಮಾಡುವುದು ಹೇಗೆ ?"

ಪದ್ಮಮ್ಮನ ಮಾತು ಕೇಳಿ, ನಾಚಿಕೆಪಟ್ಟವನಂತೆ ನಕ್ಕ ಸುಂದರು.

"ರತ್ನಾಗೂ ವಯಸ್ಸಾಯಿತು. ನಿಮ್ಮ ಮಾವ ಇದ್ದಾಗಲೇ

ಅವಳಿಗೆ ನೀನೇ ಗಂಡನೆಂದು ಹೆಸರಿಟ್ಟಿದ್ದರು. ಭಗವಂತನ ದಯೆಯಿಂದ ನಿಮ್ಮಿಬ್ಬರ ಮದುವೆ ಬೇಗನೆ ಆಗಿಬಿಟ್ಟರೆ ನನಗೆ ನಿಶ್ಚಿಂತೆ."

"ಅದೇನು ಆಗುತ್ತದೆ ಬಿಡತ್ತೆ – ಯಾಕೆ ಯೋಚನೆ ?"

ಸುಂದರುವಿನ ಮಾತು ಕೇಳಿ ಪದ್ಮಮ್ಮ ತೃಪ್ತಿಯ ನಿಟ್ಟುಸಿರಿಟ್ಟಳು.

ಗೋಡೆಯ ಗಡಿಯಾರ ಹನ್ನೆರಡು ಬಾರಿಸಿತು.

"ಅತ್ತೆ, ರತ್ನ ಎಲ್ಲಿಗೆ ಹೋದಳು ?"

"ಆಚೆಮನೆ ಸ್ವರ್ಣ ಬಂದಿದ್ದಳು. ಅವಳ ಜೊತೆಯಲ್ಲಿ ಹೋಗಿರಬೇಕು"

"ಆ ಸ್ವರ್ಣ ಪದೇ ಪದೇ ಏಕೆ ಬರ್ತಾಳೋ ಇಲ್ಲಿಗೆ"

"ಏಕೆ ಸುಂದರು ಅವಳನ್ನು ಕಂಡರೆ ಅಷ್ಟು ಬೇಜಾರು ಪಡುತ್ತಿ ?"

"ಹೌದತ್ತೆ. ಅವಳನ್ನು ಕಂಡರೆ ನನಗೆ ಬೇಜಾರು ಬರುವುದು ಹಾಗಿರಲಿ–ತಲೆನೋವೇ ಬರುತ್ತೆ"

"ಸ್ವರ್ಣ ತುಂಬ ಒಳ್ಳೆ ಹುಡುಗಿ. ಅವಳೇನು ಮಾಡಿದಳಪ್ಪ ನಿನಗೆ ?"

ಆ ಪ್ರಶ್ನೆಗೆ ಉತ್ತರಿಸದೆ ತನ್ನ ಕೊಠಡಿಗೆ ಬಂದುಬಿಟ್ಟ ಸುಂದರು. ಅವನ ಕಿವಿಯಲ್ಲಿ ಪದ್ಮಮ್ಮನ ಮಾತು ಮತ್ತೆ ಮತ್ತೆ ಪ್ರತಿಧ್ವನಿಸಿತು.

'ಸ್ವರ್ಣ ತುಂಬ ಒಳ್ಳೆಯ ಹುಡುಗಿ.. ...'

ಅವಳು ಒಳ್ಳೆಯವಳೋ ಕೆಟ್ಟವಳೋ ಎಂಬುದು ಅತ್ತೆಗೆ ಏನು ಗೊತ್ತು ? ನಗುನಗುತ್ತಾ ನಯವಾಗಿ ಮಾತನಾಡುವುದನ್ನು ಕಂಡು ಆಕೆ ಒಳ್ಳೆಯ ಹುಡುಗಿ ಎಂದು ತಿಳಿದುಕೊಂಡಿರಬೇಕು ಅವರು– ಎಂದುಕೊಂಡ ಸುಂದರು. ಅವನ ಮನಸ್ಸಿನಲ್ಲಿ ಸ್ವರ್ಣಳ ಚಿತ್ರ ನಾಟ್ಯವಾಡುತ್ತಿತ್ತು. ಅದರೊಂದಿಗೇ ಅತ್ತೆ ಆಡಿದ ತನ್ನ – ರತ್ನಳ ಮದುವೆಯ ಮಾತೂ ಆ ನಾಟ್ಯವನ್ನು ಮೀಟುವ ಸಂಗೀತದಂತೆ ಇಂಪಾಗಿ ಪ್ರತಿಧ್ವನಿಸುತ್ತಿತ್ತು.

ಸ್ವರ್ಣ ಒಳ್ಳೆಯ ಹುಡುಗಿ !

ತನ್ನ ಮತ್ತು ರತ್ನಳ ಮದುವೆ !!

ಇವೆರಡರಲ್ಲಿ ಯಾವುದು ಸುಳ್ಳು–ಯಾವುದು ನಿಜ ?

ರತ್ನ ಒಳ್ಳೆಯ ಹುಡುಗಿ... ....

ತನ್ನ ಮತ್ತು ಸ್ವರ್ಣಳ ಮದುವೆ........

ಹಾಗೂ ಆಗಬಹುದು ಎಂದಿತು ಅವನ ಮನಸ್ಸು

'ಅದು ಹೇಗೆ ಸಾಧ್ಯ ?' ಅದೇ ಮನಸ್ಸು ಇನ್ನೊಂದು ದೃಷ್ಟಿ ಕೋನದಲ್ಲಿ ನಿಂತು ಪ್ರಶ್ನಿಸಿತು

'ಖಂಡಿತವಾಗಿಯೂ ಸಾಧ್ಯವಿದೆ. ಆದಿನ ನೀನೂ ಅವಳೂ ಇಂಪೀರಿಯಲ್ ಚಿತ್ರಮಂದಿರದಲ್ಲಿ ಸಂಧಿಸಿದ ದಿನವನ್ನು ಮರೆತೆಯೇನು?'

ಸುಂದರುವಿನ ಮೈ ಪುಳಕಗೊಂಡಿತು

ಹೌದು, ಆ ದಿನವನ್ನು ತಾನು ಮರೆಯುವುದು ಹೇಗೆ ? ಕಾಲೇಜು ಮುಗಿದೊಡನೆ ನೇರವಾಗಿ ಮನೆಗೆ ಹೋಗದೆ, ಬಸ್ಸು ಹತ್ತಿ ಕಂಟೋನ್ಮೆಂಟಿಗೆ ಬಂದಿದ್ದ ಸುಂದರು. 'ಡಾಲರ್ ಪ್ರಿನ್ಸೆಸ್' ಚಿತ್ರ ತುಂಬ ಚೆನ್ನಾಗಿದೆಯೆಂದು ಅವನ ಗೆಳೆಯರನೇಕರು ಹೇಳಿದ್ದರಿಂದ, ಆ ಚಿತ್ರವನ್ನು ನೋಡಿಯೇ ಬರಬೇಕೆಂದು ನಿಶ್ಚಯಿಸಿ ನ್ಯೂ-ಇಂಪೀರಿಯಲ್ ಚಿತ್ರಮಂದಿರದ ಬಳಿಗೆ ಬಂದಿದ್ದ ಆದರೆ ಅಲ್ಲಿ ಜನ ತುಂಬಿಹೋಗಿದ್ದರಿಂದ ಟಿಕೀಟು ಸಿಕ್ಕದೆ ನಿರಾಶನಾಗಬೇಕಾಯಿತು. 'ಅನ್ಯಾಯವಾಗಿ ಅಷ್ಟು ದೂರದಿಂದ ಬಂದು ವಾಪಸ್ಸು ಹೋಗಬೇಕಾಯಿತಲ್ಲಾ, ಇನ್ನು ಎಂಟಾಣೆ ಹೆಚ್ಚಾಗಿದ್ದರೆ ಬಾಕ್ಸ್ ಟಿಕೆಟ್ಟೇ ಕೊಳ್ಳಬಹುದಾಗಿತ್ತು....' ಎಂದು ಪೇಚಾಡುತ್ತಾ ಟಾಕೀಸಿನ ಆವರಣದಿಂದ ಹೊರ ಬರುವಷ್ಟರಲ್ಲಿ ಹೊಸ ಮಾಡಲ್ ಬ್ಯೂಕ್ ಕಾರು ಬಂದು ನಿಂತಿತು.

'ಇದು ಸ್ವರ್ಣಳ ಮನೆಯ ಕಾರು ಇದ್ದ ಹಾಗೆ ಇದೆಯಲ್ಲಾ' ಎಂದು ಕುತೂಹಲದಿಂದ ನೋಡುವಷ್ಟರಲ್ಲಿ, ಸ್ವರ್ಣಳೇ ಕೆಳಗಿಳಿದು 'ಹಲ್ಲೋ' ಎನ್ನುತ್ತಾ ಸುಂದರುವಿನ ಬಳಿಗೆ ಬಂದು ನಿಂತಳು. ಅವಳ ಸ್ವಭಾವವೇ ಹಾಗೆ; ಎಲ್ಲರನ್ನೂ ಸಲಿಗೆಯಿಂದ ಮಾತನಾಡಿಸುವುದು–ಎಂದು ಸುಂದರುವಿಗೆ ತಿಳಿದಿತ್ತು. ಆದ್ದರಿಂದಲೇ, ಆಗ ಆಕೆ ಮಾತನಾಡಿಸಿದಾಗ ಆಶ್ಚರ್ಯವೆನಿಸಲಿಲ್ಲ.

"ಏಕೆ ವಾಪಸ್ಸು ಬರುತ್ತಿದ್ದೀರಿ ಸುಂದರು?"

ಸಾಣೆ ಕಲ್ಲಿಗಿಂತ ನುಣುಪಾಗಿತ್ತು ಆ ಮಾತು. ಆ ಧ್ವನಿಯೂ

ಅಷ್ಟೇ ಇಂಪು. ಅದರೊಡನೆ ಬೆರೆತ ಮುಗುಳ್ನಗೆಯೂ ಅಷ್ಟೇ ಆಕರ್ಷಕ. ಎಂತಲೇ ಸುಂದರುವಿಗೆ ಅವಳನ್ನು ಕಂಡರೆ ಸಂತೋಷ ವಾಗುತ್ತಿತ್ತು. ತಾನಿದ್ದ ಮನೆಯ ಎರಡು ಮನೆಯಾಚೆ ಆಕೆಯ ಮನೆ. ರತ್ನಳ ಜೊತೆಗಾತಿಯಾದರೂ ವಯಸ್ಸಿನಲ್ಲಿ ಅವಳಿಗಿಂತ ನಾಲ್ಕು ವರ್ಷವೇ ದೊಡ್ಡವಳು. ಅವಳೂ ಕಾಲೇಜಿಗೆ ಹೋಗು ತ್ತಿದ್ದುದರಿಂದ ಸುಂದರುವಿನೊಡನೆಯೂ ಪರಿಚಯ ಬೆಳೆದಿತ್ತು. ಆಗಾಗ ಮನೆಗೆ ಬರುತ್ತಿದ್ದುದರಿಂದ ಪರಿಚಯ ಸಲಿಗೆಯಾಗಿ, ಅವಳು ಅವನೊಡನೆ ನಿಸ್ಸಂಕೋಚವಾಗಿ ಹರಟೆ ಹೊಡೆಯುತ್ತ ಕುಳಿತು ಬಿಡುತ್ತಿದ್ದಳು. ಪದ್ಮಮ್ಮನಾಗಲಿ ರತ್ನಳಾಗಲಿ ಅವರನ್ನು ಆಕ್ಷೇಪಿಸು ತ್ತಿರಲಿಲ್ಲ; ಬದಲು ತಾವೂ ಆ ಹರಟೆಯಲ್ಲಿ ಭಾಗವಹಿಸುತ್ತಿದ್ದರು. ಎಂಥ ಸಮಯದಲ್ಲಿಯಾದರೂ – ಎಷ್ಟೇ ಬೈದರೂ ಕೋಪ ಮಾಡಿ ಕೊಳ್ಳದೆ, ಮಾತು ಮಾತಿಗೆ ನಕ್ಕು ನಲಿಸುತ್ತಾ ಎಂಥವರನ್ನಾದರೂ ಆ ಮಾತಿನಲ್ಲಿಯೇ ಸೋಲಿಸಿ ಬಿಡುವ ಹುಡುಗಿ ಸ್ವರ್ಣ.

ಆಗಲೂ ಹಾಗೆಯೇ ನಗುತ್ತ ಮಾತನಾಡಿಸಿದ್ದಳು. .....

"ಏಕೆ ವಾಪಸ್ಸು ಬರುತ್ತಿದ್ದೀರಿ ಸುಂದರು ?"

"ತುಂಬ ಗಲಾಟೆ...."

"ಗಲಾಟೆ ಆದರೇನು, 'ಡಾಲರ್ ಪ್ರಿನ್ಸೆಸ್' ತೆರೆಯ ಮೇಲೆ ಬರಲು ಹೆದರುತ್ತಾಳೆಯೇ ?"

"ಅದಲ್ಲ ಸ್ವರ್ಣ. ಟಿಕೆಟ್ ಸಿಕ್ಕೋಹಾಗಿಲ್ಲ, ವೃಥಾ ಏಕೆ ಕಾದು ನಿಂತಿರಬೇಕು ?"

"ಯಾರಿಗೆ ಯಾರು ಕಾಯಬೇಕು ಸುಂದರು ನಾನೇನೋ ನಿಮಗೆ ಕಾಯುತ್ತಿದ್ದೇನೆ"

ಎನ್ನುತ್ತಾ ಅವನ ಕೈ ಹಿಡಿದು, ಚಿತ್ರಮಂದಿರದ ಕಡೆಗೆ ನಡೆ ದಳು. ಬಾಕ್ಸ್ ತರಗತಿಯ ಎರಡು ಟಿಕೆಟ್ಟುಗಳನ್ನು ತಾನೇ ಕೊಂಡಳು. ಇಬ್ಬರೂ ಒಳಕ್ಕೆ ಹೋಗಿ ಕುಳಿತುಕೊಳ್ಳುವಷ್ಟರಲ್ಲಿ ದೀಪಗಳು ಆರಿ, ಜಾಹೀರಾತುಗಳ ಮಾಲೆ ತೆರೆಯ ಮೇಲೆ ಸುಳಿಯಿತು.

"ಸುಂದರು, ಈ ವರ್ಷ ಎಂ. ಎಸ್ಸಿ ಆದಮೇಲೆ ಏನು ಮಾಡ ಬೇಕೆಂದಿದ್ದೀರಿ ?"

"ಏನು ಮಾಡಬೇಕೋ ನಾನಂತೂ ಯೋಚಿಸಿಲ್ಲ. ಅದಕ್ಕೂ ಮೊದಲು ಪರೀಕ್ಷೇಲಿ ಪಾಸಾಗಬೇಕಲ್ಲ!"

"ಬಿ.ಎಸ್ಸೀನೇ ಫಸ್ಟ್ ಕ್ಲಾಸು. ಇನ್ನು ಎಂ ಎಸ್ಸೀ ಬಿಡ್ತೀರಾ? ರ್‍ಯಾಂಕೇ ಹೊಡೀತೀರೋ ಏನೋ!"

"ಇಲ್ಲ ಸ್ವರ್ಣ. ಸದ್ಯ ಪಾಸಾದರೆ ಸಾಕು"

"ಆಮೇಲೆ ?"

"ಎಲ್ಲಾದರೂ ಒಂದು ಕೆಲಸ...."

"ಆಮೇಲೆ....?"

"ಆಮೇಲೇನು ? ಎಲ್ಲರಹಾಗೆ ನಾನೂ ಒಬ್ಬ ಅಂತ ಹಾಯಾಗಿ ಇರೋದು!"

"ಅಷ್ಟೇನೆ ? ಇನ್ನೇನೂ ಆಸೆ ಇಲ್ವೆ ನಿಮಗೆ ?"

"ಇನ್ನೇನು ಆಸೆ ಇದೆ ಸ್ವರ್ಣ ? ನಮ್ಮ ತಂದೆ ನಿಮ್ಮ ತಂದೆಯ ಹಾಗೆಯೇ ಇನಾಂದಾರರಾಗಿದ್ದರೆ, ಲಕ್ಷಗಟ್ಟಲೆ ಬ್ಯಾಂಕಿನಲ್ಲಿಟ್ಟಿದ್ದರೆ, ನಾನೂ ಅಮೆರಿಕಾಗೆ ಹೋಗಿ ಇನ್ನಷ್ಟು ಓದಿ ಬರುತ್ತಿದ್ದೆ. ಆದರೆ ಆ ಭಾಗ್ಯ ನನಗಿಲ್ಲವಲ್ಲ!"

"ನೀವು ಮನಸ್ಸು ಮಾಡಿದರೆ ಆ ಭಾಗ್ಯ ಬರುತ್ತದೆ ಸುಂದರು"

"ಅದು ಹೇಗೆ ಸ್ವರ್ಣ ?"

"ಐಶ್ವರ್ಯವಂತರ ಮನೆಯ ಹುಡುಗಿಯನ್ನು ಮದುವೆಯಾದರೆ ಕೈತುಂಬ ವರದಕ್ಷಿಣೆ ಕೊಟ್ಟು, ಅಮೆರಿಕಾಗೂ ಕಳುಹಿಸಿ, ಹಿಂತಿರುಗಿ ಬಂದ ಮೇಲೆ ಯಾವುದಾದರೂ ದೊಡ್ಡ ಕೆಲಸಮಾಡಿಸಿಕೊಡುತ್ತಾರೆ."

"ಅದು ಸಾಧ್ಯವಿಲ್ಲ ಸ್ವರ್ಣ."

"ಈ ಪ್ರಪಂಚದಲ್ಲಿ ಯಾವುದೂ ಅಸಾಧ್ಯವಲ್ಲ ಸುಂದರು. ಯಾರು ಏನು ಬೇಕಾದರೂ ಮಾಡಬಹುದು."

"ಹಾಗೆ ಮಾಡುವಾಗ ಹಿಂದು – ಮುಂದು ಆಲೋಚಿಸಬೇಕು ಸ್ವರ್ಣ."

ಅಷ್ಟರಲ್ಲಿ ಚಿತ್ರ ಪ್ರಾರಂಭವಾಯಿತು.

"ಏನು ಆಲೋಚಿಸಬೇಕೋ ನಾನು ಕಾಣೆ ಸುಂದರು. ನನಗೇನೋ ನಿಮ್ಮನ್ನ ಕಂಡರೆ ತುಂಬ ಪ್ರೀತಿ...."

ಎಂದಳು ಸ್ವರ್ಣ. ಅನಂತರ ಚಿತ್ರ ನೋಡುತ್ತಿದ್ದಂತೆ—

"ನೋಡಿದಿರಾ ಸುಂದರು, ಆ ಹುಡುಗಿ ಅಷ್ಟು ಐಶ್ವರ್ಯವಂತ ಳಾದರೂ ಆ ಬಡ ಕೂಲಿಕಾರನನ್ನೇ ಪ್ರೀತಿಸುತ್ತಿದ್ದಾಳೆ. ಅದಕ್ಕೇನು ಕಾರಣ ಹೇಳಿ?"

"ಅದೇನು ದೊಡ್ಡ ಸಮಸ್ಯೆಯೋ? ಕೂಲಿಕಾರನಾದರೂ ಅವನು ಲಕ್ಷಣವಾಗಿದ್ದಾನೆ ಗಟ್ಟಿಮುಟ್ಟಾದ ದೃಢಕಾಯವನ್ನೂ ಅವನ ಸೌಂದರ್ಯವನ್ನೂ ಕಂಡು ಆಕೆ ಪ್ರೀತಿಸುತ್ತಿರಬಹುದು!"

"ಅಲ್ಲ ಸುಂದರು...."

"ಮತ್ತೇನು?"

"ಅದಕ್ಕೆ ಕಾರಣವೇ ಇಲ್ಲ ಸುಂದರು ಒಬ್ಬೊಬ್ಬರಿಗೆ ಒಂದೊಂದು ವಸ್ತುವನ್ನು ಕಂಡಾಗ, ಅದು ತಮಗೆ ಬೇಕೆಂಬ ಆಸೆಯಾಗುತ್ತದೆ. ಚೆನ್ನಾಗಿರಲಿ ಚೆನ್ನಾಗಿಲ್ಲದಿರಲಿ ಮನಸ್ಸು ನೆಟ್ಟಮೇಲೆ ಆ ವಸ್ತುವನ್ನೇ ಪ್ರೀತಿಸುತ್ತೇವೆ ಅದು ನಮಗೆ ಬೇಕೆಂದು ಬಯಸುತ್ತೇವೆ. ಅದಕ್ಕೆಲ್ಲಾ ಏನೂ ಕಾರಣವಿಲ್ಲ!"

ಸುಂದರು ಮೌನವಾಗಿ ಚಿತ್ರ ನೋಡುತ್ತಿದ್ದ.

"'ಡಾಲರ್ ಪ್ರಿನ್ಸೆಸ್' ಮನಸ್ಸಿಟ್ಟರೆ ಏನು ಬೇಕಾದರೂ ಮಾಡಬಹುದೆಂಬುದನ್ನು ನಿರ್ದೇಶಕ ನ್ಯೂಟನ್ ವಿಲಿಯಂಸ್ ತುಂಬ ಚೆನ್ನಾಗಿ ನಿರೂಪಿಸಿದ್ದಾನೆ"

"ಅದೆಲ್ಲಾ ಸುಳ್ಳು ಸ್ವರ್ಣ. ಸಿನಿಮಾದಲ್ಲಿ ಮಾತ್ರ ಆ ರೀತಿ ಆಗಬಹುದು ಆದರೆ ನಿತ್ಯಜೀವನದಲ್ಲಿ ಅದೆಲ್ಲಾ ಸಾಧ್ಯವಿಲ್ಲ. ಒಂದು ಪಕ್ಷ ಸಾಧ್ಯವಾದರೂ ಅದರಿಂದ ಇತರರಿಗೆ ತೊಂದರೆ"

"ಇತರರಿಗೆ ತೊಂದರೆಯಾದರೆ ನಮಗೇನು – ನಾವಂತೂ ಸುಖ ವಾಗಿರಬಹುದಲ್ಲ. ಅವರವರ ಪಾಡು ಅವರವರಿಗೆ."

ಸುಂದರುವಿಗೆ ಸ್ವರ್ಣಳ ಮಾತು ಬೇಸರವೆನಿಸಿತು 'ಇತರರಿಗೆ ತೊಂದರೆಯಾದರೆ ನಮಗೇನು?' — ಎಂಥ ಮಾತಾಡುತ್ತಿದ್ದಾಳೆ ಆಕೆ. ಅದು ಅವಳ ಒಳ್ಳೆಯ ತನವನ್ನು ಸೂಚಿಸುತ್ತದೆಯೇ? ಅವಳ ಮನೋಭಾವ ತಿಳಿಯದ ಅತ್ತೆ 'ಸ್ವರ್ಣ ತುಂಬ ಒಳ್ಳೆಯ ಹುಡುಗಿ' ಎಂದು ನಂಬಿದ್ದಾರೆ! – ಎಂದುಕೊಂಡ ಸುಂದರ.

ತನ್ನ – ಅವಳ ಪ್ರಸಂಗ ಅಷ್ಟಕ್ಕೇ ಮುಗಿದಿದ್ದರೆ ಏನೋ ಸುಮ್ಮನಿದ್ದು ಬಿಡಬಹುದಾಗಿತ್ತು. ಆದರೆ ಇನ್ನೊಂದು ಸಾರಿ ಅವಳು ಖಂಡಿತವಾಗಿ ಕೇಳಿದ ಮಾತು – ಮಾಡಿದ ಶಪಥ ತನ್ನ ಎದೆಯನ್ನೇ ಝಲ್ಲೆನಿಸುವಂತೆ ಮಾಡಲಿಲ್ಲವೇ ?

....ಆ ದಿನ ಪದ್ಮ – ರತ್ನ ಇಬ್ಬರೂ ಮಲ್ಲೇಶ್ವರದ ಕೃಷ್ಣ ದೇವರ ಗುಡಿಗೆ ಹೋಗಿದ್ದರು. ಸುಂದರು ಒಬ್ಬನೇ ತನ್ನ ಕೊಠಡಿಯಲ್ಲಿ ಕುಳಿತು ರತ್ನಳ ಭಾವಚಿತ್ರವನ್ನು ನೋಡುತ್ತಾ ತುಟಿಯಲ್ಲೇ ನಗುತ್ತಿದ್ದ. ತನ್ನ – ರತ್ನಳ ಮದುವೆ ಎಂದಾದರೊಂದು ದಿನ ಆಗೇ ಆಗುವುದೆಂಬ ಸಂತೋಷದಿಂದ ಅವನ ಹೃದಯ ಪುಳಕಗೊಂಡಿತ್ತು. ಆ ಆನಂದದಲ್ಲಿ ಮೈ ಮರೆತಿರುವಾಗ ಮೆಲ್ಲ ಮೆಲ್ಲನೆ ಹೆಜ್ಜೆಯಿಡುತ್ತಾ ಒಳಗೆ ಬಂದು, ಸುಂದರುವಿನ ಕಣ್ಣು ಮುಚ್ಚಿದ್ದಳು ಆ ಹುಡುಗಿ. ....

ಯಾರಿರಬೇಕು ಆ ಹುಡುಗಿ ?

ಆ ಧೈರ್ಯ ಇನ್ನಾರಿಗಿದೆ – ರತ್ನಳೇ !

ಆದರೆ ಅವಳು ಈಗತಾನೆ ತನ್ನ ತಾಯಿಯ ಜೊತೆಯಲ್ಲಿ ದೇವಸ್ಥಾನಕ್ಕೆ ಹೋದಳಲ್ಲಾ !

ಬಹುಶಃ ಅತ್ತೆಯೊಬ್ಬಳನ್ನೇ ಕಳುಹಿಸಿ, ತಾನು ಹಿಂತಿರುಗಿ ಬಂದಿರಬೇಕು !

"ಬಿಡು ರತ್ನ."

ರತ್ನಳಾಗಿದ್ದರೆ ಬಿಟ್ಟು ಬಿಡುತ್ತಿದ್ದಳು !

"ಗುಡಿಗೆ ಹೋಗಿದ್ದವಳು ಇಷ್ಟು ಬೇಗ ಹೇಗೆ ಬಂದೆಯೇ ?"

"ನನ್ನ ದೇವರ ಗುಡಿಗೆ ನಾನು ಬಂದಿದ್ದೇನೆ."

ಆ ಧ್ವನಿ ರತ್ನಳದಲ್ಲ; ಸ್ವರ್ಣಳದು.

'ಥೂ, ಎಂಥ ನಾಚಿಕೆಗೆಟ್ಟ ಹುಡುಗಿ' ಎಂದು ಮನಸ್ಸಿನಲ್ಲಿಯೇ ಅಂದುಕೊಂಡ ಸುಂದರು, ನಿಜಕ್ಕೂ ಗಾಬರಿಯಾಗಿದ್ದ.

"ಓ ! ಸ್ವರ್ಣಾ...."

"ಹ್ದೂಂ, ನಾನೇ !"

"ಏನು ಬಂದೆ ?"

"ಬರಬಾರದೇನು ?"

"ಧಾರಾಳವಾಗಿ ಬಾ. ಕೂತುಕೋ"

ಕುರ್ಚಿ ತೋರಿಸಿದ ಸುಂದರು.

"ಕೂತುಕೊಳ್ಳುವುದಕ್ಕಲ್ಲ ಬಂದಿದ್ದು."

"ಹಾಗಾದರೆ ನಿಂತೇ ಇರುತ್ತೀಯೇನು?"

"ಹ್ದೂ, ದೇವರ ಗುಡಿಗೆ ಬಂದಿದ್ದು ಕುಳಿತು ಕೊಳ್ಳುವುದಕ್ಕಲ್ಲ. ನಿಂತು ಪ್ರಾರ್ಥನೆ ಮಾಡುವುದಕ್ಕೆ."

"ಜ್ಞಾನ ಸರಿಯಾಗಿದೆ ತಾನೆ ಸ್ವರ್ಣ? ನೀನು ಬಂದಿರುವುದು ನನ್ನ ರೂಮಿಗೆ – ಗುಡಿಗಲ್ಲ!"

"ಇದೇ ನನಗೆ ಗುಡಿ."

"ದೇವರೇ ನನ್ನನ್ನು ಕಾಪಾಡಬೇಕು!"

"ಈ ದೇವರೇ ನನ್ನ ಕೈ ಹಿಡಿಯಬೇಕು."

"ಏನು ಮಾತನಾಡುತ್ತಿದ್ದೀಯಾ ಸ್ವರ್ಣ?"

"ದೇವರಿಗೆ ಅರ್ಥವಾಗಲಿಲ್ಲವೇ?"

"ನನಗೆ ಅರ್ಥವಾಗಲಿಲ್ಲ!"

"ಅರ್ಥವಾಗುವಂತೆ ಹೇಳಲೇ – ನೀವು ನನ್ನನ್ನು ಮದುವೆಯಾಗಬೇಕು."

"ನಿನಗೆ ಹುಚ್ಚು ಹಿಡಿಯಿತೆ ಸ್ವರ್ಣ?"

"ಇನ್ನೂ ಹಿಡಿದಿಲ್ಲ ಹಿಡಿಯಲು ಬಹಳ ಕಾಲವೂ ಬೇಕಿಲ್ಲ!"

"ಅಂದರೆ....?"

"ಈಗಾಗಲೇ ಮೂರು ಹೆಂಡಿರನ್ನು ಮದುವೆಯಾಗಿ, ಹತ್ತು ಮಕ್ಕಳನ್ನು ಹುಟ್ಟಿಸಿದ ಬಾಗಿಹಳ್ಳಿಯ ಜಮೀನುದಾರ್ ಹಯವದನ ರಾಯರು ನಾಲ್ಕನೆಯ ಮದುವೆಗೆ ಹೆಣ್ಣು ಕೇಳಲು ಬಂದಿದ್ದಾರೆ. ಹಳ್ಳಿಯ ಮನೆಯನ್ನೂ ವೇಶ್ಯಾಗೃಹವನ್ನಾಗಿ ಮಾಡಿದ ಅವರಿಗೆ ಇನ್ನೊಂದು ಹೊಸ ಹುಡುಗಿ ಬೇಕಂತೆ ತಂದೆ ಆ ಸಿರಿವಂತಿಕೆಗೆ ಮೆಚ್ಚಿ, ನನ್ನನ್ನು ಆ ಹಾಳು ಭಾವಿಗೆ ತಳ್ಳಲು ಯೋಚಿಸಿದ್ದಾರೆ!"

"ಅದಕ್ಕೆ ನಾನೇನು ಮಾಡಲಿ ಸ್ವರ್ಣ?"

"ಈಗ ನೀವು ನನ್ನ ಕೈ ಹಿಡಿದು ಕಾಪಾಡಬೇಕು"

"ಅದು ಸಾಧ್ಯವಾಗುವುದಿಲ್ಲ ಸ್ವರ್ಣ. ನನಗೆ ಚಿಕ್ಕಂದಿನಲ್ಲಿಯೇ

ಮದುವೆಯಾಗಿಹೋಗಿದೆ."

"ಸುಳ್ಳು !"

"ನಿಜ ಸ್ವರ್ಣ. ಹಿರಿಯರು ಆಗಲೇ ತೊಟ್ಟಿಲು ಮದುವೆ ಮಾಡಿದ್ದಾರೆ! ಬೆಳೆಯುತ್ತ ಬೆಳೆಯುತ್ತ ಒಬ್ಬರನ್ನೊಬ್ಬರು ಚೆನ್ನಾಗಿ ತಿಳಿದುಕೊಂಡು ಪರಸ್ಪರ ಪ್ರೀತಿಸುತ್ತಾ ಬಂದಿದ್ದೇವೆ. ಎಲ್ಲರೂ ನೋಡುವ ಹಾಗೆ ಮದುವೆಯ ಶಾಸ್ತ್ರ ಆಗಬೇಕಾದ್ದು ಮಾತ್ರ ಉಳಿದಿದೆ."

"ಸುಂದರು, ನೀವು ವಿಲಾಯಿತಿಗೆ ಹೋಗಿ ಬರುವುದಕ್ಕೆ ಬೇಕಾದಷ್ಟು ಹಣ ಕೊಡುತ್ತೇನೆ. ವರದಕ್ಷಿಣೆ ಕೇಳಿದರೆ ಅದನ್ನೂ ಕೊಡಿಸುತ್ತೇನೆ. ನೀವಾಗಲಿ – ನಿಮ್ಮ ಹಿರಿಯರಾಗಲಿ ಕೇಳಿದ್ದನ್ನು ಕ್ಷಣ ಮಾತ್ರದಲ್ಲಿ ತೆಗೆಸಿಕೊಡುತ್ತೇನೆ. ಆದರೆ ನೀವು ಮಾತ್ರ ನನಗೆ ನಿಮ್ಮ ಹೃದಯವನ್ನು ಕೊಟ್ಟರೆ ಸಾಕು ಅದು ನನಗೆ ಬೇಕೇ ಬೇಕು."

"ಬೇಕಾದುದನ್ನೆಲ್ಲಾ ಬಯಸಬಾರದು"

"ಬಯಸಿದುದನ್ನೆಲ್ಲಾ ಪಡೆಯುವ ಶಕ್ತಿ ಇರುವಾಗ ಅದರಲ್ಲಿ ಏನು ತಪ್ಪು ?"

"ಇನ್ನೊಬ್ಬರ ಸುಖ – ದುಃಖ ನೋಡಬೇಕು ಸ್ವರ್ಣ"

"ನನ್ನ ಸುಖ – ದುಃಖವನ್ನು ನೋಡುವವರು ಯಾರು ?"

"ದೇವರು........"

"ಕಣ್ಣ ಮುಂದೆ ನಿಂತಿರುವ ದೇವರೇ ಸುಮ್ಮನಿರುವಾಗ, ಕಣ್ಣಿಗೆ ಕಾಣದ ದೇವರು ಏನು ಮಾಡುತ್ತಾನೆ?"

"ಹಾಗನ್ನಬಾರದು ಸ್ವರ್ಣ"

"ಆ ವೇದಾಂತ ನನಗೆ ಬೇಡ. ನೀವು ನನ್ನನ್ನು ಮದುವೆ ಆಗುತ್ತೀರೋ ಇಲ್ಲವೋ ?"

"ಅದು ಸಾಧ್ಯವಿಲ್ಲವೆಂದು ಹೇಳಿದೆನಲ್ಲ."

"ನಾನು ಸಾಧ್ಯಮಾಡಿಕೊಳ್ಳುತ್ತೇನೆ ಸುಂದರು. ನಿಮ್ಮನ್ನೇ ಮದುವೆಯಾಗುತ್ತೇನೆ. ತಾನು ಬಯಸಿದ ಬಡ ಕೂಲಿಕಾರನನ್ನೇ ಮದುವೆಯಾದ 'ಡಾಲರ್ ಪ್ರಿನ್ಸೆಸ್' ಚಿತ್ರವನ್ನು ಮರೆತಿಲ್ಲ ತಾನೆ ?

ನೋಡಿ ಈ 'ಡಾಲರ್ ಪ್ರಿನ್ಸೆಸ್' ಏನು ಮಾಡುತ್ತಾಳೆಂದು !"

"ಈ ವ್ಯರ್ಥಾಲಾಪ ಏಕೆ ಸ್ವರ್ಣ ?"

"ವ್ಯರ್ಥವೋ ಅರ್ಥವೋ ಆಮೇಲೆ ನೋಡಿ"

ಎನ್ನುತ್ತಾ ಸಿಟ್ಟಿನಿಂದ ನುಡಿದ ಸ್ವರ್ಣ ಬಿರುಬಿರನೆ ನಡೆದು ಹೊರಟು ಹೋದಳು.

ಆ ಘಟನೆ ಇದೀಗ ನೆನಪಿಗೆ ಬರುತ್ತಿದೆ.

ಇಷ್ಟು ಒರಟಾಗಿ ವರ್ತಿಸುವ ಹುಡುಗಿ ಒಳ್ಳೆಯವಳೇ ? ಅವಳ ಮನಸ್ಸು ಎಷ್ಟು ಕೆಟ್ಟದೆಂಬುದನ್ನು ತಿಳಿದಿದ್ದರೆ, ಅತ್ತೆ 'ಸ್ವರ್ಣ ತುಂಬ ಒಳ್ಳೆಯ ಹುಡುಗಿ' ಎಂದು ಹೇಳುತ್ತಿರಲಿಲ್ಲ. ಆ ದಿನದ ಘಟನೆಯನ್ನು ಅತ್ತೆಗೆ ವಿವರಿಸಿದ್ದರೆ – 'ಅವಳೇನು ಮಾಡಿದಳಪ್ಪ ನಿನಗೆ ?' ಎಂದೂ ಕೇಳುತ್ತಿರಲಿಲ್ಲ. ರತ್ನಳ ಕೈಹಿಡಿಯುವುದೇ ನಿಜವಾಗಿರುವಾಗ, ಸ್ವರ್ಣಳ ಪ್ರಸಂಗ ಪಾರಾಯಣಮಾಡಿ ಅತ್ತೆಯ ಮನಸ್ಸನ್ನೇಕೆ ವೃಥಾ ನೋಯಿಸಬೇಕು ಎಂದುಕೊಂಡ ಸುಂದರು.

ಅವನ ಮನಸ್ಸು ಮೃದುವಾಗಿ ಕೇಳಿತು :

"ನೀನು ಸ್ವರ್ಣಳನ್ನೇ ಮದುವೆಯಾಗುವ ಸಂದರ್ಭ ಒದಗಿದರೆ ರತ್ನಳನ್ನೇನು ಮಾಡುತ್ತೀ ?"

೪

"ಅದನ್ನು ಆಮೇಲೆ ಯೋಚಿಸೋಣ. ಮುಹೂರ್ತದ ವೇಳೆ ಮೀರಿಹೋಗುತ್ತದೆ. ಮೊದಲು ಮಾಂಗಲ್ಯಧಾರಣೆಯಾಗಲಿ"

ಎಂದರು ರಂಗಯ್ಯ.

ಶ್ರೀನಿವಾಸ ತಂದೆಯ ಮುಖವನ್ನೇ ನೋಡುತ್ತಿದ್ದ. ಪುರೋಹಿತರು

"ಮಾಂಗಲ್ಯಂ ತಂತುನಾಡೀನ....ಮಂಗಳಸೂತ್ರ ಕಟ್ಟಪ್ಪ, ಘಳಿಗೆ ಮೀರಿದರೆ ಕೆಲಸ ಕೆಡುತ್ತದೆ. ವಿಷಘಳಿಗೆಯಲ್ಲಿ ಶುಭಕೆಲಸ

ಮಾಡಬಾರದು" ಎಂದರು. ಶ್ರೀನಿವಾಸ ನಾಗರತ್ನಳ ಕೊರಳಿಗೆ ಮಾಂಗಲ್ಯ ಕಟ್ಟಲು ಅನುವಾದ.

"ತಾಳೋ ಸ್ವಲ್ಪ—"

ಎಂದು ತಡೆದು ಗದರಿಸಿಕೊಂಡರು ನಾಗಪ್ಪ. ಸುತ್ತಮುತ್ತಲೂ ನೆರೆದಿದ್ದವರೆಲ್ಲಾ ವರ – ಕನ್ಯಾ ಪಿತೃಗಳನ್ನೇ ನೋಡುತ್ತಿದ್ದರು. ಶ್ರೀನಿವಾಸನೂ ತಂದೆಯ ಮುಖವನ್ನೇ ನೋಡುತ್ತಿದ್ದ ಹಿರಿಯರ ಸಂಭಾಷಣೆ ಕೇಳುತ್ತಿದ್ದ ನಾಗರತ್ನ ಕಣ್ಣೀರು ಸುರಿಸುತ್ತಿದ್ದಳು. ಅವಳ ಪಕ್ಕದಲ್ಲಿ ಕುಳಿತಿದ್ದ ವೆಂಕಮ್ಮನಿಗೂ ಆ ಪರಿಸ್ಥಿತಿಯನ್ನು ಕಂಡು ಗಾಬರಿಯಾಯಿತು.

"ಶುಕ್ರವಾರ – ಹತ್ತೂವರೆಯಿಂದ ಹನ್ನೆರಡರವರೆಗೆ ರಾಹು ಕಾಲ. ಈಗಾಗಲೇ ಹತ್ತೂಇಪ್ಪತ್ತಾಯಿತು. ಮುಹೂರ್ತದ ವೇಳೆ ಮೀರಿಹೋಗುತ್ತಿದೆ...." ಎಂದು ಎಚ್ಚರಿಸಿದರು ಪುರೋಹಿತರು

"ಇದೊಂದು ಕಾರ್ಯ ಈಗ ಆಗಿ ಹೋಗಲಿ ಸ್ವಾಮಿ. ಗಡಿಯಾರ, ಬೈಸಿಕಲ್ಲು ಆಮೇಲೆ ತೆಗೆಸಿಕೊಡುತ್ತೇನೆ"

"ಅದೆಲ್ಲಾ ಸಾಧ್ಯವಿಲ್ಲ ರಂಗಯ್ಯನವರೇ, ಈ ಸಮಯಬಿಟ್ಟರೆ ಆ ಮಾತಿಗೆ ಬೆಲೆಯಿಲ್ಲ"

"ಹಾಗನ್ನಬೇಡಿ ಸ್ವಾಮಿ. ನನ್ನ ಮೇಲೆ ನಂಬಿಕೆಯಿಡಿ"

"ನನಗೆ ನನ್ನಲ್ಲೇ ನಂಬಿಕೆಯಿಲ್ಲ. ಇನ್ನೊಬ್ಬರನ್ನು ಹೇಗೆ ನಂಬಲಿ ?" ಎಂದರು ನಾಗಪ್ಪ.

ನಾಂದಿಪೀಠದ ಮೇಲೆ ಕುಳಿತಿದ್ದ ಹುಡುಗಿಯ ಚಿಕ್ಕಪ್ಪನೂ ಎದ್ದು ನಾಗಪ್ಪನವರ ಬಳಿಗೆ ಬಂದು—

"ಇನ್ನು ಐದೇ ಐದು ನಿಮಿಷವಿದೆ ಸ್ವಾಮಿ. ಆಮೇಲೆ ವಿಷ ಘಳಿಗೆ–ಕಲಹ ಕಾಲ"

"ಗಡಿಯಾರ – ಬೈಸಿಕಲ್ಲು ಬರುವವರೆಗೂ ನಾನೇನೂ ಮಾಡುವುದಿಲ್ಲ"

ಕೂಡಲೇ ಹುಡುಗಿಯ ಚಿಕ್ಕಪ್ಪ ತನ್ನ ಕೈಗಡಿಯಾರವನ್ನೆ ತೆಗೆದು ನಾಗಪ್ಪನವರ ಕೈಗಿಡುತ್ತಾ—

"ಸಾಯಂಕಾಲವೇ ಬೈಸಿಕಲ್ಲು ತೆಗೆಸಿಕೊಡುತ್ತೇನೆ. ಈಗ ಕೆಲಸ

ಸಾಗಲಿ" ಎಂದನು. ಬಲವಂತವಾಗಿ ಒಪ್ಪಿಕೊಂಡರು ನಾಗಪ್ಪ.

ಅಷ್ಟರಲ್ಲಿ ಹುಡುಗಿ, ಹಸಿವುಣೆಯಿಂದದ್ದು ಕಣ್ಣೀರು ತೊಟ್ಟಿಕ್ಕಿಸುತ್ತಾ ಸನಿಯದಲ್ಲೇ ಇದ್ದ ಕೋಣೆಗೆ ಹೋಗಿ ಅಳುತ್ತಾ ಕುಳಿತುಬಿಟ್ಟಳು. ಅವಳನ್ನು ಸಮಾಧಾನಮಾಡಿ ಕರೆತರಲು ರಾಜಮ್ಮನೂ ವೆಂಕಮ್ಮನೂ ಹೋಗಬೇಕಾಯಿತು.

"ನಾನು ಬರುವುದಿಲ್ಲ ಹೋಗಮ್ಮ. ಈ ಗಂಡನಲ್ಲದಿದ್ದರೆ ಇನ್ನೊಬ್ಬನಾಯಿತು. ಇಂಥ ಕಲ್ಲು ಬೊಂಬೆಗಳನ್ನು ಕಟ್ಟಿಕೊಂಡು ಇನ್ನೂ ಏನೇನು ಅನುಭವಿಸಬೇಕೋ? ನನಗೀಗ ಮದುವೆಯೇ ಬೇಡ. ಅವರ ಬಾಯಿಗೆ ಸುರಿದಿರುವ ಸಾವಿರ ರೂಪಾಯಿ ವಾಪಸ್ಸು ತೆಗೆದುಕೊಂಡು ನಡಿಯಮ್ಮ – ಊರಿಗೆ ಹೋಗೋಣ. ತಾತ, ಚಿಕ್ಕಪ್ಪ – ಎಲ್ಲರಿಗೂ ನನ್ನಿಂದ ವೃಥಾ ಕಷ್ಟ. ಇಷ್ಟಾದರೂ ಮುಂದೆ ಸುಖಪಡುವ ಹಾಗಿಲ್ಲ ಈ ಕಟುಕರ ಹತ್ತಿರ...."

ನಾಗರತ್ನಳ ಮಾತು ಕೇಳುತ್ತಾ ರಾಜಮ್ಮನ ಪಕ್ಕದಲ್ಲಿಯೇ ನಿಂತಿದ್ದ ವೆಂಕಮ್ಮನ ಕಣ್ಣಿಂದ ಪ್ರವಾಹ ಹರಿಯತೊಡಗಿತು. ಬಿಕ್ಕಿ ಬಿಕ್ಕುತ್ತಾ ಬಾಯಿಕಟ್ಟಿ ಅಳುತ್ತಿದ್ದಳು ಆಕೆ ಬೀಗಿತಿಯನ್ನು ನೋಡಿದ ರಾಜಮ್ಮನೂ ಮೆತ್ತಗಾಗಿ, ಗದ್ಗದ ಕಂಠದಿಂದ—

"ಹಾಗನ್ನಬಾರದು ಏಳಮ್ಮ ಪುಟ್ಟಿ. ನೋಡು ದೇವಿಯಂಥ ಅತ್ತೆ ಇಲ್ಲಿ ನಿಂತಿದ್ದಾರೆ ಅವರನ್ನೊಂದು ಸಾರಿ ನೋಡಮ್ಮ."

ಅಳುವನ್ನು ಒತ್ತಿಹಿಡಿದು, ಮೆಲ್ಲನೆ ತಲೆಯೆತ್ತಿ ವೆಂಕಮ್ಮನ ಕಡೆಗೆ ನೋಡಿದಳು ನಾಗರತ್ನ.

ಹೌದು ಸಾಕ್ಷಾತ್ ದೇವಿಯ ಅವತಾರ!

ಹುಡುಗಿಯ ಸಿಟ್ಟಿನ ಅಸಹಾಯಕತೆಯ ನೋಟ ಬದಲಾಗಿ, ಅಭಯವನ್ನು ಬೇಡುವ ಸೌಮ್ಯಭಾವ ಗಂಭೀರವಾಗಿ ಮೂಡಿತು.

"ಬಾ ತಾಯಿ, ಮನೆಯ ಬೆಳಕಾಗಿ ಬರುತ್ತಿರುವವಳು ಕತ್ತಲೆಗೆ ಅಂಜಬಹುದೇನಮ್ಮ?"

"ಅತ್ತೆ........"

ಉದ್ವೇಗದಿಂದ ಕೂಗುತ್ತ ನಾಗರತ್ನ ತಟ್ಟನೆ ವೆಂಕಮ್ಮನನ್ನು ತಬ್ಬಿಕೊಂಡು ಅವಳ ಸೆರಗಿನಲ್ಲಿ ಮುಖವಿಟ್ಟಳು.

"ಅಳಬೇಡ ಮಗು, ಬಾ ಹೋಗೋಣ"

ಎನ್ನುತ್ತಾ ವೆಂಕಮ್ಮ ಮೃದುವಾಗಿ ಅವಳ ಕೂದಲನ್ನು ನೇವರಿಸಿ, ಮುಡಿದಿದ್ದ ಹೂವನ್ನು ಸರಿಪಡಿಸಿ, ನಾಗರತ್ನಳ ಕಣ್ಣೀರನ್ನು ಸೆರಗಿನಿಂದ ಒರೆಸಿದಳು.

"ಹೊತ್ತಾಗಿ ಹೋಯಿತು ಎಂದು ಅಲ್ಲಿ ಕೂಗಾಡುತ್ತಿದ್ದರೆ, ನೀವೇನು ಮಾಡುತ್ತಿದ್ದೀರಿ ಇಲ್ಲಿ? ಹೆಣ್ಣು ಕರೆದುಕೊಂಡು ಬನ್ನಿ"

ಎಂದು ರಂಗಯ್ಯನವರು ಗಡಿಬಿಡಿಯಿಂದ ಕೂಗಿದರು.

ನಾಗರತ್ನ ಹಸೆಗೆ ಬಂದಳು. ನಾಗಸ್ವರ ಮೊಳಗಿತು. ಎಲ್ಲರೂ ವಧೂ-ವರರನ್ನೇ ನೋಡುತ್ತಿದ್ದರು. ಶ್ರೀನಿವಾಸ ನಾಗರತ್ನಳ ಕೊರಳಿಗೆ ಮಾಂಗಲ್ಯವನ್ನು ಬಿಗಿಸುವಾಗ, ಅವಳು ಓರೆ ನೋಟದಿಂದ ಅವನ ಕೈಯ್ಯನ್ನೇ ನೋಡಿದಳು. ಅವನು ಕಟ್ಟಿಕೊಂಡಿದ್ದ ಚಿಕ್ಕಪ್ಪನ ಕೈಗಡಿಯಾರದಲ್ಲಿ ಹತ್ತೂಮುಕ್ಕಾಲು ಗಂಟೆಯಾಗಿತ್ತು.

ಹನ್ನೆರಡು ಗಂಟೆಯ ವೇಳೆಗೆ ಲಾಡು ಊಟದ ಗಲಾಟೆಯೂ ಮುಗಿದು ಹೋಯಿತು. ಸಜ್ಜನರಾಯರ ಛತ್ರವನ್ನು ಒಂದು ದಿನದ ಮಟ್ಟಿಗೆ ಬಾಡಿಗೆಗೆ ತೆಗೆದುಕೊಂಡಿದ್ದರಿಂದ, ಅದೇ ಸಂಜೆಯೇ ಮದುವೆಯ ಪರಿವಾರ ಹೊರಟುಹೋಗಬೇಕಾಗಿತ್ತು. ದೂರದ ಊರುಗಳಿಂದ ಬಂದಿದ್ದ ಕೆಲವೇ ಕೆಲವು ಮಂದಿ ಬಂಧುಗಳು ಊಟ ಆದೊಡನೆಯೇ ಹೊರಟುಹೋಗಿದ್ದರು. ಹದಿನೈದು ದಿನಗಳ ರಜೆ ಪಡೆದು ಬಂದಿದ್ದ ಹುಡುಗಿಯ ಚಿಕ್ಕಪ್ಪನೂ ಮನಸ್ಸಿಗೆ ಸಂತೋಷ ಇಲ್ಲವೆಂದುಕೊಂಡು ಆ ರಾತ್ರಿಯೇ ಮೈಸೂರಿಗೆ ಹೊರಡುವುದಾಗಿ ನುಡಿದ. ಆದರೆ ನಾಗಪ್ಪನವರು—

"ಬೈಸಿಕಲ್?" ಎಂದು ಪ್ರಶ್ನಿಸಿದರು.

ಚಿಕ್ಕಪ್ಪ ಆಡಿದ ಮಾತಿಗೆ ತಪ್ಪದೆ, ಅದೇ ಸಂಜೆ ನಾಗಪ್ಪನವರನ್ನೂ ಶ್ರೀನಿವಾಸನನ್ನೂ ಕರೆದುಕೊಂಡು ಹೋಗಿ ಡೈನಾಮೋ ಇದ್ದ ಬಿ.ಎಸ್.ಎ ಸೈಕಲ್ಲನ್ನು ತೆಗೆದುಕೊಟ್ಟ.

ರಾತ್ರಿ ಏಳು ಗಂಟೆಯಾದಾಗ, ಛತ್ರದಲ್ಲಿ ಉಳಿದಿದ್ದವರು ಗಂಡು–ಹೆಣ್ಣಿನ ಮನೆಯವರು ಮಾತ್ರ. ಅವರ ಜೊತೆಗೆ ಪದ್ಮರತ್ನ ಬಂಧುಗಳಾಗಿದ್ದರು.

"ಮನೆಗೆ ಹೋಗೋಣ ಬನ್ನಿ. ಎರಡು ದಿನ ಇದ್ದು ಆಮೇಲೆ ಹೋದರಾಯಿತು" ಪದ್ಮಮ್ಮ ಎಲ್ಲರನ್ನೂ ಆಹ್ವಾನಿಸಿದಳು.

"ಇಲ್ಲ, ನಾವು ಬೆಳಗ್ಗೆಯೇ ಊರಿಗೆ ಹೊರಟು ಬಿಡಬೇಕು" ಎಂದರು ನಾಗಪ್ಪ

"ಕಾಯಿಲೆಯವನನ್ನು ಬಿಟ್ಟು ಬಂದಿದ್ದೇವೆ. ನೋಡಿಕೊಳ್ಳುವವರು ಯಾರೂ ಇಲ್ಲ. ಇನ್ನೊಂದು ಸಾರಿ ಬರುತ್ತೇವೆ" ಎಂದರು ರಂಗಯ್ಯ.

"ಅತ್ತಿಗೆ, ನಮ್ಮ ಜೊತೆಯಲ್ಲೇ ಬನ್ನಿ. ಊರಿನಲ್ಲಿ ನಾಲ್ಕು ದಿನವಿದ್ದು ಬರುವಿರಂತೆ. ರತ್ನ – ಸುಂದರು ಇಬ್ಬರೂ ಬರಲಿ. ಹೇಗಿದ್ದರೂ ಬೇಸಿಗೆ ರಜ ಇದೆಯಲ್ಲ" ಎಂದರು ವೆಂಕಮ್ಮ.

ವೃದ್ಧ ಅತ್ತಿಗೆ-ನಾದಿನಿಯರು ಸ್ವಲ್ಪಹೊತ್ತು ಆತ್ಮೀಯತೆಯಿಂದ ಮಾತನಾಡಿದರು. ಆ ಮಾತಿನ ಸಾರಾಂಶ—'ಸುಂದರು – ರತ್ನರ ಮದುವೆ ಆದಷ್ಟು ಬೇಗ ಮುಗಿಸಿ ಬಿಡಬೇಕು !'

## ೨೩

"ಮುಗಿಸಿ ಬಿಡಬೇಕು ; ಇಲ್ಲದಿದ್ದರೆ ಹುಡುಗನಿಗೆ ಬುದ್ಧಿ ಬರುವುದಿಲ್ಲ." ಎಂದಳು ವೆಂಕಮ್ಮ.

"ಪ್ರಸ್ತಕ್ಕೆ ಈಗೇನು ಅವಸರ, ನಾವಾಗಿ ನಾವು ಹೋದರೆ ಹಣ ಖರ್ಚುಮಾಡಿಕೊಂಡು ಬರಬೇಕು, ಅವರೇ ಬಂದು ಮಾಡಿಕೊಟ್ಟು ಹೋಗಲಿ. ಅವರು ತಾನೆ ಎಷ್ಟು ದಿನ ಹುಡುಗಿಯನ್ನು ಮನೆಯಲ್ಲಿ ಇಟ್ಟುಕೊಂಡಿರುತ್ತಾರೆ ?"

"ಹಾಗಂತ ನಾವು ಸುಮ್ಮನಿರಬಾರದೊಂದ್ರೆ."

"ಸುಮ್ಮನಿರದೆ ಕುಣೀಬೇಕೇನು ?"

ಮಾತಿನ ಧೋರಣೆ ಬದಲಿಸಿ ನುಡಿದರು ನಾಗಪ್ಪ :

"ಆ ಹುಡುಗಿ ಬಂದರೆ, ಗಂಡ-ಹೆಂಡತಿಯರಿಗೆ ಅಂತ ಒಂದು

ರೂಪಾಯಿ ಬೇಡವೇ? ಓಬೀರಾಯನ ಕಾಲದ ಈ ಮನೆ ಈಗಲೋ – ಆಗಲೋ ಬೀಳುವ ಹಾಗಿದೆ. ಅಚ್ಚುಕಟ್ಟಾಗಿ ಮನೆ ಕಟ್ಟಿಸಿಕೊಂಡು ಸೊಸೆಯನ್ನು ಗೃಹಪ್ರವೇಶ ಮಾಡಿಸಿಕೊಳ್ಳೋಣ"

ಪತಿಯ ಮುಂದಾಲೋಚನೆಯನ್ನು ಕೇಳಿ ಹರ್ಷಿತಳಾದಳು ವೆಂಕಮ್ಮ.

"ಜಾಗವೆಲ್ಲಿದೆ ಮನೆ ಕಟ್ಟುವುದಕ್ಕೆ?"

"ಗೋಪಾಲಯ್ಯನವರದ್ದೇ ಒಂದು ಪಾಳು ಇದೆಯಲ್ಲಾ ಹುಣಿಸೆ ಮರದ ಹತ್ತಿರ. ಅದನ್ನೇ ಬರೆಸಿಕೊಳ್ಳಬೇಕೆಂದಿದ್ದೇನೆ"

"ಇನ್ನೂ ಬರೆಸಿಕೊಂಡು ಮನೆ ಕಟ್ಟುವುದು ಯಾವಾಗ?"

"ಇನ್ನು ಮೂರು ತಿಂಗಳಲ್ಲಿ ಹೊಸ ಮನೆಗೆ ಹೊರಟುಬಿಡಬೇಕು"

ಆ ಮಾತು ಆಶ್ಚರ್ಯವೇ ಆಗಿತ್ತು ವೆಂಕಮ್ಮನಿಗೆ ಮೂರು ತಿಂಗಳಲ್ಲಿ ಮನೆಕಟ್ಟಿ ಮುಗಿಯದಿದ್ದರೂ, ಆ ವೇಳೆಗೆ ಅದಕ್ಕೊಂದು ಆಕಾರ ಬರುತ್ತಿತ್ತು. ಶ್ರೀನಿವಾಸನಿಗೆ ಬಂದಿದ್ದ ಸಾವಿರ ರೂಪಾಯಿ ವರದಕ್ಷಿಣೆಯಲ್ಲಿ ಎಂಟುನೂರು ಖರ್ಚುಮಾಡಿ ಮನೆ ಕಟ್ಟಿಸುತ್ತಿದ್ದರು. ತುಂಬ ಸಾಧಾರಣವಾದ ಎಂಟಂಕಣದ ಹಸಿ ಇಟ್ಟಿಗೆ ಮನೆ ಹೊರಗಡೆ ಎರಡು ಕೊಠಡಿಗಳು; ಅದರ ಮಧ್ಯದಲ್ಲಿ ಒಳಗೆ ಹೋಗುವ ದಾರಿ; ಅಲ್ಲಿಂದ ಮುಂದೆ ಬಂದರೆ ನಲವತ್ತು ಮಂದಿ ಊಟಕ್ಕೆ ಕುಳಿತುಕೊಳ್ಳ ಬಹುದಾದ ಒಳ ಅಂಗಳ; ಅದರಾಚೆ ಎದುರಾಗಿ ದೇವರ ಕೋಣೆ – ಅಡಿಗೆ ಮನೆ ಹಿಂದಕ್ಕೆ ಅಡಿಗೆ ಕೋಣೆಗೆ ಒಪ್ಪಾರು ಹಾಕಿ, ಹಂಗಾಮಿ ಯಾಗಿ ನಿರ್ಮಿಸಿಕೊಂಡಿದ್ದ ಬಚ್ಚಲು ಮನೆ ಚಾವಣಿಗೆಲ್ಲಾ ಮಂಗ ಳೂರು ಹೆಂಚು. ಆದರಾಚೆಗೆ ದಿಂಡು ಕಟ್ಟಿಸದೆ ಹಾಗೆಯೇ ಬಿಟ್ಟು ಬಿಟ್ಟಿದ್ದರು.

ತಮ್ಮದು ಎನ್ನುವ ಮನೆ ಸಿದ್ಧವಾದ ಮೇಲೆ, ಅದು ಹೇಗಿದ್ದರೂ ಸರಿಯೇ – ವೆಂಕಮ್ಮನಿಗೆ ಸಂತೋಷವೇ ಆಯಿತು.

"ಮದುವೆ ಮಾಡಿನೋಡು – ಮನೆ ಕಟ್ಟಿನೋಡು ಅಂತ ಗಾದೆ. ನೀವು ಎರಡನ್ನೂ ಮಾಡಿ ಜಯಿಸಿಕೊಂಡಿರಿ ಸ್ವಾಮಿ" ಎಂಬ ಊರಿ ನವರ ಹೊಗಳಿಕೆಗೆ ಪಾತ್ರರಾದರು ನಾಗಪ್ಪ.

ತಾವು ಮಾಡಿದ್ದಾದರೂ ಏನು? ಮಗನ ಮದುವೆ ಮಾಡಿ

ಬಂದ ವರದಕ್ಷಿಣೆ ಹಣದಿಂದ ಮನೆ ಕಟ್ಟಿಸಿದರು ಅಲ್ಲವೇ ? ಯಾರ ಹಣ, ಎಲ್ಲಿಂದ ಬಂತು, ಹೇಗೆ ಬಂತು, ಏನಾಯಿತು, ಮುಂದೇನಾಗುವುದು ? – ಎಂಬ ವಿಚಾರಗಳೊಂದನ್ನೂ ಯೋಚಿಸಲು ನಾಗಪ್ಪನವರಿಗೆ ವ್ಯವಧಾನವಿರಲಿಲ್ಲ. ಅವರ ಯೋಚನೆ ಬೇರೊಂದು ಕಡೆಗೆ ಹರಿದಿತ್ತು – ಸುಂದುರುವಿನ ಮದುವೆಯ ಯೋಚನೆ ಅದು........

........ಹುಡುಗನಿಗೆ ಎಂ ಎಸ್ಸಿ ಆಯಿತು; ಮದುವೆ ಮಾಡಬೇಕು. ಆದರೆ ಅವನ ಯೋಗ್ಯತೆಗೆ ತಕ್ಕ ಸಂಬಂಧ ಸಿಕ್ಕಬೇಕಲ್ಲ !

ಕೂತಲ್ಲಿ ನಿಂತಲ್ಲಿ ಅವರ ಮನಸ್ಸು ಯೋಚಿಸುತ್ತಿತ್ತು. ಸುಂದರುವಿನ ಮಾವನಾಗಬೇಕಾದವನು ಹೇಗಿರಬೇಕೆಂಬುದನ್ನು ಅವರು ಆಗಲೇ ಕಲ್ಪಿಸಿಕೊಂಡಿದ್ದರು ಅಂತಹವರಾರಾದರೂ ಇದ್ದಾರೆಯೇ ಎಂದು ಅರಸುವುದರಲ್ಲಿಯೇ ತಲ್ಲೀನವಾಗುತ್ತಿತ್ತು ಆ ಮನಸ್ಸು !

ಹಾಗೊಮ್ಮೆ ಯೋಚಿಸುತ್ತಾ ಕುಳಿತಿದ್ದಾಗ–

"ಕಪ್ಪುಹಳ್ಳಿಗೆ ಹೋದ ಶ್ರೀನಿವಾಸ, ನಾಲ್ಕು ದಿನ ಆಯ್ತು, ಇನ್ನೂ ಬರಲಿಲ್ಲ ಅಂದ್ರೆ" ಎಂದು ಕಳವಳದಿಂದ ಕೇಳಿದಳು ವೆಂಕಮ್ಮ.

"ಮಾವನ ಮನೆಯಲ್ಲಿ ಚೆನ್ನಾಗಿ ಉಪಚಾರ ನಡೆಯುತ್ತಿದೆಯೇನೋ. ಭದ್ರವಾಗಿ ಠಿಕಾಣಿ ಹಾಕಿಬಿಟ್ಟಿದ್ದಾನೆ !"

"ನಾಲ್ಕು ದಿನವಾದರೂ ಊರಿನ ಕಡೆಗೆ ಜ್ಞಾನ ಬೇಡವೇ ?"

"ಇವತ್ತೋ ನಾಳೆಯೋ ಬರ್‍ತಾನೆ"

"ಬೇಡ ಬೇಡ ಅಂದರೂ ಸೈಕಲ್ಲಿನಲ್ಲಿ ಹೋದ. ಕಪ್ಪುಹಳ್ಳಿ ಇಲ್ಲಿದೆಯೇ–ಇಪ್ಪತ್ತೋ ಇಪ್ಪತ್ತೈದು ಮೈಲಿಯೋ ದೂರ. ದಾರಿಯಲ್ಲಿ ಏನಾಯಿತೋ ಏನೋ ?"

ತಾಯಿಗೆ ಮಗನ ಚಿಂತೆಯೇ ಆಯಿತು. ಕಳವಳದಿಂದ ಇನ್ನೂ ಎರಡು ದಿನ ಕಾದು ನೋಡಿದರು ಶ್ರೀನಿವಾಸ ಬರಲೇ ಇಲ್ಲ. ಅಗ್ರಹಾರದ ವರದರಾಜಸ್ವಾಮಿಗೆ ಜೋಡು ತೆಂಗಿನಕಾಯಿಯ ಹರಕೆ ಹೊತ್ತು, ಅನ್ನ-ನೀರು ಬಿಟ್ಟು ಕುಳಿತರು ವೆಂಕಮ್ಮ.

ಎಂಟು ದಿನಗಳ ನಂತರ ಊರಿಗೆ ಬಂದ ಶ್ರೀನಿವಾಸ. ಜೊತೆಯಲ್ಲಿ ಬೈಸಿಕಲ್ ಇಲ್ಲ, ಕೈಯಲ್ಲಿ ಗಡಿಯಾರವೂ ಇಲ್ಲ.

ವೆಂಕಮ್ಮನಂತೂ ಅದಾವುದನ್ನೂ ಗಮನಿಸಲಿಲ್ಲ. ಹೊಸದಾಗಿ ಮದುವೆಯಾಗಿದ್ದವನು, ವಯಸ್ಸಿಗೆ ಬಂದವನು, ಎಂಟು ದಿನಗಳಿಂದ ಕಾಣದಾಗಿದ್ದ ಮಗನು ಹಿಂತಿರುಗಿ ಬಂದನೆಂಬುದಷ್ಟೇ ಆಕೆಗೆ ಸಂತೋಷ.

ಶೀನು ಮನೆಗೆ ಬಂದವನು ತಮ್ಮಂದಿರೊಡನೆಯಾಗಲಿ, ತಂಗಿಯೊಡನಾಗಲಿ ಮಾತನಾಡಲಿಲ್ಲ ಕೈಕಾಲು ತೊಳೆದುಕೊಂಡು ಬಂದು, ತಾನೇ ತಟ್ಟೆ ಹಾಕಿಕೊಂಡ ವೆಂಕಮ್ಮ ಮೌನವಾಗಿ ಬಡಿಸಿದರು.

ಅರ್ಧ ಊಟ ಮುಗಿದಾಗ ನಾಗಪ್ಪನವರ ಸವಾರಿ ಚಿತ್ತೈಸಿತು. ಅವರು ಅಂಗಳಕ್ಕೆ ಬಂದಾಗಲೇ ಸುಮಿತ್ರೆ–

"ಅಣ್ಣಾ, ಶೀನಣ್ಣ ಬಂದಿದ್ದಾನೆ" ಎಂದು ಸುದ್ದಿ ತಿಳಿಸಿದಳು.

"ಬಂದನೋ ? ಸರಿ–ಸರಿ"

ಎಂದು ಸುಮ್ಮನಾದರು ನಾಗಪ್ಪ. ಅವರ ದೃಷ್ಟಿ ಅಂಗಳದಲ್ಲೆಲ್ಲಾ ಹರಿದು ನೋಡಿದಾಗ ಬೈಸಿಕಲ್ ಇಲ್ಲದುದು ತಿಳಿಯಿತು.

"ಸೈಕಲ್ ಎಲ್ಲೆ ಚುಮ್ಮಾ ?"

"ನಾನ್ನೋಡ್ಲಿಲ್ಲಪ್ಪ. ನಾಣೀನೋ ಕಿಟ್ಟಣ್ಣನೋ ತಗೊಂಡು ಹೋಗಿರಬಹುದು !"

ಅಷ್ಟರಲ್ಲೇ ಇಬ್ಬರು ಹುಡುಗರೂ – ನಾಣಿ, ಕಿಟ್ಟು ಒಳಗೆ ಬಂದರು.

"ಎಲ್ಲಿ ಅಲೆಯೋಕೆ ಹೋಗಿದ್ರೋ ?"

"ಕೋಟೇಗೆ ಹೋಗಿದ್ವಿ ಅಣ್ಣಾ"

ಎಂದ ಕಿಟ್ಟು. ಹುಡುಗರು ಬಂದ ಸದ್ದು ಕೇಳಿಸಿದೊಡನೆಯೇ ವೆಂಕಮ್ಮನೂ ಅಡಿಗೆ ಮನೆಯಿಂದ ಧಾವಿಸಿ ಬಂದು—

"ಇಬ್ಬರೂ ಪಾಸೇನೋ ?"

ಎಂದು ನಗುಮುಖದಿಂದ ಕೇಳಿದರು.

"ಹೌದಮ್ಮ. ನಾಣಿ ಫಸ್ಟ್‌ಕ್ಲಾಸು ; ನಾನು ಸೆಕೆಂಡ್‌ಕ್ಲಾಸು" ಎಂದ ಕಿಟ್ಟು. ನಾಗಪ್ಪನವರ ಮುಖ ಅರಳಿತು.

"ಭೇಷ್, ಪರವಾಗಿಲ್ಲ ನಿಮ್ಮ ಕೋಟೆ ಹೈಸ್ಕೂಲಿಂದ ಎಷ್ಟು ಜನ ಪಾಸಾಗಿದ್ದಾರೋ ನಾಣಿ ?"

"ಮೂವತ್ತೆರಡು ಜನ ಕಟ್ಟಿದ್ದರು. ಒಟ್ಟು ಇಪ್ಪತ್ತಾರು ಪಾಸು.

ಅದರಲ್ಲಿ ಎರಡು ಫಸ್ಟ್ ಕ್ಲಾಸು. ಆರು ಇ.ಪಿ.ಎಸ್ಸು"

"ಶ್ಯಾಮುನ ಪರೀಕ್ಷೆ ಯಾವಾಗ ತಿಳಿಯುತ್ತೆ ?"

"ಮಿಡ್ಲ್‌ಸ್ಕೂಲ್ ಪರೀಕ್ಷೆ ತಿಳಿಯುವುದು ಜೂನ್ ಏಳನೇ ತಾರೀಕಣ್ಣ. ಇನ್ನೂ ನಾಲ್ಕು ದಿನ ಇವೆ"

ತನ್ನ ಸುದ್ದಿಯೇ ಬರಲಿಲ್ಲವೆಂದು ಕಳವಳಗೊಂಡ ಸುಮಿತ್ರೆ—

"ನೋಡಮ್ಮ, ನನ್ನ ಯಾರೂ ಪ್ಯಾಸಾಯ್ತೇ ಅಂತ ಕೇಳೋಲ್ಲ!" ಎಂದು ವೆಂಕಮ್ಮನ ಸೀರೆಯನ್ನು ಜಗ್ಗುತ್ತಾ ಕೇಳಿದಳು. ಹುಡುಗರೂ ನಾಗಪ್ಪನವರೂ ಅವಳ ಮಾತಿಗೆ ನಕ್ಕರು.

"ಸಾಯಂಕಾಲ ಹುಡುಗರಿಗೆಲ್ಲಾ ಏನಾದರೂ ತಿಂಡಿ ಮಾಡಿ ಕೊಟ್ಟುಬಿಡೆ"

ತುಂಬ ಪ್ರಸನ್ನವದನದಿಂದ ಪತ್ನಿಗೆ ಆಜ್ಞಾಪಿಸಿದರು ನಾಗಪ್ಪ. ಅವರ ಕಣ್ಣು, ತುಟಿ, ಎಲ್ಲ ನಗುವಿನ ಪ್ರವಾಹವನ್ನೇ ಹರಿಸಿದ್ದವು.

ಅಷ್ಟರಲ್ಲಿ ಶ್ರೀನಿವಾಸ ಅಡಿಗೆ ಮನೆಯಿಂದ ಊಟ ಮುಗಿಸಿ ಹೊರಗೆ ಬಂದ. ತಕ್ಷಣ ನಾಗಪ್ಪ—

"ಗಂಟೆ ಎಷ್ಟೋ ಶೀನು ?"

ಎಂದು ಕೇಳಿಬಿಟ್ಟರು. ಶ್ರೀನಿವಾಸನಿಗೆ ಎದೆ ಡವಗುಟ್ಟಿತು. ಅವನು ಉತ್ತರಿಸದೆ ಸುಮ್ಮನಿದ್ದುದನ್ನು ಕಂಡು—

"ಗಡಿಯಾರ ಎಲ್ಲೋ?"

ಎಂದರು ನಾಗಪ್ಪ. ಶ್ರೀನಿವಾಸ ಮೌನವಾಗಿಯೇ ಇದ್ದ.

"ಬೈಸಿಕಲ್ಲೂ ತಂದ ಹಾಗೆ ಕಾಣೆ. ಏನು ಮಾಡಿದೆಯೋ ದಾಂಢಿಗ ?"

ಗಡಿಯಾರವೂ–ಬೈಸಿಕಲ್ಲೂ ಇದ್ದ ಸ್ಥಳವನ್ನು ನೆನಪು ಮಾಡಿ ಕೊಂಡಾಗ ಶ್ರೀನಿವಾಸನ ಕಣ್ಣು ಮಂಜಾಯಿತು.

"ಅವತ್ತು ಇಲ್ಲಿಂದ ಹೋದ ದಿನ ಕಪ್ಪುಹಳ್ಳಿ ದಾರಿಯಲ್ಲಿ ಕತ್ತಲಾಗಿ ಹೋಯಿತಣ್ಣ. ರಾಂಪುರದ ಪ್ಲಾನ್‌ಟೇರ್ಷ ಹತ್ತಿರ ಬಂದಾಗ, ಯಾರೋ ಇಬ್ಬರು ಬಂದು ಗಡಿಯಾರ–ಬೈಸಿಕಲ್ಲು ಕಿತ್ತು ಕೊಂಡು, ಬೆನ್ನಿನ ಮೇಲೆ ಗುದ್ದಿಗುದ್ದಿ ಕೆಳಗೆ ಬೀಳಿಸಿಬಿಟ್ಟು ಓಡಿ ಹೋದರಣ್ಣ."

ಶ್ರೀನಿವಾಸ ಅಭಿನಯಪೂರ್ವಕವಾಗಿ ಹೇಳಿ, ಬೆನ್ನು ಮುಟ್ಟಿ ನೋಡಿಕೊಂಡು 'ಅಹಾಹಾ!' ಎಂದು ನೋವನ್ನು ಸೂಚಿಸಿದ.

ಆದರೆ ನಡೆದ ಸಂಗತಿಯನ್ನು ಮರೆಯುವುದು ತನಗೆ ಸಾಧ್ಯ ವಿದೆಯೇ ? ಕಪ್ಪುಹಳ್ಳಿಗೆಂದು ಹೊರಟು ಬೆಂಗಳೂರಿಗೆ ಬಂದುದು, ಮೊದಲು ಗಡಿಯಾರವನ್ನೂ ಆಮೇಲೆ ಬೈಸಿಕಲ್ಲನ್ನೂ ಮಾರ್ವಾಡಿ ಅಂಗಡಿಯಲ್ಲಿ ಒತ್ತೆಯಿಟ್ಟು ಹಣ ಪಡೆದುದು, ತುಳಸೀ ತೋಟದ ದೇವಸ್ಥಾನದ ಬಳಿ ಪೂರ್ಣಯ್ಯನವರ ಛತ್ರದ ಕಡೆಗೆ ಮುಖಮಾಡಿ ಕುಳಿತು ಕಾಯುತ್ತಿದ್ದ ಹುಡುಗಿಯೊಬ್ಬಳಿಗೆ ರೂಪಾಯಿ ತೋರಿಸಿ, ಅವಳನ್ನೆಳೆದುಕೊಂಡು ನಾಲ್ಕುದಿನ ಸಿನಿಮಾ ನೋಡಿ, ಅವಳ ಮನೆ ಯಲ್ಲೇ ಎಂಟು ದಿನ ಕಳೆದುದು. ಹಣ ಮುಗಿದ ನಂತರ ಆ ಹುಡುಗಿ ಪತ್ತೆ ಇಲ್ಲದೆ ಹೊರಟುಹೋದುದು. ಕೊನೆಗೆ ಊರೇ ಗತಿಯೆಂದು ತಾನು ಅಗ್ರಹಾರಕ್ಕೆ ಬಂದುದು – ಇವೆಲ್ಲವನ್ನೂ ಮರೆಯುವುದು ಸಾಧ್ಯವೇ ?

ಆದರೆ ತಂದೆಯ ಬಳಿ ಇದನ್ನೆಲ್ಲಾ ಹೇಳುವುದಕ್ಕಾಗುತ್ತದೆಯೇ? ಅದೊಂದು ಧನ ಪಿಶಾಚಿ !....ಎಂದುಕೊಂಡ ಶ್ರೀನಿವಾಸ.

"ಎಲ್ಲ ಬರೀ ಸುಳ್ಳಿನ ಕಂತೆ" ಎಂದರು ನಾಗಪ್ಪ.

"ಇಲ್ಲಣ್ಣ, ನಿಜವಾಗಿಯೂ ನಡೆದದ್ದು. ಅವತ್ತು ನನ್ನ ಪ್ರಾಣವೇ ಹೋಗಬೇಕಾಗಿತ್ತು. ಏನೋ ದೇವರ ದಯೆಯಿಂದ ಉಳಿದುಕೊಂಡೆ"

ಶ್ರೀನಿವಾಸನ ಮಾತುಗಳನ್ನು ನಂಬುವಂತೆಯೂ ಇರಲಿಲ್ಲ – ನಂಬದಿರುವಂತೆಯೂ ಇರಲಿಲ್ಲ !

ಅವನ ಮಾತು ಕೇಳುತ್ತಾ, ಹುಡುಗರೆಲ್ಲಾ ಒಬ್ಬರ ಮುಖ ವನ್ನು ಒಬ್ಬರು ನೋಡುತ್ತಾ ಗಾಬರಿಯಿಂದ ನಿಂತಿದ್ದರು.

"ಏಕೆ ಉಳಿದುಕೊಂಡೆಯೋ ನಾ ಕಾಣೆ, ಭೂಮಿಗೆ ಭಾರವಾಗಿ, ತಿಂಡಿಗೆ ದಂಡವಾಗಿ" ಎಂದರು ನಾಗಪ್ಪ. ವೆಂಕಮ್ಮ ಕಣ್ಸನ್ನೆಮಾಡಿ, ಶ್ರೀನಿವಾಸನಿಗೆ ಅಲ್ಲಿಂದ ಹೊರಟುಹೋಗಲು ಸೂಚಿಸಿದಳು. ಅವನು ತಲೆತಗ್ಗಿಸಿಕೊಂಡು ಬೀದಿಯ ಕಡೆಗೆ ಹೆಜ್ಜೆ ಇಟ್ಟ.

"ಬಾರೇ ಚುಮ್ಮಿ. ಒಳಗೆ ಒಂದಿಷ್ಟು ಕೆಲಸ ಇದೆ"

ಎನ್ನುತ್ತಾ ವೆಂಕಮ್ಮನೂ ಸುಮಿತ್ರೆಯನ್ನು ಕರೆದುಕೊಂಡು ಅಡಿಗೆಯ ಮನೆಯ ಕಡೆಗೆ ನಡೆದರು.

ನಾಣಿಯೂ – ಕಿಟ್ಟುವೂ ಇನ್ನೂ ತಂದೆಯ ಮುಂದೆಯೇ ನಿಂತಿದ್ದರು

ಕಿಟ್ಟು ದೊಡ್ಡವನಾದರೂ ಕುಳ್ಳು ಮಂದಬುದ್ಧಿ. ಯಾರು ಹೇಗೆ ಹೇಳಿದರೆ ಹಾಗೆ ಕೇಳುವವನು. ನಾಣಿಯುಮೂ ಸಾಧು ಸ್ವಭಾವವೇ. ಅವನು ಯಾರೊಡನೆಯೂ ಹೆಚ್ಚು ಮಾತನಾಡುವವನಲ್ಲ ವಯಸ್ಸಿನಲ್ಲಿ ಕಿಟ್ಟುವಿಗಿಂತ ಚಿಕ್ಕವನಾದರೂ ಉದ್ದ – ದಪ್ಪಗಳಲ್ಲಿ ಅವನೇ ದೊಡ್ಡವನಂತೆ ಕಾಣುತ್ತಿದ್ದ.

ಗಡಿಯಾರ–ಬೈಸಿಕಲ್ಲುಗಳ ಚಿಂತೆಯಲ್ಲಿ ಮೌನವಾಗಿದ್ದ ನಾಗಪ್ಪನವರು ಕಿಟ್ಟು – ನಾಣಿಯರನ್ನು ಮಾತನಾಡಿಸಲಿಲ್ಲ ಮುಂದೇನು ಮಾಡಬೇಕೆಂಬ ವಿಚಾರವನ್ನು ಕುರಿತು ತಂದೆ ಏನು ಹೇಳುವರೋ ಎಂದು ಕಾದಿದ್ದ ಇಬ್ಬರಿಗೂ ನಿರಾಶೆಯಾಯಿತು.

ಮರುದಿನ ರಂಗಯ್ಯನವರು ಆಗಮಿಸಿದರು ಅವರು ಬಂದಾಗ ನಾಗಪ್ಪನವರು ಮನೆಯಲ್ಲಿರಲಿಲ್ಲ. ವೆಂಕಮ್ಮನೇ ಚಾಪೆ ಹಾಕಿ ಉಪಚಾರ ಹೇಳಿದಳು. ಕ್ಷೇಮಸಮಾಚಾರದ ಮಾತಾಯಿತು.

"ನಾಗರತ್ನಾನ ಕಳಿಸೋದಿಲ್ವೇ ?"

"ಅದಕ್ಕೇ ಬಂದಿದ್ದೇನಮ್ಮ. ಈ ತಿಂಗಳೇ ಒಂದು ಶುಭದಿನ ನೋಡಿ ನಿಷೇಕದ ಲಗ್ನ ಇಡಿಸಿಬಿಡುತ್ತೇನೆ. ನಿಮ್ಮ ಸೊಸೆಯನ್ನು ನೀವು ಕರೆದುಕೊಂಡು ಬನ್ನಿ !"

ಅಷ್ಟರಲ್ಲಿ ನಾಗಪ್ಪನವರು ಬಂದರು. ಅಪರೂಪಕ್ಕೆ ಆಗಮಿಸಿದ ಬೀಗರ ಮುಖ್ಯಸ್ಥರೊಡನೆ ಮಾತುಕತೆಯಾಯಿತು ಮುಂದಿನ ಶುಕ್ರವಾರವೇ ಒಳ್ಳೆಯ ಲಗ್ನವಿರುವುದೆಂದೂ, ಆ ದಿನವೇ ಪ್ರಸ್ತದ ಏರ್ಪಾಟು ಮಾಡುವುದಾಗಿಯೂ ರಂಗಯ್ಯನವರು ಹೇಳಿದರು.

"ಹಾಗೇಮಾಡಿ" ಎಂದರು ನಾಗಪ್ಪ.

ಬೆಳಗಿನ ಬಸ್ಸಿನಲ್ಲಿ ಬಂದಿದ್ದ ರಂಗಯ್ಯ ಸಂಜೆಯ ಬಸ್ಸಿನಲ್ಲಿ ಕಪ್ಪುಹಳ್ಳಿಗೆ ತೆರಳಿದರು

ಅವರು ಹೋದ ಮೇಲೆ—

"ಆ ಹುಡುಗಿ ಮನೆಗೆ ಬಂದ ಮೇಲಾದರೂ ಇವನಿಗೆ ಬುದ್ಧಿ ಬರುತ್ತದೆಯೋ ಇಲ್ಲವೋ ?" ಎಂದರು ನಾಗಪ್ಪ.

"ಹುಡುಗಿಯೂ ತುಂಬ ಜಾಣೆಯ ಹಾಗೆ ಕಾಣುತ್ತಾಳೆ. ತನ್ನ ಗಂಡನನ್ನು ಸರಿಯಾದ ದಾರಿಗೆ ತರದೆ ಇರುತ್ತಾಳೆಯೇ ?"

"ಅವಳೇನೋ ಜಾಣೆ – ಇವನು ಮಾತ್ರ ಕೋಣ ! 'ಎತ್ತು ಏರಿಗೆಳೆದರೆ ಕೋಣ ನೀರಿಗೆಳೆಯಿತು' ಅಂದ ಹಾಗೆ ಆದರೆ ಏನು ಮಾಡುವುದು ?"

"ದೈವೇಚ್ಛೆ ಇದ್ದ ಹಾಗೆ ಆಗಲಿ !" ಎಂದರು ವೆಂಕಮ್ಮ.

ಮುಂದಿನ ಶುಕ್ರವಾರ ಹಾಗೆ ಆಯಿತು ! ದೈವೇಚ್ಛೆ ಇದ್ದ ಹಾಗೆ !

ಆ ರಾತ್ರಿ ಆರತಿಮಾಡಿ, ಪ್ರಸ್ಥದ ಕೋಣೆಗೆ ಗಂಡು–ಹೆಣ್ಣನ್ನು ಬಿಟ್ಟು ಬಾಗಿಲೆಳೆದುಕೊಂಡಳು ರಾಜಮ್ಮ. ಹಗಲೆಲ್ಲಾ ನಾಗರತ್ನ ನಾಗಿಣಿಯೇ ಆಗಿದ್ದಳು ! ಯಾರು ಮಾತನಾಡಿಸಿದರೂ ಸಿಟ್ಟಿನ ಉತ್ತರವೇ. ಎಲ್ಲರ ಕಣ್ಣು ತಪ್ಪಿಸಿ, ಶ್ರೀನಿವಾಸ ಆ ಮಧ್ಯಾಹ್ನ ಅವಳ ಕೈಹಿಡಿದಾಗ, ಕೈ ಕೊಸರಿಕೊಂಡು, ತಿರಸ್ಕಾರದಿಂದ ಅವನಕಡೆಗೆ ನೋಡಿ ಮೂಗು ಮುರಿದು, ಸ್ವಲ್ಪ ದೂರ ಹೋದ ಮೇಲೆ 'ಥೂ' ಎಂದು ಅವನಕಡೆಗೆ ಉಗುಳಿ ಹೊರಟುಹೋಗಿದ್ದಳು. ರಂಗಯ್ಯ ನವರನ್ನು ಕಂಡಾಗ, ಮುಖ ವಕ್ರಮಾಡಿ, ನೆಟಿಕೆ ಮುರಿದಿದ್ದಳು. ರಾಜಮ್ಮನನ್ನು ನೋಡಿ 'ನಿನ್ನಂಥ ಮಾನವಿಲ್ಲದ ಮಾರಿ ಹೊಟ್ಟೆಯಲ್ಲಿ ಹುಟ್ಟಿ ನಾನೂ ಮಾನ ಮಾರಿಕೊಂಡೆ' ಎಂದು ಅವಳ ಮುಖಕ್ಕೆ ತಿವಿದಳು. ಮೈಸೂರಿನಿಂದ ಬಂದ ಚಿಕ್ಕಪ್ಪನನ್ನು ದುರುಗುಟ್ಟಿಕೊಂಡು ನೋಡಿದಳು. ಅವಳಿಗೆ ಎಲ್ಲರ ಮೇಲೆಯೂ ಕ್ರೋಧ ಕೆರಳಿತ್ತು. ಅವಳ ಮನಸ್ಸಿನ ಮುಂದೆ ಒಂದೊಂದೇ ಸ್ಮೃತಿ ಚಿತ್ರ ಬಂದು ನಿಂತಿತು.

ಒಂದು ರಾತ್ರಿ—

ತನಗಿನ್ನೂ ನಿದ್ರೆ ಬಂದಿರಲಿಲ್ಲ. ಆಗ ತನ್ನ ತಾತ ರಂಗಯ್ಯ ಮೆಲ್ಲನೆ ಬಂದು ತನ್ನ ತಾಯಿಯ ಪಕ್ಕದಲ್ಲಿ ಮಲಗಿದರು. ರೋಗ ಗ್ರಸ್ಥನಾದ ತಂದೆ ಹಾಸಿಗೆ ಹಿಡಿದು ಮಲಗಿರುವಾಗ ಅವರಿಗೇನು ಅಡ್ಡಿಯೇ ಆತಂಕವೇ ? ದಿನವಹಿ ನಡೆಯುತ್ತಿತ್ತು ಹಾಗೆಯೇ ವರ್ಷ ವರ್ಷವೂ ಯಂತ್ರದಂತೆ ಹೆರುತ್ತಿದ್ದಳು ತಾಯಿ – ಹೆಣ್ಣುಮಕ್ಕಳ

ಹಿಂಡು. ಸತ್ತವು ಎಷ್ಟೋ – ಬದುಕಿದವು ಮಾತ್ರ ಎಂಟು !

ತಾನು ಮೈನೆರೆದು ಒಂದು ವಾರದ ನಂತರ ತಾಯಿ ತನ್ನನ್ನು ಹತ್ತಿರಕ್ಕೆ ಕರೆದು ಹೇಳಿದ ಮಾತು :

"ಹೋಗೆ, ಅವನು ಕರೆಯುತ್ತಾನೆ"

"ಉಹ್ಞ, ನಾ ಹೋಗೊಲ್ಲಮ್ಮ"

"ಹಾಗೆ ಹೇಳಬಾರ್ದು ಹೋಗಮ್ಮ"

ಬಲವಂತವಾಡಿ ತಳ್ಳಿದಳು ತಾಯಿ. ಗುರುತಿಲ್ಲದ 'ಅವನು' ತನ್ನನ್ನು ಹಿಡಿದುಕೊಂಡು ದಾಹ ತೀರಿಸಿಕೊಂಡ. ಅಂದಿನಿಂದ ಅವನ ಚರಣದಾಸಿಯಾಗಬೇಕಾಯಿತು ತಾನು. ಅನಂತರ ಇನ್ನೊಬ್ಬ, ಮತ್ತೊಬ್ಬ–ಎಷ್ಟೋ ಮಂದಿ ತನ್ನ ದೇಹವನ್ನು ಸವಿದವರು ! ಪಟ್ಟಣ ವಲ್ಲಿ ಕಸುಬು ಮಾಡುವ ವೇಶ್ಯೆಯೂ ಅಷ್ಟೊಂದು ಮಂದಿಗೆ ತನ್ನ ದೇಹವನ್ನು ಮಾರಿಕೊಂಡಿರಲಾರಳು ! ಅದರ ಫಲವಾಗಿ ಎರಡುಸಾರಿ ಗರ್ಭ ಧರಿಸಬೇಕಾಯಿತು. ಅದನ್ನು ತಾಯಿಯೇ ಸೊಪ್ಪು–ಸೊದೆಗಳ ಕಷಾಯ ಕುಡಿಸಿ ಇಳಿಸಿದಳು ಆ ಕಷ್ಟವನ್ನು ಪಡಲಾರದೆ, ಒಂದು ದಿನ ತಾನು ತಾಯಿಯನ್ನು ಕೇಳಿದಾಗ—

"ಅಮ್ಮ, ಏಕೆ ಇಷ್ಟು ಕಷ್ಟ ಪಡಬೇಕು?"

"ನೀನಿನ್ನೂ ಪ್ರಪಂಚ ತಿಳಿಯದವಳಮ್ಮ"

"ಇಷ್ಟೊಂದು ಹಣ ಬಂದಿತಲ್ಲ. ಅದೆಲ್ಲ ಏನಾಯಿತು ? ಒಡವೆ ಮಾಡಿಸಲಿಲ್ಲ - ವಸ್ತ್ರ ತೆಗೆಯಲಿಲ್ಲ"

"ಹೌದು ಅಮ್ಮಯ್ಯ, ಆದಕ್ಕೆಲ್ಲಾ ಖರ್ಚುಮಾಡಿಬಿಟ್ಟರೆ, ಮುಂದೆ ನಡೆಯಬೇಕಲ್ಲಮ್ಮ"

"ಅಷ್ಟು ಹಣ ಕೂಡಿಟ್ಟು ಏನು ಮಾಡುತ್ತೀಯಮ್ಮ ?"

"ಎಂಟು ಜನ ನಿನ್ನ ಹಾಗೆಯೇ ಹುಟ್ಟಿದ್ದಾರಲ್ಲ ನೋಡು, ಹೆಣ್ಣು ಮಕ್ಕಳು ಇವತ್ತು ಚಿಕ್ಕವಾಗಿ ತೋರಿದರೆ ನಾಳೆ ಲಂಗತೊಡಿಸ ಬೇಕು. ನಾಡಿದ್ದು ಸೀರೆ ಉಡಿಸಬೇಕು. ಬಹುಬೇಗ ಬೆಳೆದುಬಿಡು ತ್ತವೆ. ಬೆಳೆದ ಹುಡುಗಿಯರಿಗೆ ಮದುವೆಯಾಗದಿದ್ದರೆ ಚೆನ್ನಾಗಿರು ತ್ತದೆಯೇ ? ಮದುವೆ ಮಾಡಬೇಕೆಂದರೆ ಗಂಡು ಸುಮ್ಮನೆ ಬರು ತ್ತಾನೆಯೇ ? ಅವನಿಗೆ ವರದಕ್ಷಿಣೆ ಕೊನೆಯಪಕ್ಷ ಒಂದು ಸಾವಿರ,

ಮದುವೆಯ ಖರ್ಚು ಕಮ್ಮಿ ಎಂದರೂ ಒಂದು ಸಾವಿರ. ಹೀಗೆ ಎರಡೆರಡು ಸಾವಿರ ಒಬ್ಬೊಬ್ಬಳಿಗೆ ಖರ್ಚಾದರೆ ಎಂಟು ಜನಕ್ಕೂ ಎಷ್ಟಾಯಿತು? ಹದಿನಾರು ಸಾವಿರ ಬೇಕಲ್ಲ! ಎದೆ 'ಝುಗ್' ಎನ್ನುವುದಿಲ್ಲವೇ?"

"ಅದಕ್ಕೋಸ್ಕರ ಇಟ್ಟಿದ್ದೀಯೇನಮ್ಮ?"

"ಹೌದಮ್ಮ."

"ಹೀಗೆ ಮಾನ ಮಾರಿಕೊಂಡು ಬಾಳುವುದಕ್ಕಿಂತ ಹಾಳು ಭಾವಿಗೆ ಬಿದ್ದು ಸಾಯುವುದು ಮೇಲಲ್ಲವೇ?"

"ಅದೂ ಪಾಪವೆನ್ನುತ್ತಾರಲ್ಲ! ನಮ್ಮಂತಹ ಬಡವರು ಬದುಕಿದ್ದರೂ ಪಾಪ, ಸತ್ತರೂ ಪಾಪ!!"

ಆ ಮಾತು ಕೇಳಿ ನಗು ಬಂದಿತ್ತು ತನಗೆ. ತಾಯಿಯ ಮಾತಿಗೆ ಪ್ರತಿಯಾಡದೆ ಬಂದವರಿಗೆಲ್ಲಾ ಸೆರಗು ಹಾಸಬೇಕಾಯಿತು.

ಗಂಡು ನೋಡಲು ಅಗ್ರಹಾರಕ್ಕೆ ಹೋದಾಗ, ತಾಯಿಯ ಮಾತು ನಿಜವೆನಿಸಿತು. 'ವರದಕ್ಷಿಣೆ-ವರದಕ್ಷಿಣೆ' ಎಂದು ಬೊಬ್ಬೆಯಿಟ್ಟು ನಾಗಪ್ಪ ನಾಲಿಗೆ ಉದ್ದ ಮಾಡಿದ್ದರು.

ಗಂಡನಾಗಲಿದ್ದ ಕ್ರೂರಜಂತು ಹಸಿದಿತ್ತು.

ಮದುವೆಯ ದಿನ ಮಾಂಗಲ್ಯಧಾರಣೆಯಾಗುವಾಗ ನಡೆದ ರಾದ್ಧಾಂತ! ಅಬ್ಬಾ!!

ಒಂದೆರಡು ಬಾರಿ ಗಂಡನಾದವನು ಹಸಿದು, ತನ್ನ ಮನೆಗೆ ಬಂದು ನಾಲ್ಕಾರು ದಿನಗಳನ್ನು ಕಳೆದು, ಹಿಂತಿರುಗುವಾಗ ಕೈಗೆ ಸಿಕ್ಕಿದ ಬೆಳ್ಳಿಯ ಲೋಟ, ಚಿನ್ನದುಂಗುರ ಹಾರಿಸಿಕೊಂಡು ಹೋದುದನ್ನು ಯಾರು ಬಲ್ಲರು?

ತನ್ನ ಶೀಲದ ಬಗ್ಗೆ ಜಾತಿಯೆಲ್ಲಾ ಛೀಳಿಟ್ಟಾಗ ಕಾಯ್ದವರಾರು?

ಇನ್ನೊಂದು ಬಾರಿ, ಕಾತನೆಂಬ ಮೃಗ ಊರಿನಲ್ಲಿಲ್ಲದಿದ್ದಾಗ ತನ್ನ ತಾಯಿ ಯಾವನೊಡನೆಯೋ ಮಲಗಿದ್ದಳು. ಅವಳಿಗೆ ಅವನ ಒತ್ತಡದಿಂದ ಕಣ್ಣೀರೇ ಬರುವಂತಾಗಿತ್ತು. ಸಾಧ್ಯವಿದ್ದಷ್ಟು ಹೊತ್ತು ಸಹಿಸಿಕೊಂಡಳು ಅನಂತರ ತನ್ನನ್ನು ಕರೆದು, ಅವನನ್ನು ತೃಪ್ತಿಪಡಿಸಲು ಹೇಳಿದಳು. ಅಬ್ಬಾ! ನರಕ....ನರಕ!!

"ಅಮ್ಮಾ ಈ ಸಂಪಾದನೆ ಸಾಕು ಕಣೆ"

"ಸಾಲದು ಮಗು !"

"ಈ ನರಕ ನಾನು ಸಹಿಸಲಾರೆ ಕಣೆ"

"ಉಳಿದ ಏಳು ಜನ ಹೆಣ್ಣುಮಕ್ಕಳಿಗೂ ಸ್ವರ್ಗ ಸಿಕ್ಕಬೇಕಾದರೆ ನಾವು ಈ ನರಕ ಅನುಭವಿಸಬೇಕು ನಾಗರತ್ನ"

"ಅಮ್ಮ, ಈಗ ಎಷ್ಟು ಕೂಡಿಸಿಟ್ಟಿದ್ದೀಯೋ ?"

ಅವಳು ಹೇಳಲಿಲ್ಲ ತನಗೆ ಗೊತ್ತಿತ್ತು - ಹನ್ನೆರಡು ಸಾವಿರ ರೂಪಾಯಿ ಅವಳ ಹತ್ತಿರವಿತ್ತು! ತಾತನೇ ಅದನ್ನು ಬ್ಯಾಂಕಿನಲ್ಲಿ ಇಟ್ಟಿದ್ದರು.

ಅನಂತರವೂ ವೃತ್ತಿ ನಡೆಯುತ್ತಾ ಬಂದಿತು. ಒಕ್ಕಲೂರಿನ ಸಾಹುಕಾರರಾದ ಸಾಹೇಬರು ಒಂದು ದಿನ ಮನೆಗೆ ಬಂದರು. ಆ ರಾತ್ರಿಯಿಂದ ಪ್ರತಿದಿನ ಅವರ ಸೇವೆ ಮಾಡಬೇಕಾಯಿತು. ಅವರು ಖಾಯಂ ಗಿರಾಕಿಯಾದರು. ಅಮ್ಮನ ಖಜಾನೆ ತುಂಬಿತು

ನಿನ್ನೆ ರಾತ್ರಿಯೂ ಬಂದಿದ್ದರು. ತಾನು ಪ್ರಸ್ತ ಮಾಡಿಕೊಂಡು ಗಂಡನ ಮನೆಗೆ ಹೋಗುತ್ತೇನೆಂಬ ವಿಷಯ ಅವರಿಗೂ ತಿಳಿಯಿತು. ಬೇಡವೆಂದು ತಡೆದರು ಅವರು. ಆದರೆ ಹೋಗದಿರುವುದು ಸಾಧ್ಯವೇ?

ಈ ದಿನ ಪ್ರಸ್ತವಂತೆ! ಹಹ್ಹಹ್ಹ!! ತನಗೂ ಹೊಸದಲ್ಲ - ತನ್ನ ಗಂಡನಿಗೂ ಹೊಸದಲ್ಲ ಈ ಅನುಭವ!!!

ಇತ್ತ ಕೈಹಿಡಿದ ಗಂಡ – ಅತ್ತ ಖಾಯಂ ಗಿರಾಕಿ ಸಾಹೇಬರು.

ಒಂದು ಕಿತ್ತು ತಿನ್ನುವ ಹದ್ದು, ಇನ್ನೊಂದು ರಕ್ತ ಹೀರುವ ಕಲ್ಪವೃಕ್ಷ ಎರಡೂ, ಪರಂಪರೆಯಿಂದ ಹರಿದುಬರುತ್ತಿರುವ ವಿಷ ವಾಹಿನಿಯಿಂದ ಬೆಳೆದ ವಿಷವೃಕ್ಷಗಳು. ಎತ್ತ ತಿರುಗಿದರೂ ಹಾನಿ, ಮಾನ ಹಾನಿ, ಪ್ರಾಣ ಹಾನಿ, ಸರ್ವಹಾನಿ !

ಇದಕ್ಕಿಲ್ಲಾ ವಿಮೋಚನೆ....?

ವಿಮೋಚನೆಯಾಗುವ ದಾರಿ ಹೊಳೆದಿತ್ತು........

ವಿಟನಂತೆ ಸಿಂಗರಿಸಿಕೊಂಡು ಮಲಗಿದ್ದ ಶ್ರೀನಿವಾಸ. ಯಂತ್ರ ದಂತೆ ಹಾಲು ತಂದು ಕೊಟ್ಟ ನಾಗರತ್ನ ಆ ಬೆಳ್ಳಿಯ ಲೋಟವನ್ನು ತನ್ನ ಕಣ್ಣು ಮುಂದೆ ಹಿಡಿದು ದಿಟ್ಟಿಸಿ, ಶ್ರೀನಿವಾಸನ ಮುಖದ

ತುತ್ತಿರ ಸುಖವಿಟ್ಟು ಕಿಲಕಿಲನೆ ನಕ್ಕಳು ಸಂತೋಷದಿಂದ ನಗು ತ್ತಿರುವಳೆಂದು ಭಾವಿಸಿದ ಶ್ರೀನಿವಾಸ ಮುಗುಳ್ನಗು ನಗುತ್ತಲೇ ಹಾಲು ಕುಡಿದು ಮುಗಿಸಿದ. ಅನಂತರ ಮಾತಿಲ್ಲದೆ, ದೀಪವಾರಿಸಿ, ವಿವಸ್ತ್ರಳಾಗಿ ಶ್ರೀನಿವಾಸನ ಪಕ್ಕದಲ್ಲಿ ಮಲಗಿದಳು. ಅರ್ಧರಾತ್ರಿಯ ವರೆಗೂ ನಿದ್ರೆಯಿಲ್ಲದೆ ಇಬ್ಬರೂ ಮಲಗಿದ್ದರು. ನಾಗರತ್ನ ಕಿಟಕಿಯ ಕಡೆಗೇ ನೋಡುತ್ತಿದ್ದಳು. ಶ್ರೀನಿವಾಸ ಎದುರು ಗೋಡೆಯ ಕಡೆಗೆ ನೋಡುತ್ತಿದ್ದ. ಚೂರಿಯನ್ನು ಹಿಡಿದ ಕೈ ನೆರಳು ಗೋಡೆಯ ಮೇಲೆ ಹರಿದಾಡಿತು ಬೆಚ್ಚಿದ ಶ್ರೀನಿವಾಸ ತಟ್ಟನೆ ನಾಗರತ್ನಳ ಅಪ್ಪುಗೆಯನ್ನು ಬಿಡಿಸಿಕೊಂಡು ಎದ್ದು ಕುಳಿತ ಅವಳೂ ಗಾಬರಿ ಕೊಂಡು ಎದ್ದು ಕುಳಿತಳು ಇಬ್ಬರೂ ಒಬ್ಬರನ್ನೊಬ್ಬರು ಹಿಡಿದು ಕೊಂಡು, ಕಿಟಕಿಯ ಬಳಿಗೆ ಬಂದು, ತುಸು ದೂರದಲ್ಲಿಯೇ ನಿಂತು ಮೆಲ್ಲನೆ ಕಿಟಕಿಯ ಬಾಗಿಲುಗಳನ್ನು ಮುಚ್ಚಿ ಭದ್ರಪಡಿಸಿದರು. ನಂತರ ಬಂದು ಮಲಗಿಕೊಂಡರು ಶ್ರೀನಿವಾಸನಿಗೆ ಬಹಳ ಹೊತ್ತಿನ ನಂತರ ನಿದ್ರೆ ಬಂದಿತು ನಾಗರತ್ನ ಎದ್ದು ಸೀರೆಯುಟ್ಟು, ತಲೆ ಗೂದಲು ಸರಿಪಡಿಸಿಕೊಂಡಳು. ಶ್ರೀನಿವಾಸನ ಶಲ್ಯವನ್ನು ತಲೆಗೆ ಸುತ್ತಿಕೊಂಡಳು ಸದ್ದಾಗದಂತೆ ಬಾಗಿಲು ತೆರೆದುಕೊಂಡು ಆ ಕಾಳ ರಾತ್ರಿಯಲ್ಲಿ ಹೊರಗೆ ಹೊರಟುಹೋದಳು.

ಸೂರ್ಯೋದಯವಾದಾಗಲೇ ಎಲ್ಲರಿಗೂ ವಿಷಯ ತಿಳಿಯಿತು.

"ನಾಗರತ್ನ ಓಡಿಹೋದಳು – ನಾಗರತ್ನ ಓಡಿಹೋದಳಂತೆ !"

ಎಂಬ ಗುಸು ಗುಸು ಎಲ್ಲರ ಬಾಯಲ್ಲಿಯೂ ಕೇಳಿ ಬರುತ್ತಿತ್ತು. ಶ್ರೀನಿವಾಸನಂತೂ ಯಾರಿಗೂ ಮುಖ ತೋರಿಸಲಿಲ್ಲ ನಾಗಪ್ಪನವರ ಮುಖ ಕಪ್ಪಿಟ್ಟಿತು. ರಾಜಮ್ಮ ಅಳುತ್ತ ಕುಳಿತಿದ್ದಳು.

ಒಂಭತ್ತು ಗಂಟೆಯ ವೇಳೆಗೆ ಮಾಸ್ತಿಯಿಂದ ಬಂದ ಭಗವಾನ್ ಬಸ್ಸು ಹಾರನ್ ಮಾಡಿ ನಾಗಪ್ಪನವರ ಪರಿವಾರವನ್ನು ಕರೆಯಿತು. ಅವರು ಸಂಸಾರ ಸಮೇತ ಬಸ್ಸು ಹತ್ತಿದರು

ಬಸ್ಸು ಹೊರಡುವ ಕೊನೆಯ ಗಳಿಗೆಯಲ್ಲಿ—

"ನಾಗಪ್ಪನವರೆ, ಎಲ್ಲಾ ಮರೆತು ಬಿಡಬೇಕು ಸ್ವಾಮಿ. ನಿಮಗಿಷ್ಟವಿದ್ದರೆ ಎರಡು ಸಾವಿರ ವರದಕ್ಷಿಣೆ ಕೊಟ್ಟು ನನ್ನ ಎರಡನೆ

ಮೊಮ್ಮಗಳನ್ನು ಶ್ರೀನಿವಾಸನಿಗೆ ಧಾರೆಯೆರೆಯುತ್ತೇನೆ"

ಎಂದರು ರಂಗಯ್ಯ. ನಾಗಪ್ಪನವರು ಉತ್ತರ ಹೇಳಲಿ ಎಂದು ಕಾಯದೆ, ಭಗವಾನ್ ಬಸ್ಸು ವೇಗವಾಗಿ ಹೊರಟುಬಿಟ್ಟಿತು.

೬

ದುಃಖದಿಂದ ಅಗ್ರಹಾರಕ್ಕೆ ಮರಳಿದ ನಾಗಪ್ಪನವರ ಸಂಸಾರಕ್ಕೆ ಒಂದು ಸಂತೋಷದ ಸುದ್ದಿ ಕಾದಿತ್ತು. ಅದು ಸುಂದರುವಿನ ಕಾಗದ

'......ಎಂ. ಎಸ್‌ಸಿ. ಪರೀಕ್ಷೆಯಲ್ಲಿ ನನಗೆ ಫಸ್ಟ್‌ಕ್ಲಾಸಿನಲ್ಲಿ ಪಾಸಾಯಿತು' ಎಂದು ಬರೆದಿದ್ದ.

ಕಪ್ಪುಹಳ್ಳಿಯಲ್ಲಿ ಕಪ್ಪು ಬಳಿಸಿಕೊಂಡು ಬಂದಿದ್ದ ನಾಗಪ್ಪನವರ ಮುಖ ಅಗ್ರಹಾರದಲ್ಲಿ ಬೆಳ್ಳಗಾಯಿತು. ಅವರ ಅಪಮಾನದ ದುಃಖ ವೆಲ್ಲಾ ಆ ಸುದ್ದಿಯಿಂದ ಕ್ಷಣಮಾತ್ರದಲ್ಲಿ ಪರಿಹಾರವಾಗಿ ಅವರು ಹಸನ್ಮುಖಿಗಳಾದರು.

ವೆಂಕಮ್ಮನಿಗೂ ಆ ಸುದ್ದಿಯಿಂದ ಸಂತೋಷವಾಗಿದ್ದರೂ, ಆಕೆಯ ಮನಸ್ಸು ಬಹುದೂರದ ಭವಿಷ್ಯತ್ತನ್ನು ಕುರಿತು ಯೋಚಿಸು ತ್ತಿತ್ತು. ಇನ್ನು ಸುಂದರುವಿನ ಹಣೆಯ ಬರಹ ಹೇಗಿದೆಯೋ – ಎಂದು ಕಳವಳಗೊಂಡಿದ್ದಳು ಆಕೆ ವರದಕ್ಷಿಣೆಗೆ ಆಸೆಪಟ್ಟು ಅವನಿಗೆ ಎಂಥ ಹೆಣ್ಣನ್ನು ಕಟ್ಟುತ್ತಾರೋ ತನ್ನ ಪತಿದೇವರು ತಮ್ಮ ವಂಶ ದಲ್ಲೆಲ್ಲಾ ಅವನೊಬ್ಬನೇ ವಿದ್ಯಾವಂತ. ಅವನಾದರೂ ಸುಖವಾಗಿ ಬಾಳಬೇಕು – ಎಂದುಕೊಂಡರು.

ಅವರ ಯೋಚನೆಗೆ ಪುಷ್ಟಿಗೊಡುವಂತೆ

"ಸುಂದರುವಿಗೆ ಒಳ್ಳೆಕಡೆಯಿಂದ ಹೆಣ್ಣು ತರಬೇಕು ಕಣೆ" ಎಂದರು ನಾಗಪ್ಪ.

"ಹೆಣ್ಣು ತರುವುದೇನು, ಇರುವ ಹೆಣ್ಣನ್ನೇ ಕಟ್ಟಬೇಕು."

"ಯಾವ ಹೆಣ್ಣಿದೆ? ನಿಮ್ಮಣ್ಣನ ಮಗಳು ರತ್ನಾತಾನೇ ?"

"ಹ್ಞೂ"

"ಅವರ ಯೋಗ್ಯತೆ ಏನು ?—ಸುಂದರುವಿನ ಯೋಗ್ಯತೆ ಏನು ?"

"ಏನಾಗಿದೆ ಅವರ ಯೋಗ್ಯತೆಗೆ ? ಶ್ರೀರಂಗಪಟ್ಟಣದ ಹತ್ತಿರ ಹದಿನೈದೆಕರೆ ಜಮೀನು ಇದೆ. ಹುಡುಗಿಯ ಹೆಸರಿನಲ್ಲಿ ಐದು ಸಾವಿರ ಇನ್ಷೂರೆನ್ಸ್ ಹಣ ಇದೆ. ಸುಂದರುವನ್ನು ಅವರೇ ಚಿಕ್ಕಂದಿನಿಂದ ಸಾಕಿ, ವಿದ್ಯೆ ಕಲಿಸಿದ್ದಾರೆ. ನಮ್ಮಣ್ಣ ಬದುಕಿರುವಾಗಲೇ ಅವರಿಬ್ಬರಿಗೂ 'ಗಂಡ—ಹೆಂಡತಿ' ಎಂದು ಹೆಸರಿಟ್ಟಿದ್ದ. ಇವತ್ತು ಸುಂದರು ದೊಡ್ಡ ಪರೀಕ್ಷೆಯಲ್ಲಿ ಪ್ಯಾಸು ಮಾಡಿದ್ದು ಅವರ ಆಶ್ರಯದಿಂದಲೇ ಅಲ್ಲವೇ ?"

"ನಿಂಗೊತ್ತಿಲ್ಲ ಕಣೆ, ಹುಡುಗನ ವಿದ್ಯೆ ದೊಡ್ಡದು ಬುದ್ಧಿಯಲ್ಲಿ ಬ್ರಹ್ಮರಾಕ್ಷಸ ಅವನು. ಆ ಹುಡುಗಿ ಏನು ಎಸ್ ಎಸ್ ಎಲ್.ಸಿ. ಓದುತ್ತಿದೆಯೋನೋ ! ಅವರಿಗಿರುವ ಆಸ್ತಿತಾನೆ ಏನು ಮಹಾ ದೊಡ್ಡದು ?"

"ಏನಾದರಾಗಲಿ, ಸುಂದರುವಿಗೆ ರತ್ನಳನ್ನೇ ತಂದುಕೊಳ್ಳಬೇಕು"

"ಅದಕ್ಕಿಂತ ಒಳ್ಳೆ ಸಂಬಂಧ ಬಂದರೆ ಏಕೆ ಮಾಡಬಾರದು ?"

"ಪದ್ಮ ನಮ್ಮನ್ನೇ ನಂಬಿಕೊಂಡಿದ್ದಾಳೆ. ಗಂಡು ದಿಕ್ಕಿಲ್ಲದ ಹೆಣ್ಣು. ಅವಳಿಗೆ ಮೋಸ ಮಾಡಿದ ಹಾಗೆ ಆಗುತ್ತದೆ"

"ಮೋಸವೆಂಥಾದ್ದೇ ?"

"ಇನ್ನೇನು ಅಂದ್ರೆ ? ಚಿಕ್ಕಂದಿನಿಂದ........"

"ಸಾಕು ನಿಲ್ಲಸೇ ನಿನ್ನ ಪುರಾಣಾನ. ಮಾವನಾಗುವ ಹೊತ್ತಿಗೆ ಸೋದರಳಿಯನಿಗೆ ಅನ್ನ ಹಾಕಿದರು. ಅದೊಂದು ದೊಡ್ಡ ಉಪಕಾರವೋ ?"

"ಅನ್ನ ಹಾಕಿದ್ದು ಮಾತ್ರವಲ್ಲ, ಬಟ್ಟೆ ಕೊಟ್ಟರು, ಸ್ಕೂಲು ಫೀಸು ಕೊಟ್ಟರು. ಕೇಳಿದ್ದು ತೆಗೆದುಕೊಟ್ಟು ಮನೆ ಮಗುವಿನ ಹಾಗೆ ನೋಡಿಕೊಂಡರು........"

"ಅದಕ್ಕೇನು ಮಾಡಬೇಕು ಅನ್ನುತ್ತೀ ?"

"ಸುಂದರುವಿಗೆ ಬೇರೆ ಹೆಣ್ಣು ತರುವುದು ಬೇಡ. ರತ್ನಳನ್ನೇ

ಕೊಟ್ಟು ಮದುವೆ ಮಾಡೋಣ"

"ನಿನ್ನ ಮಾತೇ ಸಾಧಿಸ್ತೀಯಲ್ಲೇ ?"

"ಅಲ್ಲಾಂದ್ರೆ .. ...."

ನಾಗಪ್ಪನವರು ವೆಂಕಮ್ಮ ಮಾತನಾಡಲು ಅವಕಾಶ ಕೊಡದೆ—

"ನೋಡೋಣ ಆ ಕಾಲಕ್ಕೆ. ಯಾರ ಮಾತು ನಡೆಯುತ್ತೋ ?"

ಎಂದು ಬಿಟ್ಟರು ಆ ಕಾಲ ಬರಲು ಬಹಳ ದಿನಗಳಾಗಲಿಲ್ಲ...

ಆ ದಿನ ನಾಗಪ್ಪನವರು ಕಿಟ್ಟುವನ್ನೂ ನಾಣಿಯನ್ನೂ ಕರೆದು ಕೊಂಡು ಕೋಟಿ ತಾಲ್ಲೂಕು ಅಮಲ್ದಾರರನ್ನು ನೋಡಲು ಹೋಗಿದ್ದರು. ಇಬ್ಬರ ಕೈಯ್ಯಲ್ಲೂ ಒಂದೊಂದು ಅರ್ಜಿ ಬರೆಸಿ, 'ಯಾವುದಾದರೊಂದು ಕೆಲಸ ಕೊಡಬೇಕೆಂದು' ಅಹವಾಲು ಹೇಳಿಕೊಂಡಿದ್ದರು. ನಾಗಪ್ಪನವರು ಆಗಲೇ ಒಂದೆರಡು ಬಾರಿ ಪರಿಚಾರಿಕೆಗೆ ಬಂದು ಪರಿಚಿತರಾಗಿದ್ದರಿಂದ ಅಮಲ್ದಾರರು ಅವರ ಎರಡು ಬೇಡಿಕೆಯಲ್ಲಿ ಒಂದನ್ನಾದರೂ ಅನುಗ್ರಹಿಸಬೇಕಾದ ದಾಕ್ಷಿಣ್ಯಕ್ಕೆ ಕಟ್ಟುಬಿದ್ದರು. ತಾಲ್ಲೂಕು ಕಚೇರಿಯಲ್ಲಿ ಎರಡು ಗುಮಾಸ್ತೆ ಕೆಲಸ ಖಾಲಿ ಇದೆಯೆಂದು ತಿಳಿದಿದ್ದ ನಾಗಪ್ಪ ಇಬ್ಬರ ಕೈಯ್ಯಲ್ಲೂ ಅರ್ಜಿ ಗುಜರಾಯಿಸಿದ್ದರು ಒಂದೇ ಮನೆಯ ಅಣ್ಣ - ತಮ್ಮಂದಿರಿಗೆ ಒಂದೇ ಸಾರಿ ಒಂದೇ ಕಡೆ ಕೆಲಸ ಕೊಟ್ಟರೆ ಇತರರು ಸುಮ್ಮನಿರದೆ, ಕಣ್ಣು ಕೆಂಪು ಮಾಡಿಕೊಳ್ಳುವರೆಂದು ಯೋಚಿಸಿದ ಅಮಲ್ದಾರರು ಕಿಟ್ಟುವಿಗೆ ಮಾತ್ರ ಒಂದು ಕೆಲಸವನ್ನು ಕೊಟ್ಟು ನಾಗಪ್ಪನವರ ಮನಸ್ಸನ್ನು ಸಂತೋಷಪಡಿಸಿದರು ಆದರೆ ನಾಗಪ್ಪ ಕೈ ಮುಗಿದು ಹೊರ ಬರದೆ - 'ಸ್ವಾಮಿ, ಇವನಿಗೂ ಒಂದು ದಾರಿ ಮಾಡಬೇಕು. ತಾವು ಒಂದು ಶಿಫಾರಸು ಕಾಗದ ಕೊಟ್ಟರೆ, ರೇಂಜು ಇನ್ಸ್‌ಪೆಕ್ಟರ್ ಸಾಹೇಬರನ್ನು ಕಂಡು ಒಂದು ಮೇಸ್ತ್ರಿ ಕೆಲಸಕ್ಕಾಗಿಯಾದರೂ ಪ್ರಯತ್ನಿಸಬಹುದು' ಎಂದು ನಾಣಿಯನ್ನು ತೋರಿಸುತ್ತಾ ಗೋಗರೆದರು. ಅದೂ ಅನುಗ್ರಹಿಸಲ್ಪಟ್ಟಿತು ಅವೇ ದಿನವೇ ರೇಂಜ್ ಇನ್ಸ್‌ಪೆಕ್ಟರನ್ನು ಕಂಡು, ಶಿಫಾರಸು ಕಾಗದ ಕೊಟ್ಟು, ಇಲಾಖೆಗೆ ತಾವು ಮಾಡಿದ ಮೂವತ್ತು ವರ್ಷಗಳ ಸೇವೆಯನ್ನು ವರ್ಣಿಸಿ, ತಮ್ಮ ಅಹವಾಲನ್ನು ಹೇಳಿಕೊಂಡರು. ಅಮಲ್ದಾರರ ಶಿಫಾರಸು

ಪತ್ರಕ್ಕೆ ಮನ್ನಣೆ ದೊರೆಯಿತು. ನಾಣಿಗೆ ಜಡಿಗೇನಹಳ್ಳಿ ನ್ಯೂ ಟೈಪ್ ಮಿಡಲ್ ಸ್ಕೂಲಿನಲ್ಲಿ ಖಾಲಿ ಇದ್ದ ಇಂಗ್ಲೀಷ್ ಉಪಾಧ್ಯಾಯರ ಕೆಲಸ ದೊರೆಕಿತು. ಒಂದೇ ದಿನ ತಮ್ಮ ಹುಡುಗರಿಬ್ಬರಿಗೂ ಕೆಲಸ ಸಿಕ್ಕಿದಾಗ ನಾಗಪ್ಪನವರಿಗೆ ತುಂಬ ಸಂತೋಷವಾಗಿತ್ತು. ಮಧ್ಯಾಹ್ನದ ಬಿಸಿಲನ್ನೂ ಲೆಕ್ಕಿಸದೆ ಮೂವರೂ ಕೋಟೆಯಿಂದ ಐದು ಮೈಲಿ ನಡೆದು ಅಗ್ರಹಾರಕ್ಕೆ ಬಂದರು. ಸುದ್ದಿ ತಿಳಿದಾಗ ವೆಂಕಮ್ಮನು ಲೆಕ್ಕವಿಲ್ಲದಷ್ಟು ಬಾರಿ ರಾಮದೇವರ ಪಟಕ್ಕೆ ಕೈ ಮುಗಿದು ಅಡ್ಡ ಬಿದ್ದಳು.

"ಸದ್ಯ, ಒಬ್ಬೊಬ್ಬರಿಗೆ ಒಂದೊಂದು ದಾರಿಯಾಯಿತು. ಶೀನುವನ್ನು ವ್ಯವಸಾಯಕ್ಕೆ ಹಾಕಿಕೊಂಡು ಬಿಡಬೇಕು. ಸುಂದರುವಿಗೆ ಎಲ್ಲಾದರೂ ಗೌರ್ನಮೆಂಟ್ ಕೆಲಸ ಸಿಕ್ಕಿದರೆ ಅನುಕೂಲ. ಶಾಮುನಿಗೆ ಎಸ್.ಎಸ್.ಎಲ್.ಸಿ. ಆದಮೇಲೆ ಮುಂದಕ್ಕೆ ಓದಿಸಬೇಕು"

ಊಟಕ್ಕೆ ಕುಳಿತಾಗ ತಮ್ಮ ಯೋಚನೆಯನ್ನು ವೆಂಕಮ್ಮನ ಎದುರಿಗೆ ಹೇಳಿದರು ನಾಗಪ್ಪ. ಆಗಲೂ ಸುಮಿತ್ರೆ—

"ನೋಡೇ ಅಮ್ಮ, ಅಣ್ಣ ನನ್ ಸುದ್ದೀನೇ ಎತ್ತದೆ ಮರೆತು ಬಿಟ್ಟಿದ್ದಾರೆ!" ಎಂದಳು.

"ಹೌದಮ್ಮ, ನಿಮ್ಮತಂದೇಗೆ ಯಾವಾಗಲೂ ಗಂಡುಮಕ್ಕಳ ಯೋಚ್ನೇನೆ. ನಿನ್ ವಿಚಾರದಲ್ಲಿ ಯೋಚ್ನೇನೇ ಮಾಡೋಲ್ಲ!"

"ನಾನೂ ಗಂಡಾಗೇ ಹುಟ್ಬೇಕಾಗಿತ್ತು ಅಲ್ವೇನಮ್ಮ?"

"ಹೌದಮ್ಮ"

ಎನ್ನುತ್ತಾ ವೆಂಕಮ್ಮ ಆ ಪುಟ್ಟ ಹುಡುಗಿಯನ್ನು ರಮಿಸಿದರು.

ನಾಗಪ್ಪನವರು ಊಟ ಮುಗಿಸಿ ಹೊರಗೆ ಬರುವ ವೇಳೆಗೂ – ಅವರ ಮನೆಯ ಮುಂದೆ ಕಾರೊಂದು ಬಂದು ನಿಲ್ಲುವ ವೇಳೆಗೂ ಕಾಕತಾಳ ನ್ಯಾಯದಂತೆ ಹೊಂದಿಕೊಂಡಿತು.

ಗರಿಗರಿ ಬಟ್ಟೆ ಹಾಕಿಕೊಂಡು, ಗ್ಯಾಬರ್ಡೀನ್ ಕೋಟು ತೊಟ್ಟು, ಗಿರ್ಕಿ ಚಡಾವು ಮೆಟ್ಟಿ, ಗಿರಿಜಾಮೀಸೆ ಬಿಟ್ಟಿದ್ದ ಗಂಭೀರಮೂರ್ತಿಯಾದ ಗಂಡಸರೊಬ್ಬರು ಕಾರಿನಿಂದ ಇಳಿದರು. ಅವರ ಹಿಂದೆ ರೇಷ್ಮೆ ಸೀರೆಯುಟ್ಟು, ದುಂಡು ತುರುಬುಕಟ್ಟಿ, ಕನ್ನಡಕ ಹಾಕಿಕೊಂಡಿದ್ದ ವಯಸ್ಸಾದ ಕುಳ್ಳು ಹೆಂಗಸೂ ಇಳಿದರು. ನಾಗಪ್ಪನವರು ಅವರನ್ನೇ

ನೋಡುತ್ತಾ ಬೆರಗಾಗಿ ನಿಂತಿದ್ದರು.

"ನಾಗಪ್ಪನವರ ಮನೆಯಾವುದು ?"

ನಾಗಪ್ಪನವರನ್ನೇ ಕೇಳಿದರು ಅವರು !

"ಇದೇ !"

"ನಾವು ನಾಗಪ್ಪನವರನ್ನು ನೋಡಬೇಕಾಗಿತ್ತು"

"ತಮ್ಮ ಹೆಸರೇನು ?"

"ಇನಾಂದಾರ್ ರಾಘವಯ್ಯ ಅಂತ"

"ತುಂಬ ಸಂತೋಷ. ನಾನೇ ನಾಗಪ್ಪ"

ಎಂದು ಪರಿಚಯ ಮಾಡಿಕೊಂಡರು ನಾಗಪ್ಪ.

"ಓಹೋ ! ನಮಸ್ಕಾರ !!"

"ನಮಸ್ಕಾರ. ದಯಮಾಡಿಸಿ"

ಎನ್ನುತ್ತಾ ನಾಗಪ್ಪ ಅವರಿಬ್ಬರನ್ನೂ ಒಳಕ್ಕೆ ಕರೆದುಕೊಂಡು ಹೋಗಿ, ಚಾಪೆ ಹಾಸಿ ಕುಳ್ಳಿರಿಸಿದರು. ಹೊಸಬರನ್ನು ಕಂಡು ಕ್ಷಣಕಾಲ ಬೆರಗುಗೊಂಡರೂ ವೆಂಕಮ್ಮ, ರಾಘವಯ್ಯನವರ ಕುಟುಂಬ ಅನ್ನಪೂರ್ಣಮ್ಮನವರನ್ನು ಒಳಗೆ ಕರೆದುಕೊಂಡು ಹೋಗಲು ಅಂಗಳಕ್ಕೆ ಬಂದರು.

"ಪರವಾಗಿಲ್ಲ, ಇಲ್ಲೇ ಇರಲಿ ಬಿಡಿ" ಎಂದು ಅನ್ನಪೂರ್ಣಮ್ಮ ಗಂಡನ ಪಕ್ಕದಲ್ಲಿಯೇ ಚಾಪೆಯ ಮೇಲೆ ಕುಳಿತರು.

"ನಿಮ್ಮನ್ನು ನೋಡಿ ತುಂಬ ಸಂತೋಷವಾಯಿತು"

ನಾಗಪ್ಪ ಮಾತಿನ ಸರಣಿಗೆ ಮುನ್ನುಡಿ ಹಾಕಿದರು.

"ನಾವು ಬಂದಿದ್ದೇ ನಿಮ್ಮನ್ನು ನೋಡುವ ಉದ್ದೇಶದಿಂದ"

ಆ ಮಾತಿಗೆ ಮುಗುಳು ನಕ್ಕರು ನಾಗಪ್ಪ.

ನನಗೂ ನಾಲ್ಕು ಗ್ರಾಮ ಇದೆ. ವರ್ಷಕ್ಕೆ ಎರಡು ಲಕ್ಷ ಉತ್ಪತ್ತಿ ಇದೆ – ಖರ್ಚು ಕಳೆದು. ನಮ್ಮ ಹಿಂದಿನ ತಲೆಮಾರಿನವರು ದೊಡ್ಡ ಪಾಳ್ಳೇಗಾರರೇ ಆಗಿದ್ದರಂತೆ. ಬರುಬರುತ್ತಾ ಎಲ್ಲಾ ಕಳೆದು ಕೊಂಡು ನನ್ನ ತಲೆಗೆ ನಾಲ್ಕು ಗ್ರಾಮ ಉಳಿದುಕೊಂಡಿದೆ. ನಾನೇನೂ ಕಳೆಯಲಿಲ್ಲ – ಕೂಡಿಸಲೂ ಇಲ್ಲವೆನ್ನಿ"

"ಮಕ್ಕಳೆಷ್ಟು ಮಂದಿಯೋ ?"

"ಒಂದೇ ಒಂದು ಹೆಣ್ಣು ಮಗು. ಸ್ವರ್ಣ ಅಂತ. ಕಾಲೇಜಿನಲ್ಲಿ ಓದುತ್ತಿದ್ದಾಳೆ. ಈಸಾರಿ ಬಿ.ಎಸ್‌ಸಿ ಆಯಿತು. ಮುಂದಕ್ಕೂ ಓದಬೇಕು ಅನ್ನುತ್ತಾಳೆ."

"ಏನೋ ಪಾಪ, ಈಗಿನ ಕಾಲದ ಹುಡುಗಿಯರಿಗೆ ಓದಬೇಕು ಎನ್ನುವ ಆಸೆ!"

"ಓದಲಿ, ಬೇಡವೆಂದವರಾರು? ಆದರೆ ಬೆಳೆದ ಹುಡುಗಿಯನ್ನು ಹಾಗೆಯೇ ಎಷ್ಟು ದಿನ ಇಟ್ಟುಕೊಂಡಿರುವುದಕ್ಕಾಗುತ್ತದೆ?"

"ಅದೂ ನಿಜವೇ!"

"ಬೇಗ ಅವಳಿಗೊಂದು ಮದುವೆ ಮಾಡಿಬಿಟ್ಟರೆ ನಮ್ಮ ಜವಾಬ್ದಾರಿ ತೀರಿತು. ಅಳಿಯನ ಮೇಲೇ ಈ ಇನಾಂದಾರಿ ಹೊರೆ ಹೊರಿಸಿ ಬಿಟ್ಟು ನಿಶ್ಚಿಂತನಾಗುತ್ತೇನೆ"

"ಗಂಡು ಹುಡುಕಿದ್ದೀರಿ ಅಂತ ಕಾಣುತ್ತೆ."

"ಅದಕ್ಕೇ ಬಂದಿದ್ದೇವೆ ನಾಗಪ್ಪನವರೇ."

"ಇಲ್ಲಿ ನಿಮ್ಮ ಅಂತಸ್ತಿಗೆ ಯಾವ ಗಂಡಿದೆ ಸ್ವಾಮಿ?"

"ನಿಮ್ಮ ಮಗನೇ ಇದ್ದಾನಲ್ಲ ನಾಗಪ್ಪನವರೇ – ಸುಂದರು. ಹುಡುಗನಿಗೆ ಈ ವರ್ಷ ಎಂ.ಎಸ್‌ಸಿ ಪಾಸಾಯಿತು ಅಲ್ಲವೇ?"

"ಹೌದು. ನಿಮಗೆ ಅವನ ಪರಿಚಯವಿದೆಯೋ?"

"ನನ್ನ ಮಗಳಿಗೂ ಅವರಿಗೂ ತುಂಬ ಸ್ನೇಹವಿದೆ. ನಾನೂ ಹುಡುಗನನ್ನು ನೋಡಿದ್ದೇನೆ ಒಳ್ಳೇ ಯೋಗ್ಯಸ್ಥ"

'ಭೇಷ್ ಮಗನೆ! ಒಳ್ಳೆಯ ಕಡೆಯೇ ಸ್ನೇಹ ಮಾಡಿದ್ದೀಯೆ!' ಎಂದು ಮನಸ್ಸಿನಲ್ಲಿಯೇ ಸುಂದರುವನ್ನು ಹೊಗಳಿದರು ನಾಗಪ್ಪ.

"ಕೇಳಿದಷ್ಟು ವರದಕ್ಷಿಣೆ ಕೊಡುತ್ತೇನೆ ಹುಡುಗನಿಗೆ ಇಷ್ಟವಿದ್ದರೆ ವಿಲಾಯಿತಿಗೆ ಕಳಿಸುತ್ತೇನೆ. ಇಲ್ಲದಿದ್ದರೆ ಇನಾಂದಾರಿಕೆ ನೋಡಿಕೊಂಡು ನಿಶ್ಚಿಂತೆಯಿಂದಿರಲಿ"

ನಾಗಪ್ಪನವರು ಐದು ನಿಮಿಷ ಯೋಚಿಸಿದರು. ವರದಕ್ಷಿಣೆ ಎಷ್ಟು ಕೇಳುವುದು, ಹೇಗೆ ಕೇಳುವುದು – ಎಂದು ಗುಣಾಕಾರ ಹಾಕಿದರು.

"ಇದ್ದ ಮಾತು ಹೇಳಿಬಿಡುತ್ತೇನೆ. ತಾವು ಅನ್ಯಥಾ ಭಾವಿಸ

ಬಾರದು"

"ಹೇಳಿ ನಾಗಪ್ಪನವರೇ"

"ಮೊನ್ನೆ ಮೈಸೂರಿನಿಂದ ಹೀಗೆಯೇ ಒಬ್ಬರು ಬಂದಿದ್ದರು. ಹತ್ತು ಸಾವಿರ ವರದಕ್ಷಿಣೆ ಕೊಡುತ್ತೇವೆ, ಹುಡುಗನಿಗೆ ಬೇಕಾದ್ದು ತೆಗೆದುಕೊಡುತ್ತೇವೆ – ಎಂದರು. ನಾವೂ ಒಪ್ಪಿಕೊಂಡುಬಿಟ್ಟಿದ್ದೆವು. ಆದರೆ ಸಗೋತ್ರವಾಗಿ ಹೋಯಿತು !"

"ನಿಮ್ಮದು ಯಾವ ಗೋತ್ರ ?"

"ಭಾರದ್ವಾಜ ಗೋತ್ರ"

"ನಮ್ಮದು ಕೌಂಡಿನ್ಯ ಗೋತ್ರ"

"ಹುಡುಗಿಯ ಜಾತಕ ಇದೆಯೇ?"

"ನಾವು ಬರೆಸಿಲ್ಲ ನಾಗಪ್ಪನವರೇ."

"ಹೋಗಲಿ ಬಿಡಿ"

"ಅಂದರೆ ಏನು ಹೇಳುತ್ತೀರಿ?"

"ನಿಮ್ಮ ಮಾತಿಗೆ ಎದುರು ಹೇಳುವುದಕ್ಕೆ ನನ್ನಿಂದ ಸಾಧ್ಯವಿಲ್ಲ ಸ್ವಾಮಿ. ಮೈಸೂರಿನವರು ಹೇಳಿದಷ್ಟೇ ವರದಕ್ಷಿಣೆ, ವರೋಪಚಾರ ನಡೆದರೆ ನಮಗೆ ಅಷ್ಟರಲ್ಲೇ ತೃಪ್ತಿ"

"ಹಾಗಾದರೆ ಹಣ ಈಗಲೇ ಕೊಟ್ಟುಬಿಡಲೇನು ?"

ಎನ್ನುತ್ತಾ ರಾಘವಯ್ಯ ತಮ್ಮ ಜೇಬಿನಿಂದ ಚೆಕ್ ಪುಸ್ತಕ ತೆಗೆದು ಹತ್ತು ಸಾವಿರಕ್ಕೆ ಬರೆದು ಸಹಿಮಾಡಿ ಕೊಟ್ಟರು.

"ಇದಕ್ಕೆಲ್ಲಾ ಈಗೇನು ಅವಸರ. ನಿಧಾನವಾಗಿ ಆಗಲಿ"– ಎನ್ನುತ್ತಲೇ ನಾಗಪ್ಪ ಕೈಯೊಡ್ಡಿದರು.

"ಲಗ್ನಪತ್ರಿಕೆ ಯಾವಾಗ ಬರೆಸೋಣ?"

"ತಾವು ಇಷ್ಟಪಟ್ಟರೆ ಈಗಲೇ ಆಗಿಹೋಗಲಿ"

"ಹಾಗಾದರೆ ಪುರೋಹಿತರನ್ನು ಕರೆಸಿ ಅದನ್ನೂ ಮುಗಿಸಿಬಿಡಿ"

ಎಂದರು ರಾಘವಯ್ಯ. ನಾಗಪ್ಪನವರು ಒಳಗೆ ಹೋಗಿ, ನಾಣಿಯ ಸಂಗಡ ಪುಟ್ಟಶಾಸ್ತ್ರಿಗಳಿಗೆ ಹೇಳಿಕಳುಹಿಸಿದರು. ನಂತರ ವೆಂಕಮ್ಮನ ಬಳಿಗೆ ಬಂದು ಪಿಸುಮಾತಿನಲ್ಲಿ,

"ನೋಡಿದೆಯೇನೆ ನಮ್ಮ ಅದೃಷ್ಟ. ಇವತ್ತು ಹತ್ತು ಸಾವಿರ

ರೂಪಾಯಿ ಲಾಭ" ಎನ್ನುತ್ತಾ ಚೆಕ್ಕು ತೋರಿಸಿದರು. ವೆಂಕಮ್ಮನ ಮುಖ ಕಳೆಗುಂದಿತ್ತು.

"ಎಲ್ಲಾ ನೀವೇ ಮಾಡುತ್ತಿದ್ದೀರಲ್ಲಾ, ಸುಂದರುವನ್ನು ಒಂದು ಮಾತು ಕೇಳಬಾರದೇ ?"

"ಅವನನ್ನೇನು ಕೇಳೋದು ಹುಡುಗ ಒಳ್ಳೆಯವನು. ನಾನು ಹೇಳಿದ ಹಾಗೆ ಕೇಳುತ್ತಾನೆ"

"ರತ್ನಾನ ಕೈಬಿಟ್ಟ ಹಾಗೇ ಆಯಿತು"

"ಬಿಡದೆ ಕಟ್ಟಿಕೊಳ್ಳೋಕಾಗುತ್ತೇ ?"

"ಪದ್ಮ ಎಷ್ಟು ಗೋಳಾಡ್ತಾಳೋ"

"ಅವಳ ಗೋಳು ಕಟ್ಟಿಕೊಂಡು ನನಗೇನು ?"

"ಸುಂದರು ಎಷ್ಟು ನೊಂದುಕೊಳ್ಳುತ್ತಾನೋ!"

"ನಿನ್ನ ಹಾಗೆ ಅಂಜುಪುರುಕನಲ್ಲ ಅವನು. ನನ್ನ ಹೊಟ್ಟೆಯಲ್ಲಿ ಹುಟ್ಟಿದ ಗಂಡು ಹುಲಿ !"

"ಅವನ ತಲೆಯ ಮೇಲೂ ಕಲ್ಲು ಹಾಕುತ್ತಿದ್ದೀರಿ ನೀವು"

"ಯಾರು ಹೇಳಿದರು ಹಾಗಂತ ? ಅವನನ್ನು ರತ್ನ ಸಂಹಾಸದ ಮೇಲೆ ಕೂಡಿಸುತ್ತಿದ್ದೇನೆ !" ಎಂದರು ನಾಗಪ್ಪ. ಅಷ್ಟರಲ್ಲಿ ಪುಟ್ಟ ಶಾಸ್ತ್ರಿಗಳು ಬಂದಿದ್ದರಿಂದ ಹೊರಗೆ ಬಂದರು. ರಾಘವಯ್ಯನವರು ಬೆಂಗಳೂರಿನಿಂದ ತಂದಿದ್ದ ಬಾಳೆ, ಕಿತ್ತಳೆ, ಅಂಜೂರ, ಸೇಬುಗಳನ್ನು ತಾವೇ ತಂದಿದ್ದ ತಟ್ಟೆಯಲ್ಲಿ ಇಟ್ಟರು ಅದರ ಜೊತೆಗೆ, ತಾಂಬೂಲ ದೊಡನೆ ಅರಿಶಿಣ – ಕುಂಕುಮವಿಟ್ಟು, ಹತ್ತು ಬೆಳ್ಳಿಯ ರೂಪಾಯಿ ಗಳನ್ನಿಟ್ಟು, ಪುಟ್ಟಶಾಸ್ತ್ರಿಗಳು ಬರೆದ ಲಗ್ನಪತ್ರಿಕೆಯನ್ನು ಅದರಲ್ಲಿಟ್ಟು, ನಾಗಪ್ಪನವರ ಕೈಗಿತ್ತು—

"ಮಂಗಳದ್ರವ್ಯವನ್ನು ಸ್ವೀಕರಿಸಬೇಕು"

ಎನ್ನುತ್ತಾ ನಮಸ್ಕರಿಸಿದರು ರಾಘವಯ್ಯ.

ಇವೆಲ್ಲವನ್ನೂ ಬಾಗಿಲಿನ ಮರೆಯಲ್ಲಿಯೇ ನಿಂತು ನೋಡು ತ್ತಿದ್ದಳು ವೆಂಕಮ್ಮ. ಅವಳ ಕಣ್ಣುಗಳಲ್ಲಿ ಧಾರಕಾರವಾಗಿ ನೀರು ಹರಿಯುತ್ತಿತ್ತು. ತಾಯಿಯ ಸೀರೆಯನ್ನು ಹಿಡಿದುಕೊಂಡು ಸುಮಿತ್ರೆಯೂ ಅಂಗಳದ ವಿದ್ಯಮಾನಗಳನ್ನೆಲ್ಲಾ ವೀಕ್ಷಿಸುತ್ತಿದ್ದಳು.

ನಾಣಿ – ಕಿಟ್ಟು ತಂದೆಗೆ ಬೆಂಬಲಿಗರಾಗಿ ಅಂಗಳದಲ್ಲೇ ಇದ್ದರು.

ರಾಘವಯ್ಯ ತಮ್ಮ ಕಿಸೆ ಗಡಿಯಾರವನ್ನು ನೋಡಿಕೊಂಡರು ಗಂಟೆ ನಾಲ್ಕಾಗಿತ್ತು.

"ನಾವು ಹೊರಡುತ್ತೇವೆ."

"ಸ್ವಲ್ಪ ಕಾಫಿಯಾದರೂ ತೆಗೆದುಕೊಂಡಿದ್ದರೆ ಚೆನ್ನಾಗಿತ್ತು."

"ಬೇಡ ಬೇಡ ನಾವು ತಂದಿದ್ದೇವೆ – ಥರ್ಮಾ ಫ್ಲಾಸ್ಕಿನಲ್ಲಿ"

ಎನ್ನುತ್ತ ರಾಘಯ್ಯನವರೂ ಅನ್ನಪೂರ್ಣಮ್ಮನವರೂ ಕಾರು ಹತ್ತಿದರು.

"ಯಾವ ರಸ್ತೆಯಲ್ಲಿ ಬಂದಿರಿ ? ಜಡಿಗೇನ ಹಳ್ಳಿಯಿಂದ ಬರುವುದಕ್ಕೆ ರಸ್ತೆ ಸರಿಯಾಗಿಲ್ಲವಲ್ಲ !"

"ದೇವಲಾಪುರದ ರೈಲ್ವೆ ಸ್ಟೇಷನ್ನಿನ ಮೇಲೆ – ಸುತ್ತು ಬಳಸಿಕೊಂಡು ಬಂದೆವು ಸ್ವಾಮಿ" ಎಂದು ಡ್ರೈವರನೇ ಉತ್ತರಿಸಿದ. ಕಾರು ಹೊರಟಿತು. ನಾಗಪ್ಪನವರು ಕೈಮುಗಿದು ನಮಸ್ಕಾರ ಹೇಳಿ ಒಳಗೆ ಬಂದರು.

ವೆಂಕಮ್ಮ ಬಿಕ್ಕಿ ಬಿಕ್ಕಿ ಅಳುತ್ತಿದ್ದಳು ಪದ್ಮಳಿಗೆ ಏನು ಉತ್ತರ ಹೇಳುವುದು ? ರತ್ನಳ ಗತಿ ಏನು ? ಸುಂದರು ಹೆಣ್ಣು ಒಪ್ಪದಿದ್ದರೆ ಅವನಿಗೂ ದುಃಖದ ಬಾಳೇ... ಒಂದು ಕಾಲದಲ್ಲಿ ಇದೇ ಗಂಡನಿಗೆ ಸಾವಿರ ವರದಕ್ಷಿಣೆಯನ್ನು ತನ್ನ ಕೈಯಿಂದ ತೆತ್ತು, ಒಡೆದು ಹೋಗಿದ್ದ ತನ್ನ ಬಾಳನ್ನು ಒಂದುಗೂಡಿಸಿ, ಸುಂದರುವನ್ನು ಮನೆಯ ಮಗುವಿನಂತೆ ಮುದ್ದಿನಿಂದ ಬೆಳಸಿ, ವಿದ್ಯೆಕಲಿಸಿ, ದೊಡ್ಡವನನ್ನಾಗಿ ಮಾಡಿದ ತನ್ನ ಅಣ್ಣ ಚಂದ್ರುವಿಗೇ ತಾನು ಮೋಸಮಾಡಬಹುದೇ ? ಗಂಡು ದಿಕ್ಕಿಲ್ಲದೆ, ಬಹುಕಾಲದಿಂದ ಸುಂದರುವನ್ನೇ ನಂಬಿಕೊಂಡಿರುವ ಪದ್ಮಳಿಗೆ ಹೇಗೆ ಸಮಾಧಾನ ಹೇಳುವುದು ? ಬೆಳೆದ ಹುಡುಗಿ ರತ್ನ, ಸುಂದರುವೇ ತನ್ನ ಗಂಡನೆಂದು ನಂಬಿ ಕಟ್ಟಿಕೊಂಡಿರುವ ಕನಸನ್ನು ಒಡೆದು ಚೂರು ಚೂರು ಮಾಡಿದಂತಾಯಿತಲ್ಲ ! ದೇವರೇ ಇದು ಯಾವ ಪರೀಕ್ಷೆ ? ಎಂದು ಅವಳ ಮನಸ್ಸು ಮಮ್ಮಲ ಮರುಗುತಿತ್ತು.

ಒಳಗೆ ಬಂದ ನಾಗಪ್ಪನವರು—

"ಮನೆಗೆ ಲಕ್ಷ್ಮಿ ಬಂದಿರುವಾಗ ಸಂತೋಷಪಡದೆ, ಅಳುತ್ತಿದ್ದೀ

ಯಲ್ಲೇ ಮೂದೇವಿ” ಎಂದರು.

‘ಲಕ್ಷ್ಮಿ ಮನೆಗೆ ಬರಲಿಲ್ಲ, ಮಾರಿ ಬಂದಿದ್ದಾಳೆ’ – ಎಂದು ಕೊಂಡಳು ವೆಂಕಮ್ಮ.

“ಎಷ್ಟಳುತ್ತೀಯೋ ಅಳು. ನೀನು ಅತ್ತುಬಿಟ್ಟರೆ ಬಂದ ಭಾಗ್ಯ ವಾಪಸ್ಸು ಹೋಗೋಲ್ಲ!”

ಮೌನವಾಗಿಯೇ ಇದ್ದಳು ವೆಂಕಮ್ಮ.

“ನಾನು ಬೆಂಗಳೂರಿಗೆ ಹೋಗಿ, ಸುಂದರೂಗೆ ಸಮಾಚಾರ ತಿಳಿಸ್ತೀನಿ. ಮನೆ ಕಡೆ ಜೋಪಾನ. ಲೋ ಕಿಟ್ಟು – ನಾಣಿ ನಾಳೆ ಯಿಂದ ನಿಮ್ಮ ನಿಮ್ಮ ಕೆಲಸಕ್ಕೆ ಹಾಜರಾಗಿ”

ಎಂದು ಎಲ್ಲರಿಗೂ ಕರ್ತವ್ಯವನ್ನು ತಿಳಿಹೇಳಿ. ಬೆಂಗಳೂರು ರೈಲು ಹತ್ತಲು ದೇಪಲಾಪುರದ ರೈಲ್ವೆ ಸ್ಟೇಷನ್ನಿಗೆ ಹೊರಟರು ನಾಗಪ್ಪ. ಕೋರ್ಟ್ ವ್ಯವಹಾರಕ್ಕೆಂದು ಹೊರಟಿದ್ದ ಗೋಪಾಲಯ್ಯ ನವರೂ ಗೌಡರೂ ಅವರಿಗೆ ಜೊತೆಯಾದರು.

೬

ಬೆಂಗಳೂರು ಸೇರಿದ ನಾಗಪ್ಪನವರು ನೇರವಾಗಿ ಪದ್ಮಮ್ಮನ ಮನೆಗೆ ಹೋಗದೆ, ಹಳೆಯ ಸ್ನೇಹಿತ ನಾರಾಯಣನನ್ನು ಕಂಡು, ಅವನ ಮನೆಯಲ್ಲೇ ಇಳಿದುಕೊಂಡರು. ನಾರಾಯಣ ವಕೀಲ ವೃತ್ತಿ ಯಲ್ಲಿ ಆಗಲೇ ಹೆಚ್ಚು ಹೆಸರುಗಳಿಸಿ, ತನ್ನ ಮಾವ ಲಾಯರ್ ವೆಂಕಟ ರಾಯರು ತೀರಿಕೊಂಡ ನಂತರ ತಾನೇ ಅವರ ಕಚೇರಿಯನ್ನು ನಡೆಸುತ್ತಾ ಒಳ್ಳೆಯ ಹೆಸರು ಸಂಪಾದಿಸಿದ್ದ. ನಾಗಪ್ಪನವರು ಮೊದ ಮೊದಲು, ಅಂತಹ ಗಣ್ಯವ್ಯಕ್ತಿಯು ತನ್ನನ್ನು ಹಿಂದಿನ ಹಾಗೆಯೇ ಆದರಿಸುತ್ತಾನೆಯೋ ಎಂದು ಸಂದೇಹಪಟ್ಟರೂ, ಅವರ ಜೇಬಿನಲ್ಲಿದ್ದ ಹತ್ತುಸಾವಿರ ರೂಪಾಯಿನ ಚೆಕ್ಕು ‘ಅವನಿಗಿಂತ ನೀನೇನೂ ಕಡಿಮೆ ಯಲ್ಲ. ನೀನೂ ಹತ್ತು ಸಾವಿರ ರೂಪಾಯಿ ನಗದು ಇಟ್ಟಿರುವ ಆಸ್ತಿ

ವಂತ' ಎಂದು ಹೇಳುತ್ತಿತ್ತು. ಆ ಧೈರ್ಯದನೋಟಿಯೇ ನಾರಾಯಣ ನನ್ನು ಕಂಡು ನಮಸ್ಕಾರಹಾಕಿ, ನಕ್ಕರು.

"ಬಾ ನಾಗಪ್ಪ. ಮಕ್ಕಳು ದೊಡ್ಡವರಾದ ಮೇಲೆ ನಮ್ಮನ್ನೆಲ್ಲಾ ಮರೆತೇಬಿಟ್ಟಿ!" ಎಂದು ಸ್ವಾಗತಿಸಿದ ನಾರಾಯಣ

"ಹಾಗೇನೂ ಇಲ್ಲಪ್ಪ. ಅದರಲ್ಲೂ ನಿನ್ನನ್ನು ಮರೆಯುವುದು ಸಾಧ್ಯವೇ ನಾಣಿ?"

ಹಿಂದಿನ ದಿನಗಳ ಸಲಿಗೆಯನ್ನೇ ಬೆಳಸಿಕೊಂಡರು ನಾಗಪ್ಪ. ಬಂದ ಉದ್ದೇಶವನ್ನು ಅವನಿಗೂ ತಿಳಿಸಿದರು ಸುಂದರುವಿಗೆ ನಿಶ್ಚಯಿಸಿರುವ ಹೆಣ್ಣಿನ ವಂಶಾವಳಿಯನ್ನು ತಮಗೆ ತಿಳಿದಷ್ಟು ವಿವರ ವಾಗಿ ವರ್ಣಿಸಿದರು.

"ದೊಡ್ಡ ಸಂಬಂಧವನ್ನೇ ಮಾಡಿದ್ದಿ ನಾಗಪ್ಪ. ಹಾಗಾದರೆ ಹತ್ತು ಸಾವಿರ ಕೊಟ್ಟುಬಿಟ್ಟರು ಅನ್ನು!"

"ಓಹೋ! ಮನುಷ್ಯ ತುಂಬ ಧಾರಾಳಿ!!" ಎನ್ನುತ್ತಾ ಸಂತೋಷದಿಂದ ರಾಘವಯ್ಯನವರ ಚೆಕ್ಕು ತೋರಿಸಿದರು ನಾಗಪ್ಪ.

"ಇಷ್ಟೊಂದು ಹಣ ಇಟ್ಟುಕೊಂಡು ಏನುಮಾಡುತ್ತೀಯಾ? ಲೇವಾದೇವಿಯನ್ನಾದರೂ ಪ್ರಾರಂಭಿಸು"

"ಅದರಲ್ಲೆಲ್ಲಾ ನನಗೆ ಅನುಭವ ಇಲ್ಲ ನಾರಾಯಣ"

"ತಾನಾಗಿಯೇ ಬರುತ್ತದೆ ಅನುಭವ" ಎಂದ ನಾರಾಯಣ. ನಾಗಪ್ಪನವರೂ ಮೌನವಾಗಿದ್ದರು. ನಾರಾಯಣ ಏನೋ ಯೋಚಿಸು ವವನಂತೆ ಮಾಡಿ—

"ನಾಗಪ್ಪ ನನಗೊಂದು ಯೋಚನೆ ಹೊಳೆಯುತ್ತಿದೆ ಮೊನ್ನೆ ಮಂಡ್ಯದಿಂದ ನನ್ನ ಸ್ನೇಹಿತರೊಬ್ಬರು ಬಂದಿದ್ದರು ಮೊದಲು ಅವರು ಸಕ್ಕರೆ ಕಂಪನಿಯಲ್ಲಿದ್ದರು. ಈಗ ಆ ಕೆಲಸ ಬಿಟ್ಟು ತಮ್ಮ ಮಾವನ ಲೇವಾದೇವಿ ವ್ಯವಹಾರದಲ್ಲಿ ಸಹಾಯ ಮಾಡುತ್ತಿದ್ದಾರ. ಅವರ ಮಾವ ನಡೆಸುತ್ತಿರುವ ಲೇವಾದೇವಿ ಕೇಳಿದರೆ ನೀನು ನಂಬುತ್ತೀಯೋ ಇಲ್ಲವೋ! ನೋಡು, ಅಸಲಿಗೆ ಅದರ ಅರ್ಧದಷ್ಟು ಬಡ್ಡಿ – ಅಂದರೆ ನೂರಕ್ಕೆ ಐವತ್ತು ರೂಪಾಯಿ ಬಡ್ಡಿ! ಸಮಯ ಬಿದ್ದರ ಎಂಭತ್ತರ ವರೆಗೂ ಏರಿಸಿ ಬಡ್ಡಿಕೊಡುತ್ತಾನೆ ಹತ್ತಾರು ವರ್ಷಗಳಿಂದ ವ್ಯವ

ಹಾರ ನಡೆಸುತ್ತಿದ್ದಾನೆ – ಕೋಟಿಗಟ್ಟಲೆ ವ್ಯವಹಾರ!"

"ನನಗೆ ಆಶ್ಚರ್ಯವಾಗುತ್ತದೆ ನಾರಾಯಣ?"

"ನನಗೂ ಮೊದಲು ಆಶ್ಚರ್ಯವೇ ಆಯಿತು. ಆಮೇಲೆ ಆ ವ್ಯಕ್ತಿಯನ್ನೂ, ಅವರ ಹತ್ತಿರ ಠೇವಾಡೇವಿ ಇಟ್ಟಿದ್ದ ಜನರನ್ನೂ ನೋಡಿದಮೇಲೆ ನಂಬಿದೆ ನಿಜ ಹೇಳಬೇಕೂಂದರೆ ನಾನು ಇಪ್ಪತ್ತು ಸಾವಿರ ಕೊಟ್ಟಿದ್ದೇನೆ!"

"ನಿಜವೇ ನಾರಾಯಣ ?"

"ನಿಜವೋ ಸುಳ್ಳೋ – ಬೇಕಾದರೆ ನೀನೇ ನೋಡು"

"ಹಾಗಾದರೆ ನಾಳೆ ಬೆಳಿಗ್ಗೆ ಅವರ ಹತ್ತಿರ ಹೋಗೋಣವೇ ?"

"ಅದಕ್ಕೇನು, ಹೋಗೋಣ. ನಿನ್ನ ಹತ್ತು ಸಾವಿರಕ್ಕೆ, ಒಳ್ಳೆ ಅದೃಷ್ಟವಿದ್ದರೆ ಇನ್ನು ಹತ್ತು ವರ್ಷದಲ್ಲಿ ಹತ್ತು ಲಕ್ಷವಾಗುತ್ತದೆ!"

ನಾರಾಯಣನ ಮಾತಿಗೆ ಉಬ್ಬಿಹೋದ ನಾಗಪ್ಪನವರು,

"ದೇವರೇ ಈ ದಾರಿ ತೋರಿಸುತ್ತಿದ್ದಾನೆ ನಾಣಿ" ಎಂದರು. ಊಟವಾದ ನಂತರ ಇನ್ನಷ್ಟು ಹರಟೆ ಹೊಡೆದು ಮಲಗಿಕೊಂಡರು.

ಮರುದಿನ ನಾಗಪ್ಪ ಬೇಗನೆ ಎದ್ದು ಮಲ್ಲೇಶ್ವರದ ಕಡೆಗೆ ಹೊರಟರು. ಸುಂದರುವಿಗೆ ಈ ಸುದ್ದಿಯನ್ನು ಹೇಗೆ ತಿಳಿಸಬೇಕು, ಅವನು ರಂಪ ಮಾಡಿದರೆ ಏನು ಸಮಾಧಾನ ಹೇಳಬೇಕು – ಎಂಬುದನ್ನೆಲ್ಲಾ ಯೋಚಿಸುತ್ತಾ ಪದ್ಮಮ್ಮನ ಮನೆಯನ್ನು ಸೇರಿದರು. ಅನಿರೀಕ್ಷಿತವಾಗಿ ಬಂದ ತಂದೆಯನ್ನು ನಗೆಮುಖದಿಂದಲೇ ಸ್ವಾಗತಿಸಿದ ಸುಂದರು. 'ದೇವರೇ ಇಂಥ ಸಮಯದಲ್ಲಿ ಅವರನ್ನು ಕಳುಹಿಸಿದನೇನೋ!' ಎಂದುಕೊಂಡಳು ಪದ್ಮಮ್ಮ.

ಕ್ಷೇಮಸಮಾಚಾರದ ನಂತರ ಕಾಫಿ ಆಯಿತು ನಾಗಪ್ಪನವರು ಹೊರಡುವ ಆತುರದಲ್ಲಿಯೇ ಇದ್ದರು. ಪದ್ಮಮ್ಮ ಅವಲಕ್ಕಿ ಉಪ್ಪಿಟ್ಟು ಮಾಡುತ್ತೇನೆಂದು ಬಲವಂತವಾಗಿ ಕೂಡಿಸಿಕೊಂಡಳು. ನಾಗಪ್ಪನವರು ಲೋಕಾಭಿರಾಮದ ಮಾತಿಗೆ ಮೊದಲುಮಾಡಿದರು. ಆದರೆ ಉದ್ದೇಶ ಪೂರ್ವಕವಾಗಿಯೇ ನಾಗಪ್ಪನವರು ಮಾತನಾಡುತ್ತಿರುವರೆಂದು ತಿಳಿದುಕೊಂಡಳು ಪದ್ಮಮ್ಮ.

"ರತ್ನ ಏನು ಓದುತ್ತಿದ್ದಾಳೆ ?"

"ಈಸಾರಿ ಕಾಲೇಜಿಗೆ ಸೇರುತ್ತಾಳೆ !"

"ಅಂದಹಾಗೆ ಅವಳು ನಮ್ಮ ಕಿಟ್ಟು ಜೊತೆಯಲ್ಲವೇ ?"

"ಹೌದು, ಇಬ್ಬರಿಗೂ ಒಂದೇ ವಯಸ್ಸು !"

"ಹುಡುಗಿಯ ಹೆಸರಿನಲ್ಲಿ ಐದು ಸಾವಿರವೋ ಏನೋ ಇನ್ಷೂರೆನ್ಸ್ ಇದೆ ಅನ್ನುತ್ತಿದ್ದಳು ವೆಂಕು. ಅದೇನಾಯಿತು ?"

"ಹಾಗೆಯೇ ಇದೆ"

" .ಮತ್ತೆ ಹುಡುಗೀಗೆ ಒಂದು ದಾರಿ ಮಾಡಿಬಿಡೋದು ತಾನೇ ?"

"ಮಾಡಬೇಕು........"

"ಮಾಡಬೇಕೂಂತ ಸುಮ್ಮನಿದ್ದರೆ ಆಗುತ್ತದೆಯೇ ?"

"ಇಲ್ಲ, . ಈ ವೈಶಾಖದಲ್ಲಿಯೇ ಮಾಡಿಬಿಡಬೇಕು ಅಂತ ಏರ್ಪಾಟು ಮಾಡುತ್ತಿದ್ದೇನೆ"

"ತುಂಬ ಸಂತೋಷ ಆದಷ್ಟು ಬೇಗ ಮಾಡಿ ಕೊಟ್ಟುಬಿಟ್ಟರೆ ನಿಮಗೂ ನಿಶ್ಚಿಂತೆ"

ಪದ್ಮಮ್ಮ ಬೆಳ್ಳಿಯ ಚಿಕ್ಕ ತಟ್ಟೆಯಲ್ಲಿ ಉಪ್ಪಿಟ್ಟು – ಬೆಣ್ಣೆ ತಂದುಕೊಟ್ಟಳು. ಅವರು ಚಪ್ಪರಿಸುತ್ತಾ ತಿನ್ನುತ್ತಿದ್ದುದನ್ನು ಕಂಡು ಪದ್ಮಮ್ಮ – ಬೀಗರಾಗುವ ತನ್ನ ನಾದಿನಿಯ ಗಂಡ ಎಷ್ಟು ಒಳ್ಳೆಯವರು ಎಂದುಕೊಂಡಳು. ಇನ್ನೊಂದು ಬಾರಿ ಕಾಫಿಯಾಯಿತು. ಹೊರಟು ನಿಂತ ನಾಗಪ್ಪ ಮಗನಕಡೆ ತಿರುಗಿ—

"ಮಧ್ಯಾಹ್ನದ ರೈಲಿಗೆ ನಾನು ಹೊರಡುತ್ತೇನೆ. ನೀನೂ ಹೊರಟುಬಾ ಸ್ಟೇಷನ್ನಿಗೆ. ಸ್ವಲ್ಪ ಮಾತಾಡಬೇಕಾಗಿದೆ. ಊರಿನಲ್ಲಿಯೇ ನಾಲ್ಕು ದಿನವಿದ್ದು ಬರುವೆಯಂತೆ"

ಎಂದರು. ಸುಂದರು ಪದ್ಮಮ್ಮನ ಮುಖ ನೋಡಿದ. 'ಹೋಗಿ ಬಾ' ಎಂದು ಆಕೆಯೂ ಮೆಲು ದನಿಯಲ್ಲಿ ಸೂಚಿಸಿದಳು. ನಾಗಪ್ಪನವರು ನಾರಾಯಣನ ಮನೆಗೆ ಹೊರಟರು.

ಅವರು ಹೋಗುವುದನ್ನೇ ನೋಡುತ್ತಾ ನಿಂತಿದ್ದ ಪದ್ಮಮ್ಮನೂ ಸುಂದರುವೂ ಎರಡು ನಿಮಿಷಗಳ ಬಳಿಕ ಒಳಗೆ ಬಂದರು.

"ನೋಡಿದೆಯಾ ಸುಂದರು, ರತ್ನಳನ್ನು ಸೊಸೆಯಾಗಿ ಮಾಡಿ

ಕೊಳ್ಳುವುದಕ್ಕೆ ಅವರಿಗೂ ಆಸೆ ಇದೆ !"

"ಹೌದು, ಅತ್ತೆ. ಅಪ್ಪನ ಮನಸ್ಸು ಸರಿಯಾಗಿ ತಿಳಿದು ಕೊಳ್ಳುವುದೇ ಕಷ್ಟ"

"ಏನೋ ಈ ವೈಶಾಖದಲ್ಲಿಯೇ ನಿಮ್ಮಿಬ್ಬರ ತಲೆಯ ಮೇಲೆ ಅಕ್ಕಿಕಾಳು ಬಿದ್ದರೆ–ನಿಮ್ಮ ತಂದೆ ಹೇಳಿದ ಹಾಗೆ ನನಗೆ ನಿಶ್ಚಿಂತೆ"

ಎನ್ನುತ್ತಾ ಅಡಿಗೆಯ ಕೆಲಸಕ್ಕೆ ಹೋದಳು ಪದ್ಮಮ್ಮ. ಸುಂದರು ತನ್ನ ಕೋಣೆಯಲ್ಲಿ ಹೋಗಿ ಕುಳಿತುಕೊಂಡ. ಅಲ್ಲಿ ನಗುತ್ತಿದ್ದ ರತ್ನಳ ಭಾವಚಿತ್ರ ಅವನನ್ನು ರಮಿಸಿತು. ಆದರೆ ಅಷ್ಟರಲ್ಲಿ ಕಿಟಕಿಯ ಹೊರಗೆ ಬಂದು ನಿಂತ ಸ್ವರ್ಣ—

"ಹಲ್ಲೋ ಡಾರ್ಲಿಂಗ್ !" ಎಂದಳು. ಸುಂದರು ಅವಳನ್ನು ನೋಡಿದೊಡನೆ ತಿರಸ್ಕಾರದ ಮುಖಭಾವದಿಂದ ಎದ್ದು ನಿಂತ.

"ಯಾಕೆ ಡಾರ್ಲಿಂಗ್ ಕುಳಿತುಕೊಳ್ಳಿ!"

"ಡಾರ್ಲಿಂಗ್ ಅಲ್ಲ–ಡಾರ್ಜಿಲಿಂಗ್!" ಎಂದ ಸುಂದರು.

"'ಡಾಲರ್ ಪ್ರಿನ್ಸೆಸ್' ಮರೆತುಹೋಯಿತೆ ಸುಂದರು?"

"ಜ್ಞಾಪಕವಿದ್ದರೆ ತಾನೆ ಏನು?"

"ಹಾಗಾದರೆ 'ಡಾಲರ್ ಪ್ರಿನ್ಸೆಸ್' ಬಯಸಿದವನನ್ನು ಮದುವೆಯಾದದ್ದು ಜ್ಞಾಪಕವಿದೆ ತಾನೆ?"

"ಅದರಿಂದ ನಿನಗೆ ಬಂದ ಭಾಗ್ಯವೇನು?"

"ನನಗೂ ಅದೇ ಭಾಗ್ಯ ದೊರಕಿದೆ ಸುಂದರು".

"ಅದು ನಿನ್ನ ಭಾಗ್ಯವೋ ಅಥವಾ ಅವನ ದೌರ್ಭಾಗ್ಯವೋ".

"ಇಬ್ಬರಿಗೂ ದೊಡ್ಡ ಭಾಗ್ಯ!".

"ಅದು ಸಾಧ್ಯವೇ ಇಲ್ಲ"

"ಸಾಧ್ಯವಾಗಿದೆ ಸುಂದರು !"

"ಸುಳ್ಳು...."

"ಸುಳ್ಳೋ ನಿಜವೋ, ಈ ತಿಂಗಳು ಇಪ್ಪತ್ತಾರನೇ ತಾರೀಖು ಗೊತ್ತಾಗುತ್ತದೆ!"

ಅಣಕಿಸುವ ಧ್ವನಿಯಲ್ಲಿ ನುಡಿದ ಸ್ವರ್ಣ ಅಟ್ಟಹಾಸದ ಹೆಜ್ಜೆಯಿಡುತ್ತಾ ಹೊರಟು ಹೋದಳು. ಸುಂದರುವಿನ ತಲೆಯಲ್ಲಿ ಒಂದು

ದೊಡ್ಡ ಗೊಂದಲವೇ ಆರಂಭವಾಯಿತು....

ಸ್ವರ್ಣಳ ಮಾತು ನಿಜವೇ ?

ನಿಜವಾದರೆ, ತಾನು ಅವಳ ಕೈಹಿಡಿಯಬೇಕೆ?

ತಂದೆ!ಅದಕ್ಕೋಸ್ಕರವೇ ಬಂದಿದ್ದರೆ?

ಅವರಿಗೆ ಹೇಗೆ ಪರಿಚಯ–ಸ್ವರ್ಣಳ ತಂದೆ ?

ಬಹುಶಃ ಸ್ವರ್ಣಳೇ ತನ್ನ ತಂದೆಯನ್ನು ಅಗ್ರಹಾರಕ್ಕೆ ಕಳುಹಿಸಿ ನಿಶ್ಚಯಿಸಿಕೊಂಡು ಬಂದಿರಬಹುದೆ? ಆದರೆ ತನ್ನನ್ನೊಂದು ಮಾತು ಕೇಳದೆ ತಂದೆ–ತಾಯಿ ಹೇಗೆ ಸಮ್ಮತಿಸಿದರು ?

ಹಾಗಿರಲಾರದು, ಸ್ವರ್ಣ ನಗೆಯಾಟಕ್ಕೆ ಹಾಗೆ ಹೇಳಿರ ಬಹುದು !

ಒಂದುವೇಳೆ ಅವಳ ಮಾತೇ ನಿಜವಾದರೆ .... ತಾನೇನು ಮಾಡಬೇಕು ? ರತ್ನಳ ಗತಿ ಏನು ? ಅತ್ತೆಯ ಗತಿ ಏನು ?

ಹಾಗಿದ್ದರೆ ತಂದೆಯನ್ನು ಪ್ರತಿಭಟಿಸಬೇಕು. ತಾಯಿಯನ್ನು ಎದುರಿಸಬೇಕು. ಆ ಮದುವೆಯನ್ನು ತಡೆಯಬೇಕು....

ಮೇಜಿನ ಮೇಲೆ ತಲೆಯಿಟ್ಟು ಯೋಚನೆಯಲ್ಲಿ ಮೈಮರೆತಿದ್ದ ಸುಂದರು.

"ಇದೇನು ಹಗಲು ಹೊತ್ತೂ ನಿದ್ದೆ ?"

ರತ್ನಳ ಧ್ವನಿ ಅವನನ್ನು ಎಚ್ಚರಿಸಿತು. ಮೆಲ್ಲನೆ ತಲೆಯೆತ್ತಿ ಅವಳನ್ನು ನೋಡಿದ ಸುಂದರು.

"ಯಾಕೆ ಮುಖವೆಲ್ಲಾ ಒಂದು ತರಹ ಇದೆ?"

"ಏನೂ ಇಲ್ಲ ರತ್ನ" ಎನ್ನುತ್ತಾ ಸುಂದರು ಮುಖ ತೊಳೆಯಲು ಬಚ್ಚಲು ಕೋಣೆಗೆ ಹೋದ. ಅವನೇಕೆ ಹಾಗಿದ್ದಾನೆ ಎನ್ನುವಂತೆ ನೋಡಿದಳು ರತ್ನ.

ಊಟಕ್ಕೆ ಕುಳಿತಾಗ "ಅಮ್ಮನನ್ನು ನಾನು ಕೇಳಿದೆನೆಂದು ಹೇಳು ಸುಂದರು" ಎಂದರು ಪದ್ಮಮ್ಮ.

"ಆಗಲಿ ಅತ್ತೆ"

"ಬೇಗನೆ ಬಂದು ಬಿಡಪ್ಪ".

"ಹ್ಞಾ"

"ನಮ್ಮ ಏರ್ಪಾಡುಗಳನ್ನೆಲ್ಲಾ ನಾವು ಮಾಡಿಕೊಳ್ಳಬೇಕು"

"ಅದೇನು ದೊಡ್ಡ ಕೆಲಸ ಅತ್ತೆ ?"

"ಜವಳಿ ತರಬೇಕು. ಬೆಳ್ಳಿ ಸಾಮಾನು ಮಾಡಿಸಬೇಕು. ಬೇಕಾದಷ್ಟು ಕೆಲಸವಿದೆಯಪ್ಪ"

"ಗಂಡು ಬೇರಯವನಾಗಿದ್ದರೆ, ಅದೆಲ್ಲಾ ಮಾಡಿಸಬೇಕು. ನನಗೇಕೆ ಅವೆಲ್ಲಾ ?"

"ಸಂಪ್ರದಾಯ, ರೂಢಿ ತಪ್ಪಿಸಬಾರದು"

"ಏನು ರೂಢಿಯೋ, ಏನು ಸಂಪ್ರದಾಯವೋ"

"ಸುಂದರು ಇನ್ನೊಂದು ಮಾತು...."

"ಅದೇನು ಹೇಳು ಅತ್ತೆ"

"ನಿಮ್ಮ ತಂದೆ ವರದಕ್ಷಿಣೆ ಕೇಳುತ್ತಾರೇನೋ ! ಎಷ್ಟುಕೊಡಬೇಕು ಅಂತ ಕೇಳಿಕೊಂಡು ಬಾಪ್ಪ"

"ನನಗೂ ವರದಕ್ಷಿಣೆ ಕೊಡಬೇಕೇ ಅತ್ತೆ ?"

"ನಿಮ್ಮ ತಂದೆ ಕೇಳಿದರೆ ಕೊಡಬೇಕಾಗುತ್ತೆ ಸುಂದರು"

"ಚಿಕ್ಕಂದಿನಿಂದ ಬೆಳಸಿ, ವಿದ್ಯೆ ಕಲಿಸಿ, ನನ್ನನ್ನು ದೊಡ್ಡವನನ್ನಾಗಿ ಮಾಡಿ, ಜನ್ಮ ಜನ್ಮಕ್ಕೂ ತೀರಿಸಲಾಗದಷ್ಟು ಋಣ ಹೊರಿಸಿದ್ದೀರಿ. ಇನ್ನು ವರದಕ್ಷಿಣೆಯ ಋಣವನ್ನೂ ಹೇರಿ ನನ್ನನ್ನು ಯಾವ ನರಕಕ್ಕೆ ತಳ್ಳುತ್ತೀ ಅತ್ತೆ ?"

"ಹಾಗನ್ನಬಾರದು ಸುಂದರು. ನಾಲ್ಕು ಜನ ಹೇಳಿದ ಹಾಗೆ ನಾವು ನಡೆದು ಕೊಳ್ಳಬೇಕು. ಇಲ್ಲದಿದ್ದರೆ ನಮ್ಮನ್ನು ಯಾರೂ ವಿಚಾರಿಸುವುದೇ ಇಲ್ಲ. ನಾಯಿ ಮುಟ್ಟಿದ ಮಡಕೆಯ ಹಾಗೆ ನೋಡುತ್ತಾರೆ".

ಸುಂದರು ಮೌನವಾದ.

"ನನ್ನ ಮದುವೆಯಲ್ಲಿ ನಮ್ಮ ತಂದೆ ಐದುಸಾವಿರ ರೂಪಾಯಿ ವರದಕ್ಷಿಣೆ ಕೊಟ್ಟರು. ಅದನ್ನು ತೆಗೆದುಕೊಳ್ಳುವುದಕ್ಕೆ ನಿಮ್ಮ ಮಾವನಿಗೆ ಸ್ವಲ್ಪವೂ ಇಷ್ಟವಿರಲಿಲ್ಲ. ಅವರು ತಮ್ಮ ತಂದೆಯ ಮೇಲೆಯೇ ಕೋಪಮಾಡಿಕೊಂಡು ಕೂಗಾಡಿದರಂತೆ. ಆದರೂ ನಿಮ್ಮ ಅಪ್ಪಗ್ರಾಮದ ತಾತ–ನಮ್ಮ ಮಾವ–ಬಿಡಲಿಲ್ಲ. ಐದು ಸಾವಿರ ವಸೂಲು ಮಾಡಿಕೊಂಡರು !"

"ಈ ಹಾಳು ವರದಕ್ಷಿಣೆಯನ್ನು ಯಾರು ಮಾಡಿದರೋ!" ಎಂದು ಬೇಸರದಿಂದ ನುಡಿಯುತ್ತಾ ಸುಂದರು ಊಟ ಮುಗಿಸಿ ಎದ್ದ. ಅವನೊಡನೆಯೇ ತೇಗುತ್ತಾ ರತ್ನಳೂ ಎದ್ದಳು.

ಸುಂದರು ಉಡುಪುತೊಟ್ಟು, ಹೋಗಿಬರುತ್ತೇನೆಂದು ತನ್ನ ಅತ್ತಿಗೂ ರತ್ನಳಿಗೂ ಹೇಳಿ ರೈಲ್ವೆ ಸ್ಟೇಷನ್ನಿಗೆ ಹೊರಟ.

ಮೂರು ಗಂಟೆಗೆ ಹೊರಡುವ ರೈಲಿಗೆ ಇನ್ನೂ ಅರ್ಧಗಂಟೆ ಇದ್ದಿತು. ಸುಂದರು ಸ್ಟೇಷನ್ ತಲಪಿ, ಟಿಕೆಟ್ ಕೊಂಡು, ನಾಗಪ್ಪ ನವರನ್ನು ಹುಡುಕತೊಡಗಿದ.

ಮೊದಲನೆ ಗಂಟೆ ಬಾರಿಸಿದಾಗ, ನಾಗಪ್ಪನವರು ಏದುತ್ತಾ ಏದುತ್ತ ಪ್ಲಾಟ್‌ಫಾರ್ಮಿಗೆ ಓಡಿ ಬಂದರು. ಅವರ ಪರಿಸ್ಥಿತಿಯನ್ನು ಕಂಡ ಸುಂದರು ಸಣ್ಣಗೆ ನಕ್ಕ.

"ಇಲ್ಲೇ ಬಾ ಅಣ್ಣ, ಜಾಗ ಇದೆ"

ಸುಂದರು ತೋರಿಸಿದ ಪೆಟ್ಟಿಗೆಗೇ ಹತ್ತಿದರು ನಾಗಪ್ಪ. ಇಬ್ಬರೂ ಅಕ್ಕ ಪಕ್ಕದಲ್ಲಿಯೇ ಕುಳಿತರು. ತಮ್ಮ ಕೈ ಚೀಲದಿಂದ ಒಂದು ಕಿತ್ತಲೆ ಹಣ್ಣು ತೆಗೆದು ಸುಂದರುವಿಗೆ ಕೊಟ್ಟು, ತಾವೂ ಒಂದು ತೆಗೆದು ಕೊಂಡು ಸುಲಿಯುತ್ತಾ "ಇವತ್ತು ಪೇಟೆಯಿಂದ ಹೊರಟದ್ದೇ ತುಂಬ ತಡವಾಯಿತು" ಎಂದರು.

"ಇನ್ನೂ ಹೊತ್ತಿದೆ. ನಿಧಾನವಾಗಿ ಬರಬಹುದಾಗಿತ್ತು ಅಣ್ಣ" ಎಂದ ಸುಂದರು.

ಕಿತ್ತಲೆ ತೊಳೆ ಚಪ್ಪರಿಸುತ್ತಾ ನಾಗಪ್ಪನವರು ಎರಡು ನಿಮಿಷ ಯೋಚಿಸಿದರು: ಹನ್ನೆರಡು ಗಂಟೆಯ ಸುಮಾರಿನಲ್ಲಿ ತಾನು ನಾರಾಯಣನೊಡನೆ ಬ್ಯಾಂಕರನ ಮನೆಗೆ ಹೋಗಿ, ಅವನಿಗೆ ಹತ್ತುಸಾವಿರ ರೂಪಾಯಿಗಳನ್ನು ಬಡ್ಡಿಗೆ ಕೊಟ್ಟ ಸಂಗತಿಯನ್ನು ಹೇಳಲೇ ಬೇಡವೇ? ಹಣ ಕೊಟ್ಟ ತಕ್ಷಣವೇ ಆ ಬ್ಯಾಂಕರ್ ಬಡ್ಡಿಯ ದುಡ್ಡಿಗೆ ಒಂದು ಚೆಕ್ ಕೊಟ್ಟ ಸಂಗತಿಯನ್ನು ಸುಂದರನಿಗೆ ತಿಳಿಸಿದರೆ ಸಂತೋಷಪಡುತ್ತಾನೆ ಅಲ್ಲವೆ? – ಎಂದು ಕೊಂಡರು.

"ಇವತ್ತು ಒಂದು ಭಾರಿ ವ್ಯವಹಾರಕ್ಕೆ ಕೈ ಹಾಕಿದ್ದೇನೆ ಸುಂದರು"

"ಏನಣ್ಣ ಅದು?"

ನಾಗಪ್ಪನವರು ಬ್ಯಾಂಕರನೊಡನೆ ತಾವು ಮಾಡಿದ ವ್ಯವಹಾರವನ್ನು ವಿವರಿಸಿದರು. ರೈಲು ಓಡುತ್ತಿದ್ದಂತೆ ಮಾತು ಓಡಿತು....

"ಹತ್ತು ಸಾವಿರ ಎಲ್ಲಿತ್ತಣ್ಣ ನಿನಗೆ?"

ಸುಂದರುವಿನ ಆ ಪ್ರಶ್ನೆಗೆ, ರಾಘವಯ್ಯನವರು ಅಗ್ರಹಾರಕ್ಕೆ ಬಂದು ಲಗ್ನಪತ್ರಿಗೆ ಮಾಡಿಸಿಕೊಂಡು ಹೋದ ವಿಷಯುವನ್ನು ಹೇಳಬೇಕಾಯಿತು ನಾಗಪ್ಪ.

"ನನ್ನೊ ಒಂದು ಮಾತು ಕೇಳದೆ ಹೇಗೆ ಒಪ್ಪಿಕೊಂಡೆ ಅಣ್ಣ?"

"ನೀನು ಒಪ್ಪಿಯೋ ಒಪ್ಪುತ್ತೀ ಎಂದು ನನಗೆಗೊತ್ತು ಸುಂದರು"

"ಇಲ್ಲಣ್ಣ, ನನಗೆ ಖಂಡಿತವಾಗಿಯೂ ಒಪ್ಪಿಗೆಯಿಲ್ಲ"

"ನಾಲ್ಕು ಗ್ರಾಮಗಳ ಪಾಳ್ಯೇಗಾರನಾಗಿ ಮೆರೆಯಬೇಡವೆ ಸುಂದರು"

"ಅದರಲ್ಲಿ ನನಗೆ ಸಂತೋಷವಿಲ್ಲಣ್ಣ"

"ಹತ್ತು ಸಾವಿರ ಕೊಟ್ಟಿದ್ದಾರಪ್ಪ!"

"ಹತ್ತು ಲಕ್ಷ ಕೊಟ್ಟರೂ ನನಗೆ ಬೇಡಣ್ಣ".

"ಇಂಥ ಭಾಗ್ಯ ಯಾರಿಗುಂಟು ಯಾರಿಗಿಲ್ಲ! ಒಪ್ಪಿಕೋಬೇಕಪ್ಪ ಸುಂದರು"

"ಇಲ್ಲಣ್ಣ, ನಾನು ಆ ಹುಡುಗಿಯನ್ನು ಮದುವೆಯಾಗುವುದಿಲ್ಲ"

ರೈಲು ದೇವಲಾಪುರದ ಸ್ಟೇಷನ್ನಿನಲ್ಲಿ ನಿಂತಿತು. ತಂದೆ, ಮಗ ಇಳಿದು ಅಗ್ರಹಾರದ ಕಡೆಗೆ ಹೆಜ್ಜೆ ಹಾಕಿದರು.

"ನಾನು ಮಾತು ಕೊಟ್ಟು ಲಗ್ನಪತ್ರಿಕೆ ಮಾಡಿಸಿ ಕೊಂಡಿದ್ದೇನಪ್ಪ".

"ಅದಕ್ಕೆ ನಾನೇನು ಮಾಡಲಿ ಅಣ್ಣ?"

"ನೀನು ಒಪ್ಪಿಕೊಳ್ಳ ಬೇಕಪ್ಪ".

"ನನ್ನ ಬಲವಂತ ಮಾಡಬೇಡಣ್ಣ. ನಾನು ರತ್ನಳನ್ನೇ ಮದುವೆಯಾಗುತ್ತೇನೆ. ಅತ್ತೆಗೆ ದ್ರೋಹ ಮಾಡುವ ಮನಸ್ಸಿಲ್ಲ ನನಗೆ"

"ಹತ್ತು ಸಾವಿರ ಕೊಟ್ಟಿದ್ದಾರಪ್ಪ!"

"ಅಂಥ ಹತ್ತು ಸಾವಿರಗಳನ್ನು ಸಂಪಾದಿಸುವ ಶಕ್ತಿ

ನನಗಿದೆಯಣ್ಣ".

"ಆದರೂ ಸುಲಭವಾಗಿ ಬಂದುದನ್ನು ಬಿಡಬಾರದು.

"ನಿನಗೇನೋ ಸುಲಭ, ನನಗೆ ಕಷ್ಟ".

"ನಿನಗೇನಪ್ಪ ಕಷ್ಟ ?"

"ಕಷ್ಟ ಒಂದೇ ಅಲ್ಲ, ನಷ್ಟವೂ ಆಗುತ್ತದೆ".

"ಹಾಗನ್ನಬಾರದು ಸುಂದರು".

"ಅದೆಲ್ಲಾ ಸಾಧ್ಯವಿಲ್ಲ. ನಾನು ರತ್ನಳನ್ನೇ ಮದುವೆಯಾಗುತ್ತೇನೆ".

"ಈ ಹುಡುಗಿ ಏನಾಗಿದ್ದಾಳೋ?"

"ಆ ಹುಡುಗಿ ಏನಾಗಿದ್ದರೆ ಏನು ? ನನಗೆ ಇಷ್ಟವಿಲ್ಲ"

"ಭಾಗ್ಯಲಕ್ಷ್ಮಿ ಅವಳು".

"ಆದರೆ ನನ್ನ ಪಾಲಿಗೆ ದೌರ್ಭಾಗ್ಯ ಲಕ್ಷ್ಮಿ".

ಇಬ್ಬರೂ ಮೌನವಾದರು. ಅಗ್ರಹಾರ ಸಮೀಪಿಸಿತು. ದೂರದಿಂದಲೇ ಸುಂದರುವನ್ನು ನೋಡಿದ ಸಾವಿತ್ರಿ "ಸುಂದರಣ್ಣ ಬಂದ್ರು" ಎಂದು ರಾಗವಾಗಿ ಕೂಗುತ್ತಾ ತಾಯಿಗೆ ಸುದ್ದಿ ಮುಟ್ಟಿಸಿದಳು. ವೆಂಕಮ್ಮ ಅಂಗಳಕ್ಕೆ ಬಂದು ಎದುರುಗೊಂಡಳು. ಗಂಭೀರವಾಗಿದ್ದ ಮಗನ ಮುಖವನ್ನು ಕಂಡು, ನಡೆದ ಸಂಗತಿಯನ್ನು ಊಹಿಸಿಕೊಂಡಳು

"ನಿಮ್ಮ ಅತ್ತೆ ಚೆನ್ನಾಗಿದ್ದಾರೆಯೆ ? ರತ್ನ ಚೆನ್ನಾಗಿದ್ದಾಳೆಯೆ?"

ವೆಂಕಮ್ಮನ ಪ್ರಶ್ನೆಗಳಿಗೆಲ್ಲಾ ಚುಟುಕು ಉತ್ತರ ಕೊಟ್ಟು ಸುಮ್ಮನಾದ ಸುಂದರು.

ನಾಗಪ್ಪನವರು ಹೊರಗೆ ಹೋದನಂತರ, ಸುಂದರುವಿನ ಬಳಿಗೈದು ವೆಂಕಮ್ಮ–

"ಯಾಕೆ ಸುಂದರು, ಒಂದು ಥರಾ ಇದ್ದೀಯಾ ?"

"ಇನ್ನೇನಮ್ಮಾ, ನಿಮ್ಮಂಥ ತಾಯಿ–ತಂದೆಯರ ಹೊಟ್ಟೆಯಲ್ಲಿ ಹುಟ್ಟಿ ನಗುನಗುತ್ತಾ ಇರೋ ಮಕ್ಕಳು ಯಾರಿದ್ದಾರೆ ?"

ಕೆರಳಿದ ಸುಂದರು, ತಾಯಿಯ ಮುಖಕ್ಕೆ ರಾಚುವಂತೆ ಮೊಳೆ ಮಾತಿನ ಮಳೆಗರೆದ.

"ಸುಂದರು, ನಾನೇನು ಮಾಡಿದೆನಪ್ಪ ?"

"ಬೇಡವೆಂದು ಅಣ್ಣನನ್ನು ತಡೆಯುವುದಕ್ಕಾಗಲಿಲ್ಲವೇನಮ್ಮ?"

"ತಡೆಯದೆ ಸುಮ್ಮನಿರುತ್ತೀನೆಯೆ ಸುಂದರು. ಆದರೆ ನನ್ನ ಮಾತಿಗೆ ಬೆಲೆ ಬರಲಿಲ್ಲ. ಅವರು ಯಾವುದಕ್ಕೂ ನನ್ನನ್ನು ಕರೆಯಲೂ ಇಲ್ಲ. ಅತ್ತು ಅತ್ತು ನಾನು ಸುಮ್ಮನಾದೆ. ನಿಜ ವಾಗಿಯೂ ಇಂಥ ತಾಯಿ ಇದ್ದೂ ಪ್ರಯೋಜನವಿಲ್ಲ ಸುಂದರು".

"ನಾಲ್ಕು ದಿನದಿಂದ ಅಮ್ಮ ಒಂದೇ ಸಮನೆ ಅಳುತ್ತಿದ್ದಾಳೆ ಅಣ್ಣಯ್ಯ. .ಊಟವೂ ಮಾಡಲಿಲ್ಲ...."

ಎಂದು ಸುಮಿತ್ರೆಯೂ ಅಳು ಧ್ವನಿಯಲ್ಲಿ ಹೇಳಿದಳು. ಅದು ನಿಜವೆಂದು ವೆಂಕಮ್ಮನ ಕಣ್ಣುಗಳೂ ಸಾರಿದವು. ತಾಯಿಯ ಪರಿ ಸ್ಥಿತಿಯನ್ನು ಅರ್ಥಮಾಡಿಕೊಂಡ ಸುಂದರು :

"ಅತ್ತಿಗೆ ಈ ಸಮಾಚಾರ ತಿಳಿದರೆ ಏನಾಗುತ್ತದೆ ಗೊತ್ತೇ ನಮ್ಮ?"

"ಕಣ್ಣೀರಿನಲ್ಲಿ ಕೈತೊಳೆಯುತ್ತಾಳೆ"

"ಅಮ್ಮ, ರತ್ನ ಏನಾದರೂ ಮಾಡಿಕೊಂಡು ಬಿಟ್ಟರೆ........? ನನ್ನನ್ನೇ ತುಂಬ ನಂಬಿಕೊಂಡಿದ್ದಾಳೆ ಅವಳು".

"ಹೌದು, ಸುಂದರು. ಈ ಸುದ್ದಿ ತಿಳಿದರೆ, ಅವಳು ಪ್ರಾಣ ತೆಗೆದುಕೊಳ್ಳುವುದಕ್ಕೂ ಹಿಂದು ಮುಂದು ನೋಡುವುದಿಲ್ಲ!"

"ಇದೆಲ್ಲಾ ಯಾರಿಗೆ ಪ್ರೀತಿಯಮ್ಮ?"

"ನಿಮ್ಮ ತಂದೆಗೇ ಪ್ರೀತಿ ಮಗು".

"ಇದನ್ನು ತಪ್ಪಿಸುವುದು ಸಾಧ್ಯವಿಲ್ಲವೇನಮ್ಮ?"

"ನಿಮ್ಮ ತಂದೆಯ ಮಾನ ಹೋಗುವುದನ್ನು ನೀನು ನೋಡಿ ಕೊಂಡು ಸಹಿಸುತ್ತೀಯಾ ಸುಂದರು ?"

"ನನ್ನ ಬಾಳೆ ಹಾಳಾಗಿ ಹೋಗುವುದನ್ನು ನೋಡಿ ಹೇಗೆ ಸಹಿಸಲಿ ಅಮ್ಮ? ರತ್ನಳ ಪ್ರಾಣವೇ ಹೋಗುವುದನ್ನು ನೋಡಿ ಹೇಗೆ ಸಹಿಸಲಮ್ಮ? ಅತ್ತೆಯ ಸಂಸಾರವೇ ಕಣ್ಣೀರಿನ ಕಡಲಾಗು ವುದನ್ನು ನೋಡಿ ಹೇಗೆ ಸಹಿಸಲಮ್ಮ?"

"ಸಹಿಸುವ ಶಕ್ತಿಯನ್ನು ದೇವರಲ್ಲಿ ಬೇಡಬೇಕು ಕಂದ".

"ಇವೆಲ್ಲಕ್ಕಿಂತ ಅಣ್ಣನ ಮಾನ ಹೆಚ್ಚೇನಮ್ಮ?"

ಸುಂದರುವಿನ ಆ ಮಾತಿಗೆ ಉತ್ತರಿಸಲಾರದೆ ತತ್ತರಿಸಿದಳು ವೆಂಕಮ್ಮ. ಕೆನ್ನೆಯಮೇಲೆ ವಾಹಿನಿಯಾಗಿ ಬರುತ್ತಿದ್ದ ಕಣ್ಣೀರ ಧಾರೆಯನ್ನು ಸೆರಗಿನ ತುದಿಯಿಂದ ಒರೆಸಿಕೊಳ್ಳುತ್ತಾ

"ನಾನೇನು ಹೇಳಲಪ್ಪ....?" ಎಂದು ನುಡಿದು ಸುಮ್ಮನಾದರು.

ಅವರು ಏನೂ ಮಾಡುವಂತಿರಲಿಲ್ಲ. ನಾಗಪ್ಪನವರ ಕಪಿಮುಷ್ಠಿ ಅಷ್ಟು ಭದ್ರವಾಗಿತ್ತು. ಅವರು ಹಿಡಿದ ಪಟ್ಟು ಗೆಲ್ಲಲೇಬೇಕೆಂದು ನಿಶ್ಚಯಿಸಿದ್ದರು. ಎಂತಲೇ ಅಚ್ಚಾಗಿ ಬಂದ ಲಗ್ನಪತ್ರಿಕೆಗಳನ್ನು ಬಂಧು ಬಳಗಕ್ಕೆಲ್ಲಾ ವಿಜಯೋತ್ಸಾಹದಿಂದ ಹಂಚಿದರು.

ಸುಂದರು ಬರಲಿಲ್ಲವೆಂದು ಕಾದು ಚಿಂತಿಸುತ್ತಿದ್ದ ಪದ್ಮಮ್ಮನಿಗೂ ಸುಂದರುವಿನ ಲಗ್ನಪತ್ರಿಕೆ ತಲುಪಿತು. ಆವಳು ಮೂರ್ಛಿತಳಾದಳು.

೮

"ಅಯ್ಯೋ, ಅಪ್ಪಾ! ನಾನತ್ತೆ! ಹ್ಹಾ!" ಎಂದು ನರಳುತ್ತಾ ಶ್ರೀನಿವಾಸ ಮೆಲ್ಲ ಮೆಲ್ಲನೆ ಬಂದು ಬಾಗಿಲು ತಟ್ಟಿದ. ನಿದ್ರೆಬಾರದ ಕಿಟ್ಟು, ಆ ಧ್ವನಿ ತನಗೆ ಕೇಳಿಸಿದರೂ ಕೇಳಿಸದವನಂತೆಯೇ ಮಲಗಿದ್ದ. ಕತ್ತಲೆ ಎಂದರೆ ಅವನಿಗೆ ತುಂಬ ಹೆದರಿಕೆ. ಎಂತಲೇ ಬಾಗಿಲು ತೆಗೆಯಲು ಹೆದರಿದ್ದ. ಶ್ರೀನಿವಾಸನ ನರಳಿಕೆ ಹೆಚ್ಚಾಗಿ, ಧ್ವನಿಏರಿದಾಗ, ತಟ್ಟನೆ ಎಚ್ಚರಗೊಂಡ ವೆಂಕಮ್ಮ ದೀಪ ಹೊತ್ತಿಸಿ, ಮಗನ ವಾಣಿಯನ್ನು ಗುರುತು ಹಿಡಿದು ಬಾಗಿಲು ತೆರೆದಳು.

"ಇಷ್ಟು ಹೊತ್ತಾಗಿ ಎಲ್ಲಿಗೆ ಹೋಗಿದ್ದೆಯೋ ಶೀನು ?"

ಶೀನು ಉತ್ತರಿಸುವ ಸ್ಥಿತಿಯಲ್ಲಿರಲಿಲ್ಲ.

ಅವನ ನರಳಿಕೆಯಿಂದ ಗಾಬರಿಕೊಂಡ ವೆಂಕಮ್ಮ, ದೀಪವನ್ನು ಅವನ ಮುಖದ ಹತ್ತಿರ ಹಿಡಿದು ನೋಡಿದಳು. ತಲೆಯಿಂದ ಸುರಿಯುತ್ತಿದ್ದ ರಕ್ತವನ್ನು ನೋಡಿ ಚೀರಿಕೊಂಡಳು ವೆಂಕಮ್ಮ.

"ಅಯ್ಯಯ್ಯೋ ಬನ್ನೀಂದ್ರೆ....ಬೇಗಬನ್ನೀ ಅಂದ್ರೆ".

ಎಂದು ನಾಗಪ್ಪನವರನ್ನು ಎಬ್ಬಿಸಿದಳು. ಮಲಗಿದ್ದ ಹುಡುಗರೂ ಎದ್ದು ಬಂದರು. ಅಕ್ಕ ಪಕ್ಕದ ಮನೆಯವರೆಲ್ಲಾ ಆ ಅರ್ಧ ರಾತ್ರಿಯಲ್ಲಿ ಗುಂಪು ಕೂಡಿದರು.

ಶೀನುವಿನ ಮೊಣಕಾಲಿನ ಮೂಳೆ ಮುರಿದುಹೋಗಿತ್ತು. ಎಡಗೈ ಸ್ವಾಧೀನ ತಪ್ಪಿತ್ತು. ಬೆನ್ನಿನಮೇಲೆ ಅಗಲವಾದ ಗಾಯವಾಗಿ ನೆತ್ತರು ಬುಳುಬುಳನೆ ಹರಿಯುತ್ತಾ ಅಲ್ಲಲ್ಲೇ ಹೆಪ್ಪುಗಟ್ಟಿ ನಿಂತು, ಮತ್ತೆ ಮುಂದೆ ಮುಂದೆ ವಾಹಿನಿಯಾಗಿ ಬರುತ್ತಿತ್ತು. ತಲೆಗೆ ಬಿದ್ದಿದ್ದ ಪೆಟ್ಟು ಕ್ರಮವಾಗಿ ಶೀನುವಿನ ಸ್ಮೃತಿಯನ್ನೇ ತಪ್ಪಿಸಿತು. ಅತೀವ ರಕ್ತಸ್ರಾವದ ಫಲವಾಗಿ ಅವನು ಹೊರಳಿಬಿದ್ದ.

ವೆಂಕಮ್ಮ ಕಿಟ್ಟನೆ ಕಿರಿಚಿದಳು. ನಾಗಪ್ಪನವರು ಅವನ ಮೂಗಿನ ಬಳಿ ಕೈಯಿಟ್ಟು ಉಸಿರಾಡುತ್ತದೆಯೆಂದು ದೃಢಪಡಿಸಿಕೊಂಡು ನಾಣಿಯನ್ನು ಕರೆಯ ಪಂಡಿತರ ಮನೆಗೆ ಅಟ್ಟಿದರು.

ಸ್ವಲ್ಪಹೊತ್ತಿನ ನಂತರ ಬಂದ ಪಂಡಿತರು, ರಕ್ತ ನಿಲ್ಲಲು ಯಾವುದೋ ಪುಡಿಯನ್ನು ಒತ್ತಿ, ಗಾಯಗಳಿಗೆಲ್ಲಾ ತಮ್ಮ ಪ್ರಸಿದ್ಧ ಕೆಂಪು ಮುಲಾಮು ಹಚ್ಚಿ ಬಟ್ಟೆ ಕಟ್ಟಿದರು. ಮೆಲ್ಲನೆ ಶ್ರೀನಿವಾಸನನ್ನು ಒಳಗೆ ಸಾಗಿಸಿ ಮಲಗಿಸಿದ ಮೇಲೆ ನೆರೆದಿದ್ದವರೆಲ್ಲಾ ತಮ್ಮತಮ್ಮ ಮನೆಗಳಿಗೆ ಹಿಂತಿರುಗಿದರು. ಆದರೆ ಹೀಗಾಗಲು ಕಾರಣವೇನೆಂದು ಯಾರಿಗೂ ತಿಳಿದಿರಲಿಲ್ಲ. ಅದನ್ನು ಊಹಿಸಿ, ನಿಜಸಂಗತಿಯನ್ನು ಸ್ವಲ್ಪ ಮಟ್ಟಿಗೆ ತಿಳಿದುಕೊಂಡಿದ್ದವರು, ಕಣ್ಣು ಕಾಣದಷ್ಟು ವೃದ್ಧರಾಗಿದ್ದ ನೆರಮನೆಯ ಶ್ಯಾನುಭೋಗರೊಬ್ಬರೇ !

ಎರಡು ತಿಂಗಳ ಹಿಂದೆ ಶ್ಯಾನುಭೋಗರು ಕಷ್ಟಪಟ್ಟು ಕೋಟೆ ತಾಲ್ಲೂಕು ಕಚೇರಿಗೆ ನಡೆದುಕೊಂಡು ಹೋಗಿ, ಹಿಂತಿರುಗಿ ಬರುವಾಗ ಕೈಲಾಗದೆ, ಆಯಾಸದಿಂದ ಮಾರ್ಗಮಧ್ಯದಲ್ಲಿ ಕುಳಿತು ಬಿಟ್ಟಿದ್ದರು. ಅವರಿಗಾಗಿಯೋ ಬಂದಿತೇನೋ ಎನ್ನುವಂತ ಸಿಂಗನಹಳ್ಳಿಯ ಗೌಡರ ಗಾಡಿಗಳೆರಡು ಕೋಟೆಯ ಕಡೆಯಿಂದ ಬಂದವು. ಗಾಡಿ ಹೊಡೆಯುತ್ತಿದ್ದ ಗೌಡರ ಮೊದಲನೆಯ ಅಳಿಯ ಶ್ಯಾನುಭೋಗರನ್ನು ಕಂಡು ಗಾಡಿ ನಿಲ್ಲಿಸಿ, ಅವರನ್ನು ಕೂಡಿಸಿಕೊಂಡ. ಆಗ ನಡೆದ ಮಾತಿನ ಮಧ್ಯೆ ಶ್ರೀನಿವಾಸನ ಸುದ್ದಿ ಬಂದಿತು.

"ಒಂದ್‌ದಿನ ಅವಯ್ಯಂಗೆ ಮೂಳೆ ಮುರಿತೀನಿ ಬುದ್ಧಿ....ಬಲೆ ಎಚ್ ಕೊಂಡ್‌ಬುಟ್ಟವ್ನೆ"

"ಅವನಮೇಲೆ ಯಾಕಪ್ಪಾ ಅಷ್ಟು ರೋಷ?" ಎಂದರು ಶಾನು ಭೋಗರು.

ಶ್ರೀನಿವಾಸ ಆಗಾಗ ಗೌಡರ ಎರಡನೆ ಮಗಳನ್ನು ಮಾತನಾಡಿ ಸುತ್ತಿದ್ದುದು, ಮೊದಲೊಂದುಬಾರಿ ಅವರ ಎರಡನೆ ಮಗಳನ್ನು ಕೆಣಕಿ, ಅವಳ ಕೈಯಿಂದ ಪೆಟ್ಟುತಿಂದುದು; ಒಂದು ದಿನ ಬಲವಂತ ಮಾಡಿ ಅವರ ಎರಡನೆಯ ಮಗಳನ್ನು ಕಣದ ಗುಡಿಸಿಲಿಗೆ ಎಳೆದು ಕೊಂಡು ಹೋದುದು; ಅಲ್ಲಿ ಆಕಸ್ಮಿಕವಾಗಿ ಗೌಡರು ಅವರಿಬ್ಬರನ್ನೂ ಕಂಡುದು, ಶ್ರೀನಿವಾಸನಿಗೆ ಅಲ್ಲೇ ಛೀಮಾರಿ ಹಾಕಿದುದು ಮೊದಲಾದ ಸಂಗತಿಗಳನ್ನೆಲ್ಲಾ ಗೌಡರ ಮೊದಲನೆಯ ಅಳಿಯ ಶ್ಯಾನುಭೋಗರಿಗೆ ಸಾದ್ಯಂತವಾಗಿ ವಿವರಿಸಿದ.

"ಆ ಹುಡುಗ ಮೊದಲಿನಿಂದಲೂ ಹಾಗೆಯೇ. ನಿಮ್ಮ ಹುಷಾರಿನಲ್ಲಿ ನೀವಿರಬೇಕು. ಆ ಹುಡುಗಿಗೂ ಬುದ್ಧಿ ಹೇಳಿರಿ"

ಎಂದು ಸಮಾಧಾನ ಪಡಿಸಿದ್ದರು ಶ್ಯಾನುಭೋಗರು.

ಆ ಬಳಿಕ, ಒಂದು ತಿಂಗಳು ಕಳೆದ ಮೇಲೆ ಆ ಎರಡನೆ ಹುಡುಗಿಗೆ ಅಗ್ರಹಾರದಲ್ಲಿದ್ದ ಮುದ್ದೇಗೌಡನ ಮಗನೊಡನೆ ಮದುವೆ ಯಾಯಿತು. ಹುಡುಗಿ ಗಂಡನ ಮನೆಗೆ ಬಂದಳು. ಶ್ರೀನಿವಾಸನಿಗೆ ತುಂಬ ಅನುಕೂಲವೇ ಆಯಿತು. ಹೊಂಚಿ ಹೊಂಚಿ ಆ ಹುಡುಗಿಯನ್ನು ಸಂಧಿಸಲು ಪ್ರಯತ್ನಿಸುತ್ತಿದ್ದ ಶ್ರೀನಿವಾಸನಿಗೆ, ಅವಳ ಮನೋಭಾವ ಬದಲಾಗಿರುವುದು ತಿಳಿದಿರಲಿಲ್ಲ. ಗಂಡನೊಡನೆ ಸುಖವಾಗಿ ಸಂಸಾರಮಾಡುತ್ತಿದ್ದ ಅವಳಿಗೆ ಶ್ರೀನಿವಾಸನ ಒಳಸಂಚಿನ ಅರಿವೂ ಇರಲಿಲ್ಲ

ಆ ರಾತ್ರಿ ಗೌಡರ ಅಳಿಯ ಹೊಲದ ಬಳಿಯ ಕಣಕ್ಕೆ ಹೋಗಿದ್ದವನು ಮನೆಗೆ ಬರುವ ವೇಳೆಗೆ ಬಹಳ ಹೊತ್ತಾಗಿತ್ತು. ಆದರೆ ಮನೆಯಲ್ಲಿ ತನ್ನ ಹೆಂಡತಿ ಕಾಣಿಸದಿದ್ದಾಗ ಅವನಿಗೆ ತುಂಬ ಗಾಬರಿಯಾಯಿತು. ಎಲ್ಲಿ ಹೋದಳೆಂದು ಚಿಂತಿಸುತ್ತಾ, ದನದ ಕೊಟ್ಟಿಗೆ ನೋಡಿ ಹಿತ್ತಲಿಗೆ ಹೋದ. ಅಲ್ಲಿ ತಿಪ್ಪೆಯ ಬಳಿ ನಿಂತಿದ್ದ ಶ್ರೀನಿವಾಸ ಗೌಡರ ಮಗಳ

ಸೀರೆಯನ್ನು ಸೆಳೆಯುತ್ತಾ ಅವಳನ್ನು ವಿವಸ್ತ್ರಳನ್ನಾಗಿ ಮಾಡು ತ್ತಿದ್ದುದು ಕಾಣಿಸಿತು. ಅವಳ ಸೆರಗು ಹಾರಿ, ಅರ್ಧ ಸೀರೆಯಷ್ಟೇ ಅವನ ಕೈಯಲ್ಲಿತ್ತು. ತುಂಬು ಜವ್ವನೆಯಾದ ಹುಡುಗಿ ತುಂಬಿದ ಎದೆಯನ್ನು ತೆರೆದುಕೊಂಡು ತುಂಬಿದ ಚಂದ್ರನ ಬೆಳಕಿನಲ್ಲಿ ಹೊಳೆಯು ತ್ತಿದ್ದುದನ್ನೂ, ಶ್ರೀನಿವಾಸನ ಹೊಲೆಗೆಲಸವನ್ನೂ ನೋಡಿ ಸಹಿಸ ಲಾರದೆ ಕೆರಳಿದ ಆ ಹುಡುಗಿಯ ಗಂಡ ದಡದಡನೆ ಓಡಿ ಬಂದು ಕೈಗೆ ಸಿಕ್ಕಿದ ಕಲ್ಲಿನಿಂದ ಶ್ರೀನಿವಾಸನ ತಲೆಗೆ ಹೊಡೆದು ಅದೇ ಕಲ್ಲಿನಿಂದ ಬೆನ್ನಿಗೂ ಬಡಿದು ಕೆಳಕ್ಕೆ ನೂಕಿದ. ಪರಿಸ್ಥಿತಿಯನ್ನು ಕಂಡು ಹೆದರಿದ ಹುಡುಗಿ ಅಳುತ್ತಿದ್ದಳು....

"ಒಳಗಿದ್ದೋಳ್ನ ಎಳ್ಕೊಂಡ್ ಬಂದು ಈವಯ್ಯ. ವ್ಹೂ ವ್ಹೂ"

ಅರ್ಧಕ್ಕೇ ನಿಂತ ಮಾತಿಗೆ ರಾಗಮಾಲಿಕೆ ನುಡಿಸಿದಳು ಹುಡುಗಿ. ತನ್ನ ಹೆಂಡತಿಯದೇನೂ ತಪ್ಪಿಲ್ಲವೆಂದು ಭಾವಿಸಿದ ಗೌಡರ ಅಳಿಯ ಅವಳನ್ನು ಕರೆದುಕೊಂಡು ಒಳಗೆ ಹೋದ. ಪೆಟ್ಟಿನಿಂದ ಕ್ಷಣಕಾಲ ಸ್ಮೃತಿತಪ್ಪಿದ ಶ್ರೀನಿವಾಸನೂ ಮೆಲ್ಲ ಮೆಲ್ಲನೆ ಎದ್ದು, ಹಿತ್ತಿಲ ಗೋಡೆಯನ್ನು ಹತ್ತಿಳಿದು ತನ್ನ ಮನೆಯ ಬಳಿಗೆ ಬಂದು ಬಿದ್ದಿದ್ದ.

ಈ ಸಂಗತಿಯಲ್ಲಿ ಅರ್ಧವನ್ನು ಶ್ಯಾನುಭೋಗರು ಊಹಿಸಿ ಕೊಂಡಿದ್ದರು. ಮರುದಿನ ಬೆಳಗಾದೊಡನೆ ಉಳಿದ ಸಂಗತಿ ಗೌಡರ ಅಳಿಯನಿಂದಲೇ ಬೆಳಕಿಗೆ ಬಂದಿತು. ಎರಡು ಊರುಗಳಿಗೂ ಸುದ್ದಿ ತಿಳಿಯುವುದು ತಡವಾಗಲಿಲ್ಲ. ಗೌಡರೂ, ಅವರ ಮೊದಲ ಅಳಿ ಯನೂ ಅಗ್ರಹಾರಕ್ಕೆ ಬಂದರು. ಅಷ್ಟರಲ್ಲಾಗಲೇ ನಾಗಪ್ಪನವರು–

"ಆ ಅಯೋಗ್ಯನಿಗೆ ಸರಿಯಾಗಿ ಬುದ್ಧಿ ಕಲಿಸುತ್ತೀವಿ. ಇನ್ನು ಸ್ವಲ್ಪದರಲ್ಲಿ ಪ್ರಾಣವೇ ಹೋಗುತ್ತಿತ್ತಲ್ಲ ಹುಡುಗನಿಗೆ. ಕ್ರಿಮಿನಲ್ ಕೇಸು ಹಾಕಿದರೆ ಆಗ ತಿಳಿಯುತ್ತೆ. ಅಯೋಗ್ಯ ಪುಂಡರು"

ಎಂದು ಗೌಡರ ಅಳಿಯನ ಮೇಲೆ ಕೂಗಾಡುತ್ತಿದ್ದರು.

"ನಿಮ್ಮ ಮಗನ ತಪ್ಪು ನೋಡಿಕೊಳ್ಳಿ ಸ್ವಾಮಿ"

ವೃದ್ಧರಾಗಿದ್ದ ಗೌಡರು, ಅಳಿಯನಿಗಾಗುತ್ತಿದ್ದ ಅವಹೇಳನೆ ವನ್ನು ಸಹಿಸಲಾರದೆ ಮಾತನಾಡಿದರು.

"ಅವನದೇನು ತಪ್ಪು? ಅವನ ಪಾಡಿಗೆ ಅವನು ಎಲ್ಲೋ ಹೋಗುತ್ತಿದ್ದ. ನಿಮ್ಮ ಅಳಿಯನೇ ಬೇಕಂತ ಅವನನ್ನು ಹೊಡೆದು, ಈಗ ಈ ಕಾರಣ ಹುಟ್ಟಿಸಿದ್ದಾನೆ".

"ಕಂಡವರನ್ನು ಹೊಡೆಯುವುದೇ ನನ್ನ ಅಳಿಯನಿಗೆ ಕೆಲಸ ಅಂತ ತಿಳಿದುಕೊಂಡಿದ್ದೀರಾ ಸ್ವಾಮಿ?"

"ಅವನು ಮಹಾಸಾಧ್ವೀಸ್ಟ ಅಂತವಹಿಸಿಕೊಂಡು ಬರುತ್ತೀರಲ್ಲ"

"ನಿಮ್ಮ ಮಗನ ಕೆಟ್ಟ ಗುಣ ನೀವು ಮುಚ್ಚಿಟ್ಟರೂ ಊರಿನವರೆಲ್ಲಾ ಮುಚ್ಚಿಡುವುದಕ್ಕಾಗುತ್ತದೆಯೋ ಸ್ವಾಮಿ?"

"ನಾಲಿಗೆ ಬಿಗಿಹಿಡಿದು ಮಾತಾಡಿ ಗೌಡರೇ. ನನ್ನ ಮಗನ ಗುಣ ನಿಮಗೇನು ಗೊತ್ತು?"

"ನನಗೇನು ಗೊತ್ತು. ಪ್ರಪಂಚಕ್ಕೇ ಗೊತ್ತು".

"ಕ್ರಿಮಿನಲ್ ಕೇಸು ಹಾಕ್ತೀನಿ. ಕೋರ್ಟಿನಲ್ಲಿ ವಾದಮಾಡಿ ಗೊತ್ತು ಪಡಿಸಿ" ಎಂದರು ನಾಗಪ್ಪ.

"ಕೋರ್ಟು ಕಚೇರಿ ಕಂಡಿರುವವರು ನೀವೆ ಅಲ್ಲ. ನೋಡೋಣ ಏನು ಮಾಡುತ್ತೀರೋ ಮಾಡಿ" ಎಂದು ಗೌಡರೂ ಸವಾಲು ಹಾಕಿ, ಶಾನುಭೋಗರ ಜಗುಲಿಗೆ ಬಂದು ಕುಳಿತರು. ಮೂವತ್ತು—ಮೂವತ್ತೈದು ವರ್ಷಗಳಿಂದ ಅವ್ಯಾಹತವಾಗಿ ಬೆಳೆದು ಬಂದಿದ್ದ ಗೌಡರ—ನಾಗಪ್ಪನವರ ಸ್ನೇಹಕ್ಕೆ ಶ್ರೀನಿವಾಸ ಆ ದಿನ ಭಾರಿ ಕೊಡಲಿ ಪೆಟ್ಟು ಹಾಕಿದ್ದ.

ನಾಗಪ್ಪನವರು ಕೂಡಲೇ ಗಾಡಿ ಕಟ್ಟಿಸಿಕೊಂಡು, ಮಗನನ್ನು ಮೆಲ್ಲನೆ ಮಲಗಿಸಿಕೊಂಡು, ಕೋಟೆ ತಾಲ್ಲೂಕಿಗೆ ಬಂದು, ಲೋಕಲ್ ಫಂಡ್ ಆಸ್ಪತ್ರೆಯ ಡಾಕ್ಟರಿಗೆ ತೋರಿಸಿದರು. ಅವರಿಂದ ಸರ್ಟಿಫಿಕೇಟ್ ಪಡೆದು, ಪೋಲೀಸಿನವರಿಗೆ ದೂರುಕೊಟ್ಟು, ಕ್ರಿಮಿನಲ್ ಕೇಸು ದಾಖಲೆ ಮಾಡಿಸಿದರು. ಆದರೂ ಅವರ ಮನಸ್ಸಿಗೆ ನೆಮ್ಮದಿಯಿರಲಿಲ್ಲ.

# ೯

ನೆಮ್ಮದಿ....!

ತಾನು ಕಟ್ಟಿದ ಕನಸಿನ ಸೌಧ ಪುಡಿ ಪುಡಿಯಾಗುತ್ತಿರುವಾಗ ರತ್ನಳಿಗೆಲ್ಲಿಯ ನೆಮ್ಮದಿ ?

ರತ್ನಳ ಮುಖವು ಕಪ್ಪಿಟ್ಟಿತ್ತು. ಪದ್ಮಮ್ಮನಂತೂ ನಿಶ್ಚೇಷ್ಟಿತಳಾಗಿ ಕುಳಿತು ಬಿಟ್ಟಿದ್ದಳು. ಆಚೆಯ ಮನೆಯಲ್ಲಿ ಮದುವೆಯ ಮಂಗಳವಾದ್ಯ ಘೋರ್ಗರೆಯುತ್ತಿದ್ದುದೂ ಆಕೆಗೆ ಕೇಳಿಸುತ್ತಿರಲಿಲ್ಲ. ದಿಕ್ಕು ತಪ್ಪಿದ ದೋಣಿ ನೀರಿನಲ್ಲಡಗಿದ್ದ ಬಂಡೆಗೆ ತಾಗಿದಂತಾಗಿತ್ತು ಅವಳ ಸ್ಥಿತಿ.

ವೆಂಕಮ್ಮ ಎಷ್ಟು ಬಾರಿ ಬಂದು ಕರೆದರೂ, ರತ್ನಳಾಗಲೀ ಪದ್ಮಮ್ಮನಾಗಲೀ ಮದುವೆಯ ಮನೆಗೆ ಹೋಗಲು ಇಚ್ಛಿಸಲಿಲ್ಲ. ಪದ್ಮಮ್ಮ ಒಂದೆರಡು ಬಾರಿ ತನ್ನ ಮನೆಯ ಹೊಸಲಿನವರೆಗೂ ಹೋಗಿ, ಮುಂದೆ ಹೆಜ್ಜೆಯಿಡಲು ಉತ್ಸಾಹವಿಲ್ಲದೆ, ಅಲ್ಲಿಯೇ ಕುಸಿದು ಕುಳಿತು ನಿಟ್ಟುಸಿರಿಬಿಟ್ಟಿದ್ದಳು. ರತ್ನಳಂತೂ ತನ್ನ ಕೋಣೆಯಲ್ಲಿ ಕುಳಿತು ಬಾಗಿಲು ಮುಚ್ಚಿಕೊಂಡು, ಸುಂದರುವಿನ ಮದುವೆಯ ಚಿತ್ರವನ್ನೇ ಕಲ್ಪಿಸಿಕೊಳ್ಳುತ್ತಾ ಕಣ್ಣೀರಿಡುತ್ತಿದ್ದಳು. ಮಂಗಳ ವಾದ್ಯಗಳು ಮೊಳೆದಾಗ–

... ಸುಂದರು ಸ್ವರ್ಣಳ ಕೊರಳಿಗೆ ತಾಳಿ ಕಟ್ಟಿದನೇನೋ ಎಂದುಕೊಂಡಳು. ಸ್ವಲ್ಪ ಹೊತ್ತಿನ ನಂತರ ಈಗ ಸುಂದರುವಿನ ಮುಂದೆ ಅಂತರ್ಪಟ ಹಿಡಿದಿರಬಹುದು, ಸ್ವರ್ಣ ತಾನೇ ಮೊದಲು ಸುಂದರುವಿನ ತಲೆಯ ಮೇಲೆ ಅಕ್ಕಿ ಕಾಳು ಸುರಿದಿರಬಹುದು. ಪುಷ್ಪ ತನ್ನ ಸುಂದರುವೇ ಮೊದಲು ಹಾಕಿರಬಹುದು....ಎಂದುಕೊಂಡಳು. ಅಂತಹ ಕಲ್ಪನಾ ಚಿತ್ರಗಳು ಅಗಣಿತವಾಗಿ ಅವಳ ಮನಃ ಪಟಲದ ಮೇಲೆ ಸುಳಿದು ಹೋದವು.

ಲಗ್ನ ಪತ್ರಿಕೆ ಕೈ ಸೇರಿದಾಗಿನಿಂದ ತಾಯಿ–ಮಗಳು, ಅನ್ನ–ನಿದ್ರೆಯೆಡೆಗೆ ಗಮನವಿಲ್ಲದೆ ದುಃಖಿಸುತ್ತಿದ್ದರು. ಊರಿಗೆಂದು ಹೋದ ಸುಂದರು ಮದುವೆಯ ದಿನದವರೆಗೂ ಆ ಮನೆಗೆ ಹೆಜ್ಜೆಯಿಟ್ಟಿರಲಿಲ್ಲ.

ಅವನೇ ಬಂದು, ಸಮಾಧಾನಮಾಡಿ, ಪ್ರೀತಿಯಿಂದ ಬಲವಂತಮಾಡಿ ತನ್ನನ್ನು ಕರೆದುಕೊಂಡು ಹೋಗುತ್ತಾನೇನೋ ಎಂದು ಪದ್ಮಮ್ಮ ನಿರೀಕ್ಷಿಸಿದ್ದಳು. ಆದರೆ ನಾಗಪ್ಪನವರ ಸೆರೆಯಲ್ಲಿದ್ದ ಸುಂದರುವಿಗೆ ಅವಕಾಶವೆಲ್ಲಿ?

ಊಟದ ಹೊತ್ತಿನಲ್ಲಿ ಬಂದ ವೆಂಕಮ್ಮ ಅತ್ತಿಗೆಯ ಕಾಲು ಹಿಡಿದುಕೊಂಡು-

"ಅತ್ತಿಗೆ, ನಿನ್ನ ದುಃಖ ನನಗೆ ಗೊತ್ತಿಲ್ಲವೆ? ಮಗನ ಮದುವೆ ಎಂದುಕೊಂಡು ನಾನು ಸಂತೋಷವಾಗಿರುವೆನೆಂದು ತಿಳಿದೆಯಾ? ನನ್ನದೆಯಲ್ಲಿ ಎಷ್ಟೊಂದು ದುಃಖವಿದೆ ಗೊತ್ತೆ? ಆದರೂ ನಾನು ನಗುತ್ತ ಎಲ್ಲವನ್ನೂ ಸಹಿಸಿಕೊಳ್ಳಬೇಕಾಗಿದೆ. ಮೊದಲನೆಯವನ ಗತಿ ಹಾಗಾಯಿತು. ಎರಡನೆಯವನಾದರೂ ತನ್ನ ಪಾಡಿಗೆ ತಾನು ಸುಖ ವಾಗಿರಲಿ ಎಂದುಕೊಂಡಿದ್ದೆ. ಆದರೆ ಅವನ ಗತಿ ಹೀಗಾಯಿತು. ನಾನು ಹೆತ್ತ ಮಕ್ಕಳ ಅದೃಷ್ಟ ಇದು" ಎಂದಳು. ಅವಳ ಕಣ್ಣುಗಳು ತುಂಬಿದ್ದವು. ತುಸು ತಡೆದು, ಮುಂದುವರಿಯಿತು-

"ರತ್ನ ನನ್ನ ಸೊಸೆಯಾಗುತ್ತಾಳೆಂದು ನನ್ನ ಅಣ್ಣನ ಕಾಲದಿಂದ ನಂಬಿಕೊಂಡಿದ್ದೆ. ಸುಂದರುವಂತೂ ಎಷ್ಟು ಕನಸು ಕಟ್ಟಿದ್ದನೋ. ಈ ಮದುವೆ ನಿಶ್ಚಯ ಮಾಡಿದ ಮೇಲಂತೂ ಅವನು ಭೂಮಿಗೇ ಇಳಿದು ಹೋದ. ನಗು ನಗುತ್ತಿದ್ದ ಅವನ ಮುಖ ಕಪ್ಪಾಯಿತು. ಒಳಗೇ ದುಃಖಿಸಿ ದುಃಖಿಸಿ ಕಣ್ಣು ಒಳಕ್ಕೇ ಹೋಯಿತು. ಗೆಲುವಾಗಿದ್ದ ಹುಡು ಗನಿಗೆ ಮುಪ್ಪು ಮುಚ್ಚಿಕೊಂಡಿತು. ಇದನ್ನೆಲ್ಲಾ ನೋಡಿಕೊಂಡು ನಾನು ಇನ್ನೂ ಬದುಕಿರಬೇಕೇ ಎನ್ನಿಸುತ್ತೆ"

ಅಳುತ್ತಳುತ್ತಾ ನುಡಿದಳು ವೆಂಕಮ್ಮ.

"ಇಂಥ ಸಮಯದಲ್ಲಿ ನನಗೆ ಸಮಾಧಾನ ಹೇಳುವುದಕ್ಕೆ ಯಾರಿದ್ದಾರೆ ಅತ್ತಿಗೆ? ನೀನೂ ನನ್ನ ಮೇಲೆ ಕೋಪಮಾಡಿಕೊಂಡು ಇಲ್ಲೇ ಕುಳಿತಿದ್ದೀಯ. ನಿನ್ನ ಸಂಕಟವೂ ನನಗೆ ಗೊತ್ತು. ಒಬ್ಬರಿಗೊಬ್ಬರು ಒತ್ತಾಸೆಯಾಗಿದ್ದರೆ, ಆ ದುಃಖ ಸಹಿಸಬಹುದು. ಹಾಗೆ-ಹೀಗೆ ಓಡಾಟದಲ್ಲಿ ಕ್ಷಣಕಾಲ ಮರೆಯಬಹುದು. ಏಳತ್ತಿಗೆ ಹೋಗೋಣ."

ಪದ್ಮಮ್ಮ ಉಪಾಯ ಗಾಣದೆ ಎದ್ದು ನಿಂತಳು. ನಾದಿನಿಯ

ಭುಜಕ್ಕೆ ಕೈಯ್ಯೂರಿಕೊಂಡು ಮೆಲ್ಲನೆ ಹೆಜ್ಜೆಯಿಟ್ಟಳು.

"ರತ್ನ ಎಲ್ಲಿ ಅತ್ತಿಗೆ?"

ವೆಂಕಮ್ಮನ ಪ್ರಶ್ನೆಗೆ ಉತ್ತರವಾಗಿ ಪದ್ಮಮ್ಮ ಕೋಣೆಯ ಕಡೆಗೆ ಕೈ ತೋರಿಸಿದಳು.

"ಅವಳೂ ಜೊತೆಯಲ್ಲಿರಲಿ ಅತ್ತಿಗೆ."

"ಬೇಡಮ್ಮ. ಅವಳು ಸೊರಗಿ ಹೋಗಿದ್ದಾಳೆ. ಆ ಮದುವೆಯ ಮನೆಗೆ ಬಂದರೆ ಅವಳ ಮನಸ್ಸು ಹುಚ್ಚಾಗುತ್ತದೆ"

"ಹಾಗಾದರೆ ನಮ್ಮ ಸುಮಿತ್ರೆಯನ್ನು ಕಳುಹಿಸುತ್ತೇನೆ, ಇಲ್ಲೇ ಅವಳ ಜೊತೆಯಲ್ಲಿರಲಿ. ನೀನು ಬಾ"

ವೆಂಕಮ್ಮ ಪದ್ಮಮ್ಮನನ್ನು ಕರೆದುಕೊಂಡು ರಾಘವಯ್ಯನವರ ಮನೆಗೆ ಬಂದಳು. ವಧೂವರರ ಬಳಿ ಕುಳಿತಿದ್ದ ಸುಮಿತ್ರೆಯನ್ನು ಕರೆದು, ರತ್ನಳಿಗೆ ಜೊತೆಯಾಗಿರಲು ಹೇಳಿ, ಕಳುಹಿಸಿದಳು.

ನಾಗಪ್ಪನವರು ಪದ್ಮಮ್ಮನ ಮುಖವನ್ನು ಕಂಡಾಗ, ಅಪರಾಧಿಯಂತೆ ತಮ್ಮ ಮುಖ ತಿರುಗಿಸಿಕೊಂಡರು. ಸುಂದರು ಮಾತ್ರ ವಿನಮ್ರನಾಗಿ ಅತ್ತೆಯ ಬಳಿಗೆ ಬಂದು, ಅವಳ ಪಾದಗಳ ಮೇಲೆ ತಲೆಯಿಟ್ಟು, ತನ್ನ ಕಣ್ಣೀರಿನಿಂದ ಅದನ್ನು ತೊಳೆದಾಗ, ಪದ್ಮಮ್ಮ ಗದ್ಗದ ಕಂಠದಿಂದ—

"ಅಳಬೇಡ ಸುಂದರು. ಇಷ್ಟು ದೊಡ್ಡವನಾಗಿ, ವಿದ್ಯಾವಂತನಾಗಿ ಹೀಗೆ ಅಳಬಾರದು ಮಗು. ಅಳುವುದಕ್ಕೆ ತಾನೆ ಏನಾಗಿದೆ? ಚಿನ್ನದಂತಹ ಹುಡುಗಿ ಸ್ವರ್ಣ. ಅಂತಹ ಹುಡುಗಿಯ ಕೈ ಹಿಡಿದಿದ್ದು ನಿನ್ನ ಪುಣ್ಯ. ಎಲ್ಲವೂ ಒಳ್ಳೆಯದಕ್ಕೇ ಆಗುತ್ತಿದೆ. ದೇವರ ಲೀಲೆ ವಿಚಿತ್ರ. ಅಳಬಾರದು ನನ್ನಪ್ಪ" ಎಂದು ನುಡಿದಾಗ ಅವರಿಗೇ ಅಳು ಬರುವಂತಾಗಿತ್ತು. ಅಷ್ಟರಲ್ಲಿ ಬಂದ ನಾಗಪ್ಪನವರು–"ಏಳಿ, ಏಳಿ, ಊಟಕ್ಕೆ ಎಲೆಹಾಕಿದೆ" ಎಂದು ಗಡಿಬಿಡಿ ಮಾಡಿದರು. ಸುಂದರು ತನ್ನ ಅತ್ತಿಗೆಗೆ ಇನ್ನೊಮ್ಮೆ ನಮಸ್ಕರಿಸಿ, ತಂದೆಯನ್ನು ಹಿಂಬಾಲಿಸಿದ.

ಸುಂದರು–ಸ್ವರ್ಣ ಅಕ್ಕಪಕ್ಕದಲ್ಲಿ ಕುಳಿತು ಪರಸ್ಪರ ಎಂಜಲು ತಿಂದರು. ಇತರರಿಗೆ ಅದೊಂದು ತಮಾಷೆಯಾಗಿದ್ದರೆ ಸುಂದರುವಿಗೆ

ದೊಡ್ಡ ಸಂಕಟವಾಗಿತ್ತು.

ಸಂಜೆಯ ಆರತಕ್ಷತೆ ಮುಗಿಯುವ ವೇಳೆಗೆ ಎಂಟುಗಂಟೆಯಾಯಿತು. ಶ್ರೀಮಂತ ಜನಾಂಗವೆಲ್ಲಾ ರಾಘವಯ್ಯನವರ ಚಪ್ಪರದಲ್ಲಿ ನೆರೆದು ವಧೂ-ವರರಿಗೆ ಬೆಲೆ ಬಾಳುವ ಉಡುಗರೆಗಳನ್ನು ಕೊಟ್ಟರು. ಸುಂದರುವಿಗೆ ಮಾತ್ರ ಅದೊಂದರ ಕಡೆಗೂ ಗಮನವಿರಲಿಲ್ಲ. ಅವನ ಮನಸ್ಸೆಲ್ಲಾ ರತ್ನಳ ಬಳಿಗೆ ಓಡಿಹೋಗಿದ್ದಿತು.

ನಾಗಪ್ಪನವರೂ ರಾಘವಯ್ಯನವರೂ ಕಲೆತು ಮಾತನಾಡಿ, ಮರುದಿನವೇ ಪ್ರಸ್ತಮಾಡಿಬಿಡುವುದು ಸೂಕ್ತವೆಂದು ನಿರ್ಧರಿಸಿದರು. ಅದನ್ನು ತಡೆಯುವವರಾರು ?

ಆದರೆ ಸ್ವರ್ಣ ತನ್ನ ತಾಯಿಯ ಬಳಿಗೆ ಬಂದು "ಈಗ ಬೇಡಮ್ಮ" ಎಂದು ಕೇಳಿಕೊಂಡಳು.

"ದೊಡ್ಡವರು ನಿಶ್ಚಯಿಸಿ ಬಿಟ್ಟಿದ್ದಾರೆ; ಆಗಿ ಹೋಗಲಿ ಸುಮ್ಮನಿರು ಸ್ವರ್ಣ"

"ಇಲ್ಲಮ್ಮ. ಇನ್ನೊಂದು ಸಾರಿ ಈ ಲಗ್ನ ಇಟ್ಟುಕೊಂಡರಾಯಿತು"

"ಏಕಮ್ಮ ?"

"ನನಗೀಗ ಇಷ್ಟವಿಲ್ಲಮ್ಮ"

"ಹಾಗನ್ನಬಾರದು ಸ್ವರ್ಣ"

"ಈ ಪ್ರಸ್ತ ಅನ್ನೋದನ್ನ ಇವತ್ತು ಹೇಗಾದರೂ ತಪ್ಪಿಸಿ ಬಿಡಮ್ಮ"

ಎಂದಿದ್ದರೂ ಒಂದು ದಿನ ಆಗಬೇಕಲ್ಲ. ಇವತ್ತೇ ಆಗಿ ಹೋಗಲಿ ಸುಮ್ಮನಿರು ಸ್ವರ್ಣ"

"ಭಯವಾಗುತ್ತೆ ಅಮ್ಮ ನನಗೆ"

"ಭಯಪಡಬೇಡಮ್ಮ. ಹೆಣ್ಣು ಮಕ್ಕಳು ಇಂಥಾ ದಿನಕ್ಕೆ ಕಾದಿರುತ್ತಾರೆ. ಸುಖ ಅನುಭವಿಸುವಾಗ ಸಂತೋಷಪಡಬೇಕು ಮಗು."

"ಪುಹ್ಲು ಕಣೆ, ನನಗೆ ಸಂತೋಷವೇ ಆಗೋಲ್ಲ"

"ರಾತ್ರಿಗಾಗುತ್ತೆ ಸುಮ್ಮನಿರು........"

ನಗುತ್ತಾ ಅನ್ನಪೂರ್ಣಮ್ಮ ಮಗಳ ತಲೆ ನೇವರಿಸಿದರು.

ಉಪಾಯ ಗಾಣವೆ ಸ್ವರ್ಣ ಒಪ್ಪಿಕೊಳ್ಳಬೇಕಾಯಿತು. ಹಗಲೆಲ್ಲಾ ಮುಖ ಬಾಡಿಸಿಗೊಂಡೇ ಇದ್ದಳು ಸ್ವರ್ಣ. ಹಿಂದಿನ ದಿನದವರೆಗೂ ಇದ್ದ ಗೆಲುವೆಲ್ಲಾ "ಪ್ರಸ್ತ" ಎಂಬೆರಡು ಅಕ್ಷರಗಳನ್ನು ಕೇಳಿದೊಡನೆ ಮಾಯವಾಗಿತ್ತು. ಕಾಂತಿ ವಿಹೀನವಾಗಿದ್ದ ಅವಳ ಕಣ್ಣುಗಳು ಕಳ ವಳ ಗೊಂಡಿದ್ದವು. ಸುಂದರುವನ್ನು ತಾನೇಕೆ ಮದುವೆಯಾದೆ? ಎಂದು ತನ್ನನ್ನು ತಾನೇ ಕೇಳಿಕೊಂಡಳು. ಗುರುತಿಲ್ಲದವರನ್ನು ಮದುವೆಯಾಗಿ ಕಷ್ಟ ಪಡುವುದಕ್ಕಿಂತ–ತನ್ನ ಗುಟ್ಟು ಬಯಲಾಗುವುದ ಕ್ಕಿಂತ, ಗುರುತಿದ್ದ ಸೌಮ್ಯ ಸ್ವಭಾವದ ಹುಡುಗನಾದ ಸುಂದರುವನ್ನೇ ಮದುವೆಯಾಗಿ ಸುಖಪಡುವುದೆಂದು ತಾನು ನಿಶ್ಚಯಿಸಲಿಲ್ಲವೆ?– ಎಂದು ಅದೇ ಮನಸ್ಸು ಉತ್ತರ ಹೇಳಿತು.

"ಸುಖ ಎಂದರೇನು?"

ಅವಳ ಮನಸ್ಸು ಉತ್ತರಕ್ಕಾಗಿ ಹುಡುಕಿತು.

"ಕಣ್ ಕೋರೈಸುವ ಉಡಿಗೆ–ತೊಡಿಗೆ ತೊಟ್ಟು, ಮನಸ್ಸು ಬಯಸಿದಂತೆ ಅಲಂಕಾರ ಮಾಡಿಕೊಂಡು, ಹೊಸ ಹೊಸ ಆಕರ್ಷಕ ಕಾರುಗಳಲ್ಲಿ ಬೇಕು ಬೇಕಾದೆಡೆ ತಿರುಗಾಡುವುದು ಸುಖವೆ? ಅಚ್ಚು ಕಟ್ಟಾದ ವಿಶಾಲ ಸೌಧದಲ್ಲಿ, ಕೈಕಾಲಿಗೆ ತೊಡರುವಂತೆ ಪರಿಚಾರಕರ ನ್ನಿಟ್ಟುಕೊಂಡು, ಇಷ್ಟವಾದ ಪದಾರ್ಥಗಳನ್ನು ಮಾಡಿಸಿಕೊಂಡು ತಿಂದುಣ್ಣುವುದೇ ಸುಖವೆ? ಹಣವನ್ನು ನೀರಿನಂತೆ ಖರ್ಚುಮಾಡುತ್ತಾ ಕಂಡವರ ಮೇಲೆ ಅಧಿಕಾರಮಾಡುತ್ತಾ, ದ್ರವ್ಯ – ದರ್ಪ – ಹಿರಿತನ ಗಳನ್ನು ಪ್ರದರ್ಶಿಸುವುದು ಸುಖವೆ? – ಇದೆಲ್ಲ ಸುಖವೂ ತನಗೆ ಹುಟ್ಟಿ ದಾಗಲಿಂದಲೂ ಇದೆಯಲ್ಲ? ಆದರೂ ಸುಮ್ಮನಿರದೆ ಯಾವ ಸುಖಕ್ಕಾಗಿ ತಾನು ಸುಂದರುವನ್ನು ಮದುವೆಯಾದೆ?"

ವಿಚಾರದ ಸುಳಿಯಲ್ಲಿ ಸಿಕ್ಕ ಮನಸ್ಸು ಗಾಳಿಗೆ ಸಿಕ್ಕ ಎಳೆಯ ಬಾಳೆಯ ಸುಳಿಯಂತಾಗಿತ್ತು.

"ಮದುವೆಯಾದ ಮೇಲೆ ಹೊಸ ಸುಖವಿದೆಯಂತೆ! ಒಮ್ಮೆ ಅಮ್ಮನೇ ಆ ಮಾತು ಹೇಳಿದ್ದಳು ನಿಜ. 'ಡಾಲರ್ ಪ್ರಿನ್ಸೆಸ್' ಚಿತ್ರದಲ್ಲಿ ಆ ಶ್ರೀಮಂತ ಹುಡುಗಿ ಕೂಲಿಕಾರನನ್ನು ಮದುವೆಯಾದ ಮೇಲೆ ಅಂಥ ಯಾವ ಹೊಸ ಸುಖವನ್ನು ಅನುಭವಿಸಿದಳು? ಅವಳು

ಅವನನ್ನು ಅಪ್ಪಿಕೊಂಡು ತುಟಿಗೆ ತುಟಿ ಇಟ್ಟು ಒತ್ತಿದುದನ್ನೇ ತಾನು ತೆರೆಯ ಮೇಲೆ ನೋಡಿದ್ದುದು. ಅದೇ ಹೊಸ ಸುಖವೆ?"

ಉತ್ತರಕ್ಕಾಗಿ ಹುಡುಕುತ್ತಾ ವೇಗವಾಗಿ ಓಡಿ ಬರುತ್ತಿದ್ದ ಮನಸ್ಸು ತಟ್ಟನೆ ನಾಚಿಕೆ ಪಟ್ಟು ನಕ್ಕು ನುಡಿಯಿತು—

"ಅಲ್ಲ ಅಲ್ಲ, ಹೊಸ ಸುಖ ಅಷ್ಟೇ ಅಲ್ಲ. ಇನ್ನೊಂದು ಅಪೂರ್ವವಾದ ಸುಖವಿದೆ. ಗಂಡು ಹೆಣ್ಣು ಅನುಭವಿಸಬೇಕಾದಂತಹ ಆ ಸುಖ ಮಿಕ್ಕೆಲ್ಲ ಸುಖಗಳಿಗಿಂತ ಆನಂದದಾಯಕವಾದುದು! ಹೆಣ್ಣಿಗೆ ತಾಯ್ತನವನ್ನು ದೊರಕಿಸುವ ಸುಖ ಅದು!!"

ಕ್ಷಣಕಾಲ ಸ್ವರ್ಣಳ ಕಣ್ಣು ಮಿಂಚಿ, ಮುಖ ಕೆಂಪಾಯಿತು. ಆದರೆ........

"ಅಯ್ಯೋ! ಅದು ತನ್ನಿಂದ ಸಾಧ್ಯವಿಲ್ಲ. ತಾಯಿಯಾಗುವುದು, ಗಂಡಿನ ಸುಖ ಅನುಭವಿಸುವುದು.... ...ಅಬ್ಬಬ್ಬ!"

ಬೆಚ್ಚಿದ ಸ್ವರ್ಣ ಹೌಹಾರಿದಳು.

"ತಲೆ ಬಾಚಿಕೊಳ್ಳು ಸ್ವರ್ಣ" ಅಭಯದ ಮಾತು ಹೇಳಿದ್ದ ತಾಯಿ ಎಚ್ಚರಿಸಿದಳು. ಸ್ವರ್ಣ ಕನ್ನಡಿಯ ಮುಂದೆ ಗಂಟೆ ಗಟ್ಟಲೆ ಸಿಂಗರಿಸಿಕೊಳ್ಳಲು ಕುಳಿತಾಗ ಅವಳ ರೂಪ ಹೇಳಿತು—

"ಎಷ್ಟೊಂದು ಚೆನ್ನಾಗಿದ್ದೀಯ ಸ್ವರ್ಣ?"

ಅಷ್ಟರಲ್ಲಿ ಏನೋ ನೆನಪು ಮಾಡಿಕೊಂಡ ಅವಳು ಅಲ್ಲಲ್ಲಿಯೇ ಓಡಾಡುತ್ತಿದ್ದ ಪರಿಚಾರಿಕೆಯೊಬ್ಬಳನ್ನು ಕರೆದು—

"ಆಚೆ ಮನೇಗೆ ಹೋಗಿ ರತ್ನಮ್ಮೋನ್ನ ಬರಹೇಳು. ಜೊತೇಲ್ಲೇ ಕರ್‍ಕೊಂಡು ಬಾ"

ಎಂದು ಆಜ್ಞಾಪಿಸಿದಳು. ಆದರೆ ರತ್ನ ಬರುವಳೆ? 'ಬರ್‍ತೀನೀ ಹೋಗು ಅಂದರು ಅವ್ವ' ಎಂದು ಉತ್ತರ ತಂದಳು ಪರಿಚಾರಕಿ.

ಸ್ವರ್ಣ ಕಾದಳು; ರತ್ನ ಬರಲಿಲ್ಲ.

ಅವಳಾದರೂ ಬಂದಿದ್ದರೆ, ತನಗೆ ಜೊತೆಯಾಗಿ ತನ್ನನ್ನು ಪ್ರತಿ ಕ್ಷಣದಲ್ಲಿ ಉತ್ಸಾಹದ ಮೂರ್ತಿಯನ್ನಾಗಿ ಮಾಡುತ್ತಿದ್ದಳು. ತಾನು ಮಾಡಿಕೊಳ್ಳುವ ಅಲಂಕಾರವನ್ನು 'ಹಾಗಲ್ಲ-ಹೀಗೆ' ಎಂದು ತಿದ್ದಿ ಸರಿಪಡಿಸುತ್ತಿದ್ದಳು. ಆದರೆ ಅವಳೇ ಬರಲಿಲ್ಲವಲ್ಲ!

"ಆಯ್ತೇ ಸ್ವರ್ಣ?"

ಅನ್ನಪೂರ್ಣಮ್ಮನವರೇ ಅಲ್ಲಿಗೆ ಬಂದರು.

"ಇನ್ನೂ ಇಲ್ಲಮ್ಮ....ನಿನ್ನೆಯಿಂದ ರತ್ನಾನ ನೋಡಲೇ ಇಲ್ಲ ವಲ್ಲಮ್ಮ!"

"ಮದುವೆ ಗಲಾಟೆಯಲ್ಲಿ ಎಲ್ಲಿ ಸೇರಿಕೊಂಡಿದ್ದಾಳೋ ಏನೋ"

ರತ್ನಳ ಪರಿಸ್ಥಿತಿ ಆಕೆಗೇನು ಗೊತ್ತು? ಅವಳು ಸುಂದರುವನ್ನು ಪ್ರೇಮಿಸುತ್ತಿದ್ದಾಳೆಂದು ಸ್ವರ್ಣಳಿಗೂ ತಿಳಿಯದು ರತ್ನ—ಸುಂದರು ಒಟ್ಟಿಗಿದ್ದುದನ್ನು ಎಷ್ಟೋಬಾರಿ ನೋಡಿದ್ದಳಾಕೆ. ಆದರೂ ಅದಕ್ಕೆ ಪತಿ—ಪತ್ನಿಯರ ಪ್ರೇಮದ ಬಣ್ಣವನ್ನು ಕಟ್ಟಲು ಅವಳು ಸಮರ್ಥ ಳಾಗಲಿಲ್ಲ. ಮದುವೆಗೆ ಮುನ್ನ ತಾನೂ—ಸುಂದರುವೂ ಒಟ್ಟಿಗಿದ್ದಾ ಗಲೂ, ಪರಸ್ಪರ ಸಲಿಗೆಯಿಂದ ಮಾತನಾಡುತ್ತಿದ್ದಾಗಲೂ, ಸ್ವರ್ಣ ಳಿಗೆ ಪ್ರಿಯ—ಪ್ರೇಯಸಿಯರ ಭಾವನೆ ಸುಳಿದಿರಲಿಲ್ಲ ಆ ಪರಿ ವರ್ತನೆಯಾದುದು 'ಡಾಲರ್ ಪ್ರಿನ್ಸೆಸ್' ಚಿತ್ರ ನೋಡುತ್ತಿದ್ದಾಗ. ಅನಂತರ ಅವಳಿಗೆ ಸುಂದರುವಿನ ಮೇಲೆ ಆಸೆ ಹುಟ್ಟಿತು. ಆ ಆಸೆ ಸಹಜವಾಗಿ ನೆರವೇರದಿದ್ದಾಗ, ಹಠ ಮಾಡಿಯೇ ಈಡೇರಿಸಿಕೊಂಡಳು- ರತ್ನ ಅವನನ್ನು ಪ್ರೀತಿಸುತ್ತಾಳೆಂದು ತಿಳಿದಿದ್ದರೆ....? ತಿಳಿದಿದ್ದರೂ ಅವಳು ತಾನು ಹಿಡಿದ ಹಟವನ್ನು ಬಿಡುತ್ತಿರಲಿಲ್ಲ 'ನನ್ನ ಹೃದಯ ವನ್ನು ಕೊಟ್ಟು ಬಿಟ್ಟಿದ್ದೇನೆ. ಅದು ಹಿಂತಿರುಗಿ ಬರುವುದಿಲ್ಲ' ಎಂದು ಸುಂದರು ಹೇಳಿದಾಗ 'ಯಾರಿಗೆ ಕೊಟ್ಟೆ?' ಎಂದು ಕೇಳಿದ್ದರೆ 'ರತ್ನಳಿಗೆ' ಎನ್ನುವ ಉತ್ತರ ಬರುತ್ತಿತ್ತೇನೋ. ಆದರೆ ಹಾಗಾಗಲಿಲ್ಲ! ಅದು ಯಾರ ದೌರ್ಭಾಗ್ಯ?

"ನನ್ನ ದೌರ್ಭಾಗ್ಯ ಎಂದು ಕೊಂಡಳು ರತ್ನ."

"ನನ್ನ ದೌರ್ಭಾಗ್ಯ" ಎಂದುಕೊಂಡ ಸುಂದರು.

"ನನ್ನ ದೌರ್ಭಾಗ್ಯ—ಈ ರಾತ್ರಿಯ ಪರಿಸ್ಥಿತಿಯನ್ನು ಎದುರಿಸು ವುದು" ಎಂದುಕೊಂಡಳು ಸ್ವರ್ಣ.

ದೌರ್ಭಾಗ್ಯದ ಪರಿಸ್ಥಿತಿಯನ್ನು ಎದುರಿಸುವ ಸನ್ನಿವೇಶ ಸನ್ನಿ ಹಿತವಾಯಿತು.

ಸ್ವರ್ಣಳ ಸೆರಗಿನ ತುದಿಯನ್ನು ಸುಂದರು ಹೊದೆದುಕೊಂಡಿದ್ದ

ರೇಷ್ಮೆಶಲ್ಯದ ಅಂಚಿಗೆ ಗಂಟುಹಾಗಿದಳು ವೆಂಕಮ್ಮ. ಅನ್ನಪೂರ್ಣಮ್ಮ ಮಗಳ ಬೆನ್ನು ಹಿಡಿದುಕೊಂಡು ಮಲಗುವ ಕೋಣೆಯ ಹೊಸಲಿನ ವರೆಗೂ ಬಂದು, ಸ್ವರ್ಣಳ ಮುಖದತ್ತ ತಿರುಗಿ ದೃಷ್ಟಿನಟಿಕೆ ಮುರಿದು ಕೆನ್ನೆ ತುಳುಕುವಂತೆ ತುಟಿಯಲ್ಲಿ ನಕ್ಕರು. ಹುಡುಗಿ ಗಂಡನ ಮುಖವನ್ನು ನೋಡಿದಳು. ಅಲ್ಲಿದ್ದ ಗಂಭೀರ ಭಾವವನ್ನು ಕಂಡು ತಾನೂ ಗಂಭೀರಳಾದಳು. ಅನ್ನಪೂರ್ಣಮ್ಮ ಬಾಗಿಲು ಮುಂದಕ್ಕೆಳೆದುಕೊಂಡು ಹೊರಟು ಹೋದರು.

ಸ್ವರ್ಣಳ ಧೈರ್ಯ ಉಡುಗಿ ಹೋಗಿತ್ತು. ಅಟ್ಟಹಾಸ, ಸದಾ ಮಿಂಚುವ ನಗೆ, ಆಕರ್ಷಕ ಕಣ್ಣಿನ ಕಾಂತಿ ಎಲ್ಲಾ ಮಾಯ ವಾಗಿತ್ತು. ಗುಂಗುರು ಮುಂಗೂದಲು, ಗುಲಾಬಿಯ ಕೆನ್ನೆ, ನಸು ನೀಳವಾದ ಮೂಗು ಅವಳನ್ನು ಸೌಂದರ್ಯವತಿಯೆಂದು ಸಾರು ತ್ತಿದ್ದರೂ, ಚಿಗುರುತ್ತಿದ್ದ ತೆಳುಮಿಾಸೆ, ಗದ್ದದ ಕೆಳಗಿನ ಒಂದೆರಡು ಕೂದಲು, ಉಬ್ಬದ ಕುಚಗಳಿಲ್ಲದ ಎದೆ ಅವಳನ್ನು 'ನೀನು ಹೆಂಗಸೆ ಸ್ವರ್ಣ?' ಎಂದು ಕೇಳುತ್ತಿದ್ದವು.

ಆ ಪ್ರಶ್ನೆಗೆ ದೀಪವಾರಿಸಿ ಅವಳನ್ನಪ್ಪಿಕೊಂಡ ಸುಂದರು ಉತ್ತರ ಹೇಳಿದ ಆದರೆ ಅದನ್ನು ಆ ಹೊತ್ತಿನಲ್ಲಿ ಕೇಳಿಸಿ ಕೊಳ್ಳುವವರು ಯಾರು ?

ಬೆಳಗ್ಗೆ ಯಾರೂ ಇಲ್ಲದ ಸಮಯದಲ್ಲಿ ವೆಂಕಮ್ಮನ ಬಳಿಗೆ ಬಂದ ಸುಂದರು ನಾಚಿಕೆಬಿಟ್ಟು ಕಂಗಾಲಾಗಿ ಹೇಳಿದ :

"ಅಮ್ಮ, ಅವಳು ಹೆಂಗಸೇ ಅಲ್ಲ ಕಣೆ !"

ಅವನ ನಿರಾಶೆಯ ಧ್ವನಿ, ಬಾಡಿದ ಮುಖ, ಕಣ್ಣೀರಿನ ಮುಖ ಕಂಡು, ಅವನ ಮಾತು ಕೇಳಿ ವೆಂಕಮ್ಮನಿಗೆ ಸಿಡಿಲು ಬಡಿ ದಂತಾಯಿತು.

"ಸುಂದರು, ನಿನ್ನ ತಲೆಯಮೇಲೂ ದೊಡ್ಡ ಕಲ್ಲೆತ್ತಿ ಹಾಕಿ ದೆವಲ್ಲಾ ಮಗು !" ಎಂದು ಚೀರಿಕೊಂಡಳು. ಅವಳ ಮಂಜಾದ ಕಣ್ಣು ಮುಂದೆ ಅಟ್ಟಹಾಸದಿಂದ ಕುಣಿಯುತ್ತಿತ್ತು :

ಹತ್ತು ಸಾವಿರ ! ಹತ್ತು ಸಾವಿರ !!

ಆ ಭೇತಾಳ ನೃತ್ಯವನ್ನು ನೋಡಲಾರದೆ ವೆಂಕಮ್ಮ ಕಣ್ಣು

ಮುಚ್ಚಿಕೊಂಡಳು. ಅದನ್ನು ಕಂಡು ಸುಂದರು
"ಅಮ್ಮಾ....ಅಮ್ಮಾ...." ಎಂದು ಸಂಕಟದಿಂದ ಕೂಗಿಕೊಂಡ.

## ೧೦

"ಅಮ್ಮಾ....ಅಮ್ಮಾ...."

ಸುಮಿತ್ರೆ ಕೂಗುತ್ತಾ ತಾಯಿಯ ಬಳಿಗೆ ಓಡಿಬಂದಳು.

"ಏನೇ ಅದು ?"

"ನೋಡೇ, ಶಾಂತು ಹೊಡೀತಾಳೆ !"

"ಅವಳು ಯಾಕೆ ಹೊಡೀತಾಳೆಯೋ ? ನೀನೇ ಏನೋ ಕೀಟಲೆ ಮಾಡಿದ್ದೀಯಾ !"

ಶಾಂತುವೂ ವೆಂಕಮ್ಮನ ಬಳಿಗೆ ಬಂದು ನಿಂತಳು.

"ಇಲ್ಲಮ್ಮಾ, ನಾನೇನೂ ಮಾಡಲಿಲ್ಲ. ಅವಳೂನೂ ನಾ........"

ಅಷ್ಟರಲ್ಲಿ ಶಾಂತು ಸುಮಿತ್ರೆಯ ಬಾಯಿ ಮುಚ್ಚಿ 'ಹೇಳಬೇಡ' ಎನ್ನುವಂತೆ ಸನ್ನೆ ಮಾಡಿದಳು.

"ಹ್ಞ, ಹೇಳು ಹೇಳು" ರಾಗ ಎಳೆದಳು ವೆಂಕಮ್ಮ. ಶಾಂತುವಿನ ಕಳವಳಗೊಂಡ ಮುಖ ನೋಡಿದ ಸುಮಿತ್ರೆಗೂ, 'ಅಯ್ಯೋ' ಎನ್ನಿಸಿತ್ತು.

"ಉಹ್ಞ, ಏನೂ ಇಲ್ಲಮ್ಮ........"

ಎನ್ನುತ್ತಾ ಸುಮಿತ್ರೆ ಶಾಂತುವಿನೊಡನೆ ಹೊರಗೆ ಓಡಿದಳು.

"ಅಮ್ಮನಿಗೆ ಹೇಳಿ ಬಿಡ್ತಿದ್ದೆ. ಪಾಪ ಅಂತ ಸುಮ್ಮನಾದೆ"

"ನಿನ್ನ ದಮ್ಮಯ್ಯ, ಹೇಳಬೇಡಮ್ಮ. ನಮ್ಮಮ್ಮ ಸಾಯಂ ಕಾಲಕ್ಕೆ ಚಕ್ಕುಲಿ ಮಾಡ್ತಾರೆ. ನಿನಗೂ ತಂದುಕೊಡ್ತೀನಿ"

"ಎರಡು ತಂದು ಕೊಡಬೇಕು !"

"ಹ್ಞಂ" ಎಂದು ಒಪ್ಪಿಕೊಂಡಳು ಶಾಂತು.

ಜಗಲಿಯ ಕೊನೆಯಲ್ಲಿ ಕುಳಿತಿದ್ದ ನಾಣಿ—

"ಏನೇ ಚುಮ್ಮಿ ಅದು. ಅವಳನ್ನು ಪುಸಲಾಯಿಸ್ತಿದ್ದೀಯಾ?"

"ನಿನ್ನೂ ಹೆದರಿಸ್ತೀನಿ ಕಣೋ!"

ಸುಮಿತ್ರೆ ಹೆಮ್ಮೆಯಿಂದ ನುಡಿದಳು.

"ಎಲ್ಲಿ, ಹೆದರಿಸು ನೋಡೋಣ!"

"ಇರು ಇಲ್ಲೇ. ಅಮ್ಮನಿಗೆ ಹೇಳಿಬಿಟ್ಟು ಬರ್ತೀನಿ–ನೀನೂ ಶಾಂತೂ ಏನು ಮಾಡ್ತಿದ್ದಿರೀಂತ........"

ಎದ್ದು ಒಳಗೆ ಹೋಗಲನುವಾದಳು ಸುಮಿತ್ರೆ.

"ಏನು ಮಾಡುತ್ತಿದ್ದಿವಿ?

"ಮಾತಾಡುತ್ತಿರಲಿಲ್ಲವೇನೋ?"

"ಮಾತಾಡಿದರೆ ಏನೀಗ?"

"ನೀವೇನು ಮಾತಾಡಿದ್ದೂಂತ ನನಗೂ ಗೊತ್ತು.!"

"ಹೋಗಲಿ, ನಾವೇನು ಮಾತಾಡಿದಿವೀ ಅಂತ ಹೇಳಮ್ಮ ನೋಡೋಣ!"

"ನೀನೂ–ಶಾಂತೂ ಪಕ್ಕಪಕ್ಕದಲ್ಲಿ ಕೂತುಕೊಂಡು ಒಬ್ಬರ ಕಿವೀಲಿ ಇನ್ನೊಬ್ಬರು ಏನು ಮಾತನಾಡುತ್ತಿದ್ದರೀಂತ ನನಗೂ ಗೊತ್ತು ಕಣೊ!"

'ತಾವು ಮಾತನಾಡಿಕೊಂಡೆವೇ?' ಎಂದು ನಾಣಿಯೂ ಶಾಂತುವೂ ತಮ್ಮ ತಮ್ಮನ್ನೇ ಪ್ರಶ್ನಿಸಿಕೊಂಡರು. ಹಾಗಾದರೆ ತಾವು ಪರಸ್ಪರ ಅಧರಾಮೃತ ಸವಿದುದನ್ನು ನೋಡಿದ ಸುಮಿತ್ರೆ ಮುಖದ ಹತ್ತಿರ ಮುಖವಿಟ್ಟುಕೊಂಡು ತಾವು ಮಾತನಾಡಿಕೊಂಡೆವೆಂದು ತಿಳಿದಳು ಎಂದು ನಾಣಿಗೆ ಹೊಳೆಯಿತು. ಆದರೂ ಅದು ಹಿರಿಯರಿಗೆ ತಿಳಿದರೆ ತಮ್ಮನ್ನು ದಂಡಿಸುವರೆಂದು ಇಬ್ಬರೂ ಹೆದರಿದ್ದರು.

"ಹೇಳೆ ನೋಡೋಣ, ಏನು ಮಾತನಾಡಿಕೊಂಡಿವಿ ಅಂತ?"

"ನಿನ್ನ ಹತ್ತಿರ ಯಾಕೆ ಹೇಳಲಿ? ಅಮ್ಮನ ಹತ್ತಿರವೇ ಹೇಳುತ್ತೇನೆ. ಸೀತಕ್ಕನ ಹತ್ತಿರವೇ ಹೇಳುತ್ತೇನೆ"

ಎನ್ನುತ್ತಾ ಎರಡು ಹೆಜ್ಜೆಯಿಟ್ಟಳು ಸುಮಿತ್ರೆ. ಅದನ್ನು ಕಂಡು ನಾಣಿಗೂ ಹೆದರಿಕೆಯಾಯಿತು.

"ಚಿ-ಮ್ಮಾ, ಪೌಡರ್ ಡಬ್ಬ ಬೇಡ್ವಾ ನಿಂಗೆ?"

"ಎಲ್ಲಾ ಸುಳ್ಳು ಸುಳ್ಳೆ. ತಂದುಕೊಡೋಲ್ಲ–ಏನೂ ಇಲ್ಲ"

"ಈ ಸಾರಿ ಸಂಬಳ ಬಂದ ತಕ್ಷಣ ತಂದುಕೊಡ್ತೀನಿ ಕಣೆ"

"ನಿಜವಾಗ್ಲೂನೂ... ...."

"ಹ್ಞ, ಜೊತೇಗೆ ಟೇಪು-ಬುಕ್ಕಿ ಎಲ್ಲಾ"

"ಹಾಗಾದ್ರೆ ಹೇಳೋಲ್ಲ!"

ಎಂದು ಸಮಾಧಾನದಿಂದ ಅಲ್ಲೇ ಕುಳಿತು ನಕ್ಕಳು ಸುಮಿತ್ರೆ.

"ಕಿಟ್ಟಣ್ಣ, ಶಾಮು ಎಲ್ಲಾ ಎಲ್ಹೋದರು?"

"ಕಿಟ್ಟಣ್ಣ ಅಣ್ಣನ ಜೊತೇಲ್ಲಿ ಕೋಟೆಗೆ ಹೋದ. ಅಮಲ್ದಾರರ ಮನೇಲ್ಲಿ ಪೂಜೇನಂತೆ"

"ಶಾಮು?"

"ಚಿಕ್ಕಣ್ಣಯ್ಯ ಶೀನಣ್ಣನ ಬೆನ್ನಿಗೆ ಔಷಧಿ ಹಚ್ತಿದಾನೆ."

"ಅಮ್ಮ?"

"ಒಳಗಿದ್ದಾರೆ"

"ನೀನು ....?"

"ನಾಣಿ ಹತ್ತಿರ ಮಾತಾಡತಾ ಇದ್ದೀನಿ!"

"ನಾಣಿ......?"

"ಶಾಂತು ಮುಖ ನೋಡ್ತಾ ಇದ್ದಾನೆ"

"ಶಾಂತು....?"

"ನಾಚಿಕೆಪಟ್ಟುಕೊಂಡು ತಲೆಬಗ್ಗಿಸಿದ್ದಾಳೆ!"

"ನಾಚಿಕೆ ಯಾಕಂತೆ?"

"ನೀನು ಅವಳ್ನ ಮದುವೆ ಆಗ್ತೀಯಂತೆ!"

"ಥೂ ಹೋಗೆ!"

ಎಂದು ಸುಮಿತ್ರೆಯನ್ನು ತಿವಿದಳು ಶಾಂತು.

"ಮೇಸ್ಟ್ರ ಕಸಬೇ ಪ್ರಶ್ನೆ ಕೇಳೋದು. ಅವರನ್ನ ಅವರೇ ಮರೆತುಬಿಟ್ಟು, ಅವರ ವಿಚಾರಾನೇ ಪ್ರಶ್ನೆ ಕೇಳೋದು! ಹ ಹ್ಹ ಹ್ಹ!!"

ಎಂದು ನಗುತ್ತಾ ಶಾಮು ಹೊರಗಡೆ ಬಂದ. ಅವನ ಮಾತು ಕೇಳಿ ಸುಮಿತ್ರೆಯೂ ನಕ್ಕಳು.

"ಅಗ್ರಜನ ಸೇವೆ ಆಯ್ತೇನೋ ಶಾಮು?"

"ಹ್ಞ, ಆಯ್ತಪ್ಪ!"

ನೀನು ಕಾಲೇಜಿಗೆ ಸೇರಿಬಿಟ್ಟರೆ ಈ ಕೆಲಸವನ್ನೆಲ್ಲಾ ಯಾರೋ ಮಾಡೋರು ?"

"ನೀನು–ಕಿಟ್ಟಣ್ಣ ಇಬ್ಬರೂ ಇದ್ದೀರಲ್ಲ. ಅಗ್ರಹಾರದ ಖಾಯಂ ನಿವಾಸಿಗಳು !"

"ನಾನು ಇಲ್ಲಿರೋಲ್ಲಪ್ಪ. ಬೇರೆ ಯಾವುದಾದರೂ ಊರಿಗೆ ವರ್ಗಮಾಡಿಸಿಕೊಂಡು ಹೊರಟು ಹೋಗ್ತೀನಿ !"

"ಆವಾಗ ಶಾಂತೂನ ಏನುಮಾಡ್ತೀಯಾ ?"

ಅರಿಯದ ಹುಡುಗಿ ಸುಮಿತ್ರೆ ಮಧ್ಯೆ ಬಾಯಿಹಾಕಿದಳು.

"ಅವಳ್ನೇ ಮದುವೆಮಾಡಿಕೊಂಡು, ಕರಕೊಂಡು ಹೋಗ್ತೀನಿ ಕಣೆ"

"ಓ ಹೋ ಹೋ !"

ಚಪ್ಪಾಳೆ ತಟ್ಟಿಕೊಂಡು ಸುಮಿತ್ರೆ ನಕ್ಕಾಗ, ಅಲ್ಲೇ ಕುಳಿತಿದ್ದ ಶಾಂತು ತನ್ನ ಮನೆಯ ಕಡೆಗೆ ಓಡಿದಳು. ಅದನ್ನು ನೋಡಿ ಶಾಮುವೂ ನಾಣಿಯೂ ನಕ್ಕರು

"ನಿಜವಾಗ್ಲೂನು ಆ ಹುಡುಗೀನ್ನೇ ಮದುವೆ ಆಗ್ತೀಯೇನೋ ನಾಣಿ ?"

ಅದು ಶಾಮುವಿನ ಪ್ರಶ್ನೆ.

"ಹ್ಞ ಕಣೋ. ಸುಳ್ಳು ಹೇಳ್ತೀನೇನೋ !"

"ಪಾಪ, ನಮ್ಮಹಾಗೇ ಬಡವರ ಮನೆ ಹುಡುಗಿ ಕಣೋ ನಾಣಿ. ತಂದೆ ಬೇರೆ ಇಲ್ಲ. ನೀನು ಮದುವೆ ಮಾಡಿಕೊಂಡರೆ ಸೀತಕ್ಕನ ಕಷ್ಟ ಕಮ್ಮಿಯಾಗುತ್ತೆ"

"ನಾನೂ ಯೋಚನೆ ಮಾಡಿದ್ದೀನಿ. ಕಿಟ್ಟಣ್ಣನ ಮದುವೆ ಒಂದು ಆಗಲಿ. ಅದನ್ನೇನೋ ಅಪ್ಪ ಈ ಯುಗಾದೀಗೆ ಮುಂಚೆಯೇ ಮಾಡಿಬಿಡಬೇಕು ಅಂತ ಇದ್ದಾರಲ್ಲ. ಆಮೇಲೆ, ಅಮ್ಮನಿಗೆ ಹೇಳಿ ಈ ಮದುವೇನೂ ಏರ್ಪಾಟು ಮಾಡಿ ಬಿಡಬೇಕು. ನನಗೂ ಈ ಊರು ಬೇಜಾರಾಗಿದೆ; ಮದುವೆ ಆದಮೇಲೆ ಬೇರೆ ಎಲ್ಲಿಗಾದರೂ ವರ್ಗ ಮಾಡಿಸಿಕೊಂಡು ನಾವಿಬ್ಬರೂ ಹೊರಟು ಹೋಗ್ತೀವೆ !"

"ಎಲ್ಲಾ ಪ್ಲಾನ್ ಹಾಕಿಟ್ಟು ಬಿಟ್ಟಿದ್ದೀಯಲ್ಲೋ ನಾಣಿ !"

"ಮೊದಲಿಂದ ಪ್ಲಾನ್ ಹಾಕೋದರಲ್ಲೇ ಆಯ್ತು ಪ್ಪ. ಇದು ವರೆಗೂ ಏನೂ ಸಾಧಿಸಿಲ್ಲ"

ನಾಣಿಯ ಮಾತಿಗೆ ವ್ಯಂಗ್ಯವಾಗಿ ನಕ್ಕ ಶಾಮು.

ಆ ನಗೆಯ ಹಿಂದೆ ಅಡಗಿದ್ದ ಮಾತಿನ ಮಾಲೆ—

"ಅಪ್ಪನ ಕೈ ನಡೆಯುವವರೆಗೂ ನಮ್ಮ ಯೋಚನೆಗಳೊಂದೂ ನಡೆಯುವಂತಿಲ್ಲ ನಾಣಿ" – ಎಂದು ಗಂಟಲಿನವರೆಗೂ ಬಂದು, ಅಲ್ಲೇ ಕೊರಳಿಗೆ ಸುತ್ತಿಕೊಂಡು ಶಾಮುನ ಬಾಯಿ ಕಟ್ಟಿತ್ತು.

ಆ ಮಾತು ನಿಜವೆನ್ನುವಂತೆ ಮರುದಿನ ಬಂದ ನಾಗಪ್ಪನವರು ಒಂದು ಹೊಸ ಸಂಗತಿಯನ್ನು ವೆಂಕಮ್ಮನಿಗೆ ಹೇಳಿದರು :

"ಅಮಲ್ದಾರರ ಮಗನ ಮುಂಜಿಗೆ, ಅವರ ಹೆಂಡತಿ ಕಡೆಯ ಸಂಬಂಧವಿಂದ ಶ್ರೀಕಂಠಯ್ಯ ಅಂತ ಒಬ್ಬರು ಬಂದಿದ್ದರು ಕಣೆ. ಅಡಿಗೆ ಮಾಡುತ್ತಿದ್ದವನನ್ನು ಕರೆದು ಅಮಲ್ದಾರರು ಗುರುತು ಮಾಡಿಸಿ ಕೊಟ್ಟರು. ಸಾಯಂಕಾಲ ಅವರೇ ನನ್ನನ್ನು ಕರೆಸಿ 'ಶ್ರೀಕಂಠಯ್ಯ ನೋರನ್ನೂ ಕೂಡಿಸಿಕೊಂಡು, ಕಿಟ್ಟು ತಮ್ಮ ಕೈ ಕೆಳಗೇ ಕಚೇರಿ ಯಲ್ಲಿ ಕೆಲಸ ಮಾಡಿಕೊಂಡಿರೋ ವಿಚಾರವೆಲ್ಲಾ ಹೇಳಿದರು. ಅವನ ಗುಣಾನ ತುಂಬ ಹೊಗಳಿದರು. ಆಮೇಲೆ ನನ್ನ ಕಡೆ ತಿರುಗಿ, 'ಶ್ರೀಕಂಠಯ್ಯನೋರಿಗೆ ಇಬ್ಬರು ಹೆಣ್ಣುಮಕ್ಕಳಿದ್ದಾರೆ. ಒಬ್ಬಳನ್ನ ಚನ್ನಪಟ್ಟಣಕ್ಕೆ ಕೊಟ್ಟಿದೆ. ಇನ್ನೊಬ್ಬಳಿಗೆ ವರ ಹುಡುಕುತ್ತಿದ್ದಾರೆ. ನಿಮ್ಮ ಕಿಟ್ಟೂಗೆ ಮಾಡಿಕೊಳ್ಳಿ ನಾಗಪ್ಪ' ಅಂತ ಅಂದರು. 'ಆಗಲಿ ಸ್ವಾಮಿ, ಮನೆಯಲ್ಲಿ ವಿಚಾರಿಸುತ್ತೇನೆ' ಅಂತ ಹೇಳಿಬಂದೆ. ಏನನ್ನುತ್ತೀಯೆ ನೀನು ?"

"ನಾನೇನು ಹೇಳೋದು. ಕಿಟ್ಟು ಒಪ್ಪಿದರೆ ಮಾಡಿಬಿಡಿ"

"ಅವನನ್ನೇನು ಕೇಳೋದು ? "

"ಹಾಗೆಂದುಕೊಂಡೆ ಇಬ್ಬರ ತಲೆಮೇಲೆ ಕಲ್ಲುಹಾಕಿದಿರಿ ! ಇನ್ನು ಈ ಮೂರನೇದು ಹೇಗೋ ? "

"ಇಲ್ಲ ಕಣೆ, ಹುಡುಗಿ ಚೆನ್ನಾಗಿದ್ದಾಳಂತೆ."

"ಆಗಲಿ, ಅವರು ಹುಡುಗಿಯನ್ನು ಕರೆದುಕೊಂಡು ಬರಲಿ. ನೋಡಿ ಆಮೇಲೆ ಮಾತಾಡೋಣ. ಸುಮ್ಮನೆ ಆವಸರ ಪಡೋದು

ಬೇಡ ! ”

“ಈ ಸಂಬಂಧ ಕೂಡಿದರೆ, ಹಾಗೇನೇ ಮೈಸೂರಿನಲ್ಲಿ ಅವರ ತಂಗಿ ಮಗಳು ಒಬ್ಬಳಿದ್ದಾಳಂತೆ, ಅವಳನ್ನ ನಮ್ಮ ನಾಣೀಗೆ ತಂದು ಕೊಳ್ಳೋಣ ! ”

“ಮೊದಲು ಒಬ್ಬನಿಗಾಗಲಿ. ನಾಣೀಗೆ ಏನವಸರ ? ”

“ಹಾಗಾದರೆ ಶ್ರೀಕಂಠಯ್ಯನವರನ್ನ ಬರ ಹೇಳಲೇನೆ ? ”

“ಹ್ಞು” ಎಂದು ಒಪ್ಪಿಗೆ ಸೂಚಿಸಿದಳು ವೆಂಕಮ್ಮ.

ಎರಡು ದಿನಗಳ ಬಳಿಕ ಶ್ರೀಕಂಠಯ್ಯನವರು, ಪತ್ನಿ–ಪುತ್ರಿಯರ ಸಮೇತ ನಾಗಪ್ಪನವರ ಮನೆಗೆ ದಯಮಾಡಿಸಿದರು. ವೆಂಕಮ್ಮ ಎಲ್ಲರನ್ನೂ ಸ್ವಾಗತಿಸಿ, ಉಪಚರಿಸಿದಳು. ತಾಯಿಯ ಆದೇಶದಂತೆ ಹುಡುಗಿ ವೆಂಕಮ್ಮನಿಗೆ ನಮಸ್ಕರಿಸಿದಳು. ಅವಳ ತಲೆಯನ್ನು ನೇವರಿಸುತ್ತಾ ಮೃದುವಾಗಿ ಕೇಳಿದಳು ವೆಂಕಮ್ಮ—

“ನಿನ್ನ ಹೆಸರೇನಮ್ಮ ?”

“ಲಲಿತ”

ಹುಡುಗಿ ನಾಚಿಕೆಯಿಂದ ಬಳುಕುತ್ತಾ ನುಡಿದಳು.

“ಏನೋ, ಹುಡುಗಿಯ ಗಂಡನ ಮನೆ ಇದೇ ಆದರೆ ನಮಗೆ ತುಂಬ ಸಂತೋಷ ”

ಶ್ರೀಕಂಠಯ್ಯನವರ ಪತ್ನಿ ಅಲಮೇಲಮ್ಮ ಮುಂದಿನ ಮಾತಿಗೆ ಪೀಠಿಕೆ ಹಾಕಿದರು.

“ಹುಡುಗಿ ಏನಾದರೂ ಓದಿದ್ದಾಳೋ ?”

ನಾಗಪ್ಪನವರ ಪ್ರಶ್ನಮಾಲೆ ಪ್ರಾರಂಭವಾಯಿತು.

“ಕನ್ನಡ ಇಂಗ್ಲಿಷ್ ಲೋಯರ್ ಸೆಕೆಂಡರಿ ಪ್ಯಾಸು ಮಾಡಿದ್ದಾಳೆ. ಆಮೇಲೆ ಹತ್ತಿರದಲ್ಲಿ ಹೈಸ್ಕೂಲು ಇಲ್ಲದ್ದರಿಂದ ಓದು ನಿಲ್ಲಿಸಿ ಬಿಟ್ಟಳು.”

ಅದು ಶ್ರೀಕಂಠಯ್ಯನವರ ಉತ್ತರ.

“ಯಾಕೆ, ನಿಮ್ಮ ಹಾರೋಹಳ್ಳಿಯಲ್ಲಿ ಹೈಸ್ಕೂಲ್ ಇಲ್ಲವೇ ? ”

“ಒಂದು ಕಾಲದಲ್ಲಿ ಮಿಡ್ಲ್‌ಸ್ಕೂಲೇ ಹಾರಿಹೋಗೋಹಾಗಿತ್ತು! ಇನ್ನು ಹೈಸ್ಕೂಲು ಎಲ್ಲಿ ಬರುತ್ತದೆ ಹೇಳಿ. ಹೈಸ್ಕೂಲಿಗೆ ಹೋಗಬೇಕಾದರೆ ಕಾನಕಾನಹಳ್ಳಿಗೇ ಹೋಗಬೇಕು !”

"ತುಂಬ ದೂರ........ಹುಡುಗಿಗೆ ಸಂಗೀತ ಬರುತ್ತದೆಯೇನು ?"

"ಏನೋ ಸುಮಾರಾಗಿ ಹಾಡುತ್ತಾಳೆ."

"ಎಲ್ಲಮ್ಮ ಲಲಿತ, ಒಂದು ಹಾಡು ಹೇಳು"

ವೆಂಕಮ್ಮ ಕೇಳಿದರು. ಹುಡುಗಿಯ ಕಣ್ಣು ಹಾರ್ಮೋನಿಯಂಗಾಗಿ ಹುಡುಕಾಡಿತು. ಆದರೆ ಅದು ಎಲ್ಲೂ ಕಾಣಿಸದಿದ್ದುದರಿಂದ ಎರಡು ನಿಮಿಷಗಳ ನಂತರ ಹಾಗೆಯೇ ಹಾಡ ತೊಡಗಿದಳು :

"........ಇಂದಿಗೆ ಧನ್ಯಳಾದೆ ಕಾಂತನ ದರುಶನದಿಂದ ಮಾರಮಣನೇ............"

ಹುಡುಗಿಯ ಕಂಠ ಮಧುರವಾಗಿತ್ತು.

"ಅಮ್ಮ, ಚೆನ್ನಾಗಿ ಹಾಡು ಹೇಳ್ತಾಳೆ ಕಣೆ. ಕಿಟ್ಟಣ್ಣನಿಗೆ ಮದುವೆ ಮಾಡಿಬಿಡೆ. ನಾನೂ ಅವಳ ಕೈಲಿ ಹಾಡು ಹೇಳಿಸಿಕೊಳ್ತೀನಿ."

ಎಂದು ಸುಮಿತ್ರೆ ತಾಯಿಯ ತೊಡೆಯನ್ನು ಜಗ್ಗುತ್ತಾ ಹೇಳಿದಳು.

"ಅವಳು ಅಂತ ಅನ್ನಬಾರದು. ಅವರು ಅನ್ನಬೇಕು !"

ಸುಮಿತ್ರೆಯನ್ನು ಎಚ್ಚರಿಸಿದ ವೆಂಕಮ್ಮ ಲಲಿತೆಯ ಕಡೆಗೆತಿರುಗಿ

"ಮನೆ ಕೆಲಸ ಎಲ್ಲ ಬರುತ್ತೇನಮ್ಮ ?"

"ನಮ್ಮನೇಲಿ ಎಲ್ಲಾ ಕೆಲಸಾನೂ ಅವಳೇ ಮಾಡ್ತಾಳೆ. ಅದರಲ್ಲೆಲ್ಲಾ ಗಟ್ಟಿಗಾತಿ !"

ಮಗಳ ಯೋಗ್ಯತೆಯನ್ನು ಹೊಗಳಿದರು ಆಲಮೇಲಮ್ಮ.

ತಂದೆಯ ಹಿಂದೆ, ಶಾಮು-ನಾಣಿಯರ ಜೊತೆಯಲ್ಲಿ ಕುಳಿತಿದ್ದ ಕಿಟ್ಟು ಹುಡುಗಿಯನ್ನು ದೃಷ್ಟಿಸಿದ.

ಲಲಿತೆ ಬೆಳ್ಳಗೆ ಹೊಳೆಯುತ್ತಿದ್ದಳು. ಅದನ್ನು ಕಂಡು ಕಿಟ್ಟುವಿಗೆ ತನ್ನ ಕಪ್ಪು ಬಣ್ಣದ ಮೈ ಅಸಹ್ಯವುಂಟುಮಾಡುವಂತಾಯಿತು. ಅಷ್ಟು ಬೆಳ್ಳಗಿರುವ ಹುಡುಗಿ ತನ್ನನ್ನು ಮದುವೆಯಾಗಲು ಒಪ್ಪುವಳೇ ಎಂದು ಸಂದೇಹಪಟ್ಟು ಚಿಂತಿಸಿದ. ಮೆಲ್ಲನೆ ಬೀಸಿದ ಗಾಳಿಗೆ ಅವಳ ಗುಂಗುರು ಮುಂಗುರುಳು ಹಣೆಯ ಮೇಲೆ ಕುಣಿದಾಡಿ, ಕಿಟ್ಟುವಿಗೆ ತನ್ನನ್ನು ಕರೆಯುತ್ತಿರುವಂತೆ ಭಾಸವಾಯಿತು. ತುಂಬಿ ತುಳುಕುವ ಅವಳ ಹಾಲುಗೆನ್ನೆ, ಕಾಡಿಗೆಯಿಂದ ಕಪ್ಪಾಗಿದ್ದ ಬಾದಾಮಿಯ ಕಣ್ಣು,

ತಿದ್ದಿದ ಹುಬ್ಬು, ಮಾಟವಾದ ಮೂಗು, ಪುಟ್ಟಬಿಲ್ಲಿನಂತೆ ಬಾಗಿರುವ ಬಾಯಿ–ಕಿಟ್ಟುವಿಗೆ ತುಂಬ ಮೋಹಕವಾಗಿ ಕಂಡವು. ಸೆರಗಿನ ಮರೆಯಲ್ಲಿ ಕಂಡೂ ಕಾಣದಂತೆ ಇಣುಕು ಹಾಕುತ್ತಿದ್ದ ಉಬ್ಬಿದ ಎದೆಯನ್ನೇ ಕದ್ದು ನೋಡುತ್ತಿದ್ದು ತನ್ನ ದೃಷ್ಟಿಯನ್ನು ಬೇಗನೆ ಹಿಂದಕ್ಕೆಳೆದುಕೊಂಡ ಕಿಟ್ಟು.

"ಹುಡುಗಿಯ ಜಾತಕ ಇದೆಯೇನು?"

"ಇದೆ"–ಎನ್ನುತ್ತಾ ಶ್ರೀಕಂಠಯ್ಯ ಜೇಬಿಗೆ ಕೈಹಾಕಿ ಜಾತಕ ತೆಗೆದು ಕೊಟ್ಟರು.

"ಆಗಲಿ ಇದನ್ನೂ–ಹುಡುಗನ ಜಾತಕವನ್ನೂ ಪುರೋಹಿತರಿಗೆ ತೋರಿಸಿ, ನಾನು ತಮಗೆ ಕಾಗದ ಬರೆಯುತ್ತೇನೆ."

"ತುಂಬ ಸಂತೋಷ. ಬೇಗನೆ ತಿಳಿಸಿದರೆ, ಈ ಯುಗಾದಿಗೆ ಮೊದಲೇ ಶುಭಕಾರ್ಯ ನೆರವೇರಿಬಿಟ್ಟರೆ ಒಳ್ಳೆಯದು!"

"ದೈವಾನುಗ್ರಹವಿದ್ದರೆ ಎಷ್ಟು ಹೊತ್ತು?"

ಎನ್ನುತ್ತಾ ನಾಗಪ್ಪ, ಶ್ರೀಕಂಠಯ್ಯನವರ ಪರಿವಾರವನ್ನು ಬೀಳ್ಕೊಟ್ಟರು.

ಹುಡುಗಿಯ ರೂಪ ಲಾವಣ್ಯಗಳು ಅವರ ಮನಸ್ಸಿಗೂ ಹಿಡಿಸಿತ್ತು. ವೆಂಕಮ್ಮನಂತೂ ಹುಡುಗಿಯನ್ನು ಮುಕ್ತ ಕಂಠದಿಂದ ಹೊಗಳಿದಳು. ಆ ಹುಡುಗಿ ತನ್ನ ಕೈಹಿಡಿದರೆ ಸಾಕು; ಅವಳು ಹೇಳಿದ ಹಾಗೇ ಕೇಳಿಕೊಂಡಿರುತ್ತೇನೆ ಎಂದುಕೊಂಡ ಕಿಟ್ಟು.

ಮರುದಿನ ಕಚೇರಿಗೆ ಹೋದಾಗ, ಕಿಟ್ಟುವನ್ನು ಬರಮಾಡಿಕೊಂಡು ಅಮಲ್ದಾರರು—

"ಹುಡುಗಿಯನ್ನು ಒಪ್ಪಿಕೊಂಡೆಯೇನಯ್ಯ?"

ಎಂದು ಕೇಳಿದರು. ಕಿಟ್ಟು ಉತ್ತರಿಸದೆ, ಶಬ್ದವಿಲ್ಲದ ನಗೆ ನಕ್ಕ.

"ನಿಮ್ಮ ತಂದೆ ಏನು ಹೇಳಿದರು?"

"ಕಾಗದ ಬರೆಯುತ್ತೇನೆ ಅಂತ ಹೇಳಿದರು ಸಾರ್."

"ಅವರಿಗೂ ಒಪ್ಪಿಗೆಯೇ ತಾನೆ?"

"ಮನೆಯಲ್ಲಿ ಎಲ್ಲರೂ ಒಪ್ಪಿಕೊಂಡಿದ್ದಾರೆ ಸಾರ್"

"ಹಾಗಾದರೆ ತಡವೇಕಪ್ಪ ? ಬೇಗನೆ ಆಗಿಹೋಗಲಿ. ಶ್ರೀಕಂಠಯ್ಯನವರಿಗೆ ಜಾಗ್ರತೆ ಕಾಗದ ಬರೆದು ಹಾಕಬೇಕೆಂದು, ನಾನು ಹೇಳಿದೆನೆಂದು ಹೇಳು" ಎಂದರು ಅಮಲ್ದಾರರು.

"ಆಗಲಿ ಸಾರ್" ಎಂದು ಕಿಟ್ಟು ಹಿಂತಿರುಗಿದ.

ಸಂಜೆ ಮನೆಗೆ ಬಂದಾಗ ಅಮಲ್ದಾರರು ಹೇಳಿದ ಮಾತನ್ನು ನಾಗಪ್ಪನವರಿಗೆ ತಿಳಿಸಿದ.

"ಆಗಲೇ ಬರೆದು ಹಾಕಿದ್ದೀನಿ ಕಣೊ"

ಎಂದರು ನಾಗಪ್ಪ. ಕಿಟ್ಟು ಸುಮ್ಮನಾದ.

ನಾಲ್ಕುದಿನಗಳ ನಂತರ ಅವರಿಗೊಂದು ಕಾಗದ ಬಂದಿತು. ಅದು ಶ್ರೀಕಂಠಯ್ಯನವರ ಕಾಗದವೇನೋ ಎಂದು ಆತುರದಿಂದ ನಾಗಪ್ಪನವರು ಕೈಗೆ ತೆಗೆದುಕೊಂಡು ನೋಡಿದರು. ಅದು ಗೌಡರ ಅಳಿಯನಮೇಲೆ ಹೂಡಿದ್ದ ಕ್ರಿಮಿನಲ್ ಕೇಸಿಗೆ ಹಾಜರಾಗಲು ಕೋರ್ಟಿನಿಂದ ಬಂದ ಸಮನ್ಸ್ ಪತ್ರವಾಗಿತ್ತು!

## ೧೧

ರೈಲಿನಲ್ಲಿ ಕುಳಿತಿದ್ದ ನಾಗಪ್ಪನವರು ಮಹತ್ವಾದ ವಿಷಯವೊಂದನ್ನು ಕುರಿತು ಯೋಚಿಸುತ್ತಿದ್ದರು. ಅದುವರೆಗೆ ಹಣದ ವಿಷಯವನ್ನು ಅಷ್ಟಾಗಿ ಆಳವಾಗಿ ಅವರು ಯೋಚಿಸಿರಲಿಲ್ಲ. ನಿಂಗನಹಳ್ಳಿಗೂ ಅಗ್ರಹಾರಕ್ಕೂ ಮಧ್ಯೆ ಇದ್ದ ಸ್ವಲ್ಪ ಸರ್ಕಾರಿ ಜಮೀನನ್ನು ಅಮಲ್ದಾರರ ಮೂಲಕ ಶಿಫಾರಸು ಮಾಡಿಸಿಕೊಂಡು ದರಖಾಸ್ತಿನಲ್ಲಿ ಕೊಂಡಿದ್ದರು. ಅದರಿಂದ ಬರುತ್ತಿದ್ದ ದವಸ ಧಾನ್ಯಗಳಿಂದ ವರ್ಷದಲ್ಲಿ ಆರು ತಿಂಗಳು ನಿಶ್ಚಿಂತೆಯಿಂದ ಸಂಸಾರ ನಡೆಸಬಹುದಿತ್ತು. ಜೊತೆಗೆ ಉಪಾಧ್ಯಾಯತನದ ನಿವೃತ್ತಿಯಿಂದ ಬರುತ್ತಿದ್ದ ಪೆನ್‌ಷನ್, ಕಿಟ್ಟು ನಾಣಯರ ಸಂಪಾದನೆ ಸಂಸಾರಕ್ಕೆ ಸಾಕಾಗಿ, ಅಲ್ಪ ಸ್ವಲ್ಪ ಕೂಡಿಸಿಡಲೂ ಸಾಧ್ಯವಾಗುತ್ತಿತ್ತು. ಆದರೆ ಹಾಗೆ ಕೂಡಿಸಿದ್ದ ಹಣ ಕೇವಲ

ಮುನ್ನೂರು ರೂಪಾಯಿಗಳಷ್ಟೇ ಆಗಿದ್ದವು. ಸುಂದರುವಿನ ವರ ದಕ್ಷಿಣೆಯ ಹಣ ಹತ್ತುಸಾವಿರ ರೂಪಾಯಿಗಳನ್ನೂ ಬೆಂಗಳೂರಿನ ಬ್ಯಾಂಕರನಿಗೆ ಬಡ್ಡಿಗೆ ಕೊಟ್ಟಿದ್ದರಿಂದ ಆ ಉತ್ಪತ್ತಿಯನ್ನೂ ನಾಗಪ್ಪ ನವರು ಅಸಲಿಗೇ ಸೇರಿಸುತ್ತ ತಮ್ಮ ಬಂಡವಾಳವನ್ನು ತಿಂಗಳು-ತಿಂಗಳಿಗೂ ಹೆಚ್ಚಿಸಿ ಕೊಳ್ಳುತ್ತಿದ್ದರು. ಎಷ್ಟೇ ಆಪತ್ಕಾಲಕ್ಕೂ ಅದರಿಂದ ಒಂದು ಕಾಸೂ ತೆಗೆಯಬಾರದೆಂದು ಅವರ ಹಟ. ಒಂದಲ್ಲ ಒಂದು ದಿನ ತಾವು ಲಕ್ಷಾಧಿಪತಿಗಳಾಗಿ ಮೆರೆಯುತ್ತೇನೆಂಬ ಆಸೆಯೇ ಆ ಹಟಕ್ಕೆ ಕಾರಣವಾಗಿತ್ತು. ಅದರಿಂದಾಗಿ ಆ ಹಣ ಬೆಳೆಯುವುದರಲ್ಲಿ ಆಸಕ್ತಿಯೇ ಹೊರತು ಖರ್ಚು ಮಾಡುವುದರಲ್ಲಿ ಮನಸ್ಸಿರಲಿಲ್ಲ. ಪುಟ್ಟಗಂಟಾದ ಮುನ್ನೂರ ರೂಪಾಯಿಯಷ್ಟೇ ಆಪತ್ಕಾಲದ ಹಣ ವೆಂದು ಅವರು ಭಾವಿಸಿದ್ದರು. ಅದಕ್ಕೂ ಖರ್ಚು ಬರುವುದೆಂದು ಅವರು ಕನಸು ಮನಸಿನಲ್ಲಿಯೂ ಎಣಿಸಿರಲಿಲ್ಲ. ಆದರೆ ಕ್ರಿಮಿನಲ್ ಕೇಸಿನ ಸಮನ್ ಕೈಸೇರಿದಾಗ, ಆ ಪುಟ್ಟಗಂಟಿಗೆ ಊನ ಬಂದಿತೆಂದು ವ್ಯಥೆ ಪಡುವಂತಾಯಿತು. ಅದನ್ನು ಹೇಗಾದರೂ ಮಾಡಿ ಉಳಿಸುವ ಪ್ರಯತ್ನ ಮಾಡಬೇಕೆಂದು ಬಗೆ ಬಗೆಯಾಗಿ ಆಲೋಚಿಸುತ್ತಿದ್ದರು. ತಮ್ಮ ಹಳೆಯ ಸ್ನೇಹಿತ ನಾರಾಯಣನಿಗೇ ಕೇಸನ್ನು ಒಪ್ಪಿಸಿ, ಬಿಟ್ಟಿ ಚಾಕರಿ ತೆಗಿಸಿದರೆ ಮುನ್ನೂರು ರೂಪಾಯಿ ಪೂರ್ತಿ ಖರ್ಚಾಗುವುದಿಲ್ಲ ವೆಂದು ಹೊಳೆಯಿತು. ಆದರೆ ನಾರಾಯಣನೂ ಫೀಸು ಕೇಳಿದರೆ-ತಮ್ಮ ಬಳಿ ಹಣವಿದೆಯೆಂದು ಹೆಚ್ಚು ಫೀಸು ಕೇಳಿದರೆ, ಪುಟ್ಟ ಗಂಟು ಮುಳುಗಿ, ಇನ್ನೊಂದು ದೊಡ್ಡ ಗಂಟನ್ನು ಹುಡುಕಿ ಅವನಿಗೆ ತೆರಬೇಕಾಗುವುದೆಂಬ ಅಂಶವೂ ಅವರ ಮನಸ್ಸಿನಲ್ಲಿ ಸುಳಿಯಿತು. ಆದರೆ ಹಳೆಯ ಸ್ನೇಹಿತ ತಮ್ಮ ಬಳಿಯೂ ಫೀಸು ತೆಗೆದುಕೊಳ್ಳುವನೇ? ಇಂಥ ಒಂದೇ ಒಂದು ಉಪಕಾರವನ್ನೂ ಅವನು ಮಾಡದೆ ಇದ್ದರೆ ಸ್ನೇಹಿತನೆನ್ನಿಸಿಕೊಳ್ಳುವನೆ? ಎಂಬ ಪ್ರಶ್ನೆಗಳು ಹೊಳೆದು, ಅದಕ್ಕೆ ಬಂದ ಒಪ್ಪು ಉತ್ತರಗಳನ್ನೇ ಆಧಾರವಾಗಿಟ್ಟುಕೊಂಡು, ನಾರಾಯಣನ ಮೇಲೆ ಭಾರವನ್ನು ಹೊರಿಸಿಬಿಟ್ಟು, ಪುಟ್ಟಗಂಟು ಉಳಿಯುವುದಕ್ಕೆ ದಾರಿಮಾಡಿಕೊಂಡರು.

ಮನಸ್ಸು ಇನ್ನೂ ಸಂದೇಹದ ಉಯ್ಯಾಲೆಯಲ್ಲಿ ತೂಗಾಡು

ತ್ತಿದ್ದಿತು. ಬೆಂಗಳೂರು ತಲಪಿ, ನಾರಾಯಣನನ್ನು ಕಂಡು ಮಾತನಾಡುವವರೆಗೂ ಸಮಾಧಾನವಿರಲಿಲ್ಲ.

ಯಾವ ಗಲಾಟೆಯೂ ಇಲ್ಲದೆ ತಮ್ಮ ಪಾಡಿಗೆ ತಾವಿದ್ದಾಗ, ಇಂಥ ಮೊಕದ್ದಮೆಗೆ ಪ್ರವೇಶಿಸಿದ್ದು ಎಷ್ಟು ಅನಿರೀಕ್ಷಿತ ? ಶ್ರೀನಿವಾಸ ನಂಥ ಅಯೋಗ್ಯನಾದ ಮಗ ತಮ್ಮ ಹೊಟ್ಟೆಯಲ್ಲಿ ಹುಟ್ಟಬಹುದೇ ? ಪಾಪ, ಅವನವನೇನು ಮಾಡುತ್ತಾನೆ? ಗಂಡಸಾದವನು ಏನುಬೇಕಾದರೂ ಮಾಡುತ್ತಾನೆ. ಹಾಗೆಯೇ ಅವನೂ ಒಂದು ಹೆಣ್ಣನ್ನು ಕೆಣಕಿದನೆಂದು ದೊಡ್ಡ ರಂಪು ಮಾಡಿ ಆ ಗೌಡರ ಅಳಿಯ ಇವನ ಪ್ರಾಣಹೋಗುವ ಹಾಗೆ ಹೊಡೆಯಬಹುದೆ? ಗೌಡರೂ ಈಚೆಗೆ ಬಹಳ ಹೆಚ್ಚಿಕೊಂಡಿದ್ದರು; ಅವರ ಹಾಗೆಯೇ ಅವರ ಅಳಿಯಂದಿರು. ಅವರಿಗೆಲ್ಲಾ ತಕ್ಕ ಶಿಕ್ಷೆಯಾಗಬೇಕಾಗಿತ್ತು. ಅವರ ಮದ ಇಳಿಸಬೇಕಾಗಿತ್ತು. ಅದಕ್ಕೋಸ್ಕರವೇ ದೇವರು ಇಂಥ ಸಂದರ್ಭ ಕಲ್ಪಿಸಿದ. ಈ ಕ್ರಿಮಿನಲ್ ಕೇಸು ಸಾಮಾನ್ಯವೆ? ಕೊಲೆಮಾಡುವುದಕ್ಕೇ ಪ್ರಯತ್ನಿಸಿದರೆಂದು ಆಪಾದನೆ ಹೊರಿಸಿಬಿಟ್ಟರೆ, ಗೌಡರ ಅಳಿಯನಿಗೆ ವರ್ಷಗಟ್ಟಲೆ ಕಠಿಣ ಶಿಕ್ಷೆ; ಅದೇ ಕೊರಗಿನಲ್ಲಿಯೇ ಗೌಡರೂ ನೆಗೆದು ಬೀಳುತ್ತಾರೆ! ಅವರಿಗೆ ಹಾಗಾದರೇನೇ ಸರಿಯಾದ ಶಿಕ್ಷೆ. ನಾಗಪ್ಪನ ಬುದ್ಧಿ, ಕೈ ಚಳಕ ಅವರಿಗೇನು ಗೊತ್ತು ? ಆ ರುಚಿ ಈಗ ಅನುಭವಿಸಲಿ—ಎಂದು ತಮ್ಮಷ್ಟಕ್ಕೆ ತಾವೇ ಅಂದುಕೊಂಡು ನಾಗಪ್ಪನವರು ಸಣ್ಣನಗು ನಕ್ಕರು.

ಬೆಂಗಳೂರು ರೈಲ್ವೆ ಸ್ಟೇಷನ್ ಬಂದಿತು. ನಿಲ್ದಾಣದ ಗಡಿಯಾರ ಸಂಜೆಯ ಐದೂವರೆ ತೋರಿಸುತ್ತಿತ್ತು. ಅವಸರದಿಂದ ಇಳಿದ ನಾಗಪ್ಪನವರು ಬಾರು ಹೆಜ್ಜೆ ಹಾಕುತ್ತಾ, ಬಳೇಪೇಟೆಯನ್ನು ದಾಟಿ, ಚಿಕ್ಕಪೇಟೆಯ ಗದ್ದಲವಲ್ಲಿ ಎದುರಾದವರಿಗೆ ಡಿಕ್ಕಿ ಹೊಡೆಯುತ್ತಾ ಬೇಗ ಬೇಗನೆ ನಡೆದು, ಮುಳ್ಳಪ್ಪ ಮಾರ್ಕೆಟ್ಟಿನಿಂದ ಸ್ವಲ್ಪ ಮುಂದೆ, ನಾರಾಯಣನ ಕಚೇರಿಯ ಮೆಟ್ಟಿಲು ಹತ್ತಿದರು. ಅಷ್ಟರಲ್ಲಿ ಕೆಳಗಿಳಿದು ಬರುತ್ತಿದ್ದ ನಾರಾಯಣನೇ ಎದುರಾದುದರಿಂದ, ನಾಗಪ್ಪನವರು ಬಲವಂತವಾಗಿ ನಮಸ್ಕಾರ ಹೇಳಿದರು.

"ಮನೇಗೆ ಹೊರಟು ಬಿಟ್ಟಿಯೇನು ?"

"ಇವತ್ತು ತುಂಬ ಬೇಜಾರಾಗಿಹೋಗಿದೆ ನಾಗಪ್ಪ. ಮನೇಗೆ ಬೇಗನೆ ಹೋಗೋಣಾಂತ ಹೊರಟೆ. ಬಾ ಹೋಗೋಣ."

"ನಾನು ಆಫೀಸಿನಲ್ಲೇ ನಿನ್ನ ನೋಡೋಣ ಅಂತ ಬಂದೆ"

"ಅದೇನಪ್ಪ ಅಂಥ ಸಮಾಚಾರ?"

"ನಡಿ, ಮೇಲಕ್ಕೆ ಹೇಳುತ್ತೇನೆ"

ನಾಗಪ್ಪನವರು ತನಗೆ ಯಾವುದೋ ಹೊಸ ಕೇಸೊಂದನ್ನು ತಂದಿದ್ದಾರೆಂದು ಭಾವಿಸಿದ ನಾರಾಯಣ ಮಹಡಿಗೆ ಹಿಂತಿರುಗಿದ. ನಾಗಪ್ಪನವರೂ ಹಿಂಬಾಲಿಸಿದರು. ಇಬ್ಬರೂ ಕುಳಿತು ಮಾತಿಗೆ ತೊಡಗಿದರು. ನಾಗಪ್ಪನವರು ತಾವು ಬಂದ ಉದ್ದೇಶವನ್ನೂ, ಗೌಡರ ಅಳಿಯನ ಮೇಲೆ ಹೂಡಿದ್ದ ಕ್ರಿಮಿನಲ್ ಕೇಸಿನ ವಿವರಗಳನ್ನೂ ತಿಳಿಸಿದರು. ಅದಕ್ಕೆ ಪರಿಹಾರ ದ್ರವ್ಯ ದೊರಕಿಸಿಕೊಳ್ಳಲು ಉಪಾಯವೇನಿದೆ? ಎಂದು ಕೇಳಿ ನಾರಾಯಣನ ಉತ್ತರಕ್ಕೆ ಕಿವಿ ನಿಮಿರಿಸಿದರು.

ಐದು ನಿಮಿಷ ಯೋಚಿಸಿದ ನಾರಾಯಣ. ನಾಗಪ್ಪನವರ ಮೊಕದ್ದಮೆ ತನಗೆ ಲಾಭಕಾರಿಯಲ್ಲವೆಂದು ತೀರ್ಮಾನಿಸಿಕೊಂಡನೇನೋ! ಕೂಡಲೇ ಅವರ ಉತ್ಸಾಹಕ್ಕೆ ತಣ್ಣೀರೆರಚುವಂತೆ—

"ನನಗೆ ಕ್ರಿಮಿನಲ್ ಕೇಸು ನಡೆಸಿ ಅನುಭವವಿಲ್ಲ; ಬೇಕಾದರೆ ಸಿವಿಲ್ ಕೇಸು ಎಷ್ಟೇ ಕಷ್ಟವಾಗಿದ್ದರೂ ಹಿಡಿಯುತ್ತೇನೆ. ಕ್ರಿಮಿನಲ್ ಕೇಸು ನಡೆಸಬೇಕಾಗಿದ್ದರೆ ಅದರಲ್ಲಿ ಪ್ರಾಕ್ಟೀಸ್ ಚೆನ್ನಾಗಿರಬೇಕು; ಅನುಭವ ಹೆಚ್ಚಾಗಿರಬೇಕು. ನನ್ನಂತಹವನು ತೆಗೆದುಕೊಂಡರೆ, ಅದರ ಜಾಡು ತಿಳಿಯದೆ ಹೇಗೆ ಹೇಗೋ ತಿರುಗಿ ರಂಪು ರಾಮಾಯಣವಾಗುತ್ತದೆ" ಎಂದುಬಿಟ್ಟ.

"ಹಾಗಾದರೆ ಏನು ಮಾಡೂಂತೀಯಾ?"

"ಯಾರಾದರೂ ಕ್ರಿಮಿನಲ್ ಲಾಯರನ್ನು ಹಿಡಿಯಬೇಕು. ಸಿವಿಲ್ ಕೇಸು ನಡೆಸುವವರ ಹತ್ತಿರ ಮಾತ್ರ ಖಂಡಿತ ಹೋಗಬೇಡ"

"ನನಗೆ ಯಾವ ಲಾಯರೂ ಗುರುತಿಲ್ಲವಲ್ಲ ನಾರಾಯಣ"

"ಬಳೇಪೇಟೆಯ ಕೊನೆಯಲ್ಲಿ ಒಬ್ಬರಿದ್ದಾರೆ ಚಂದೂರಾಯರು ಅಂತ. ಕ್ರಿಮಿನಲ್ ಕೇಸು ನಡೆಸುವುದರಲ್ಲಿ ಅವರು ಎತ್ತಿದ ಕೈ ಅವರು ಮನಸಿಟ್ಟರೆ ಎಂಥ ಕೇಸಾದರೂ ಗೆದ್ದ ಹಾಗೆಯೆ. ಅವರ

ಹತ್ತಿರ ಹೋಗುವುದೇ ಒಳ್ಳೆಯದು."

"ಫೀಸು ಜಾಸ್ತಿ ಕೇಳ್ತಾರೆಯೇನೋ?"

"ಅದರಲ್ಲೇನಿಲ್ಲ ಖಂಡಿತವಾದಿ ಆತ."

"ಹಾಗಾದರೆ ಏನಪ್ಪ ಈ ಬಡವನ ಗತಿ?"

"ಜಾಸ್ತಿ ಫೀಸು ಕೊಟ್ಟರೂ ಮುತುವರ್ಜಿವಹಿಸಿ ಕೆಲಸ ಮಾಡುತ್ತಾರೆ"

"ಅವರನ್ನೇ ನೋಡಲೇನು?....ನೀನೂ ಜೊತೆಗೆ ಬಾ"

"ನಾನು ಬರುವುದು ಚೆನ್ನಾಗಿರುವುದಿಲ್ಲ ನಾಗಪ್ಪ, ಸರಿಯುವನ ಹತ್ತಿರ. ನೀನೇ ಹೋಗಿ ಬಾ"

ಎಂದ ನಾರಾಯಣ. ನಾಗಪ್ಪನವರು ಹೊರಡಲು ಎದ್ದು ನಿಂತರು. ಮತ್ತೆ ಏನೋ ನೆನಪು ಮಾಡಿಕೊಂಡವರಂತೆ—

"ಅಂದ ಹಾಗೆ, ಆ ಬ್ಯಾಂಕರನನ್ನ ನಾಳೆ ನೋಡೋಣವೆ ನಾರಾಯಣ?"

"ವೃಥಾ ಯಾಕಪ್ಪ ಅವನ ಹತ್ತಿರ ಹೋಗಬೇಕು? ನಿನ್ನ ಹಣ ವಾಪಸ್ಸು ತೆಗೆದುಕೊಳ್ಳುತ್ತೀಯೇನು?"

"ಛೆ, ಎಲ್ಲಾದರೂ ಉಂಟೆ? ಅದಕ್ಕಲ್ಲ, ಅಸಲು ಬಡ್ಡಿ ಲೆಕ್ಕ ಒಟ್ಟು ಎಷ್ಟಾಗಿದೆಯೋ ತಿಳಿದುಕೊಂಡು ಬರೋಣಾಂತ"

"ದುಡ್ಡು ಕೊಟ್ಟು ಇನ್ನೂ ವರ್ಷವಾಗಲಿಲ್ಲ. ಆಗಲೇ ತನಿಖೆಗೆ ಹೊರಟರೆ ಅವನೇನಾದರೂ ತಿಳಿದುಕೊಂಡಾನು! ಇನ್ನೊಂದು ಸಾರಿ ಹೋದರಾಯಿತು."

"ಹಾಗೇ ಆಗಲಿ"

ಎನ್ನುತ್ತಾ ನಾಗಪ್ಪನವರು ಮೆಟ್ಟಿಲಿಳಿದರು. ಫುಟ್ಟಗಂಟೆಗೆ ಹೊತ್ತು ಬಂದಿತೆಂದು ಅವರಿಗೆ ಖಚಿತವಾಯಿತು. ಇನ್ನು ಆ 'ಮಹಾ ರಾಯ' ಎಷ್ಟು ಕೇಳುತ್ತಾನೋ ಎಂದು ಗುಣಾಕಾರ ಹಾಕಿದರು.

ಅವರ ಗುಣಾಕಾರಕ್ಕೆ ಎರಡರಷ್ಟು ಹೆಚ್ಚು ಗುಣಾಕಾರ ಹಾಕಿ, ಚಂದೂರಾಯರು—

"ಮೊದಲು ಇನ್ನೂರು ಕೊಡಿ. ಆಮೇಲೆ ನೋಡೋಣ. ಇದು ಸ್ವಲ್ಪ ತಲೆನೋವಿನ ಕೇಸೇ."

ಎಂದರು. ನಾಗಪ್ಪನವರಿಗೆ ಸುಸ್ತಾದಂತಾಯಿತು. ತಲೆ ತಿರುಗುತ್ತಿದೆಯೋ ಏನೋ ಎಂಬಂತೆ ಕಣ್ಣುಗಳು ಮಂಜಾದವು.

"ಇಷ್ಟು ಕೇಳಿಬಿಟ್ಟರೆ, ಬಡವ ಉಳಿಯುತ್ತಾನೆಯೇ ಸ್ವಾಮಿ?"

"ಬಡವ ಉಳಿಯಲಿ ಅಂತಲೇ ಇಷ್ಟು ಕೇಳುತ್ತಿರುವುದು."

"ಕಮ್ಮಿಮಾಡಿಕೊಳ್ಳಬೇಕು ಸ್ವಾಮಿ"

"ಇದು ದಿನಸಿ ವ್ಯಾಪಾರವಲ್ಲ ಚೌಕಾಶಿ ಮಾಡೋಕೆ. ಇಷ್ಟವಿದ್ದರೆ ಅಷ್ಟು ಫೀಸು ಕೊಟ್ಟು, ಗುಮಾಸ್ತೆ ಹತ್ತಿರ ಅಪ್ಲಿಕೇಷನ್ನಿಗೆ ರುಜುಹಾಕಿ ಹೋಗಿ"

ನಾಗಪ್ಪನವರಿಗೆ ಬಿಸಿತುಪ್ಪ ಬಾಯಿಗೆ ಸುರಿದುಕೊಂಡಂತಾಗಿತ್ತು. 'ಬೇರೆ ಲಾಯರ್ ಹತ್ತಿರ ಹೋದರೆ, ಇನ್ನೂ ಹೆಚ್ಚು ಕೇಳುತ್ತಾರೇನೋ! ಇವರು ತುಂಬ ಗಟ್ಟಿಗರು ಅಂತ ನಾರಾಯಣ ಹೇಳಿದ್ದಾನೆ. ಏನು ಮಾಡುವುದು? ಕೇಸು ಕೊಡುವುದಕ್ಕೂ ಇಲ್ಲ, ಬಿಡುವುದಕ್ಕೂ ಇಲ್ಲ, ಹಾಗಾಗಿದೆ!' ಎಂದು ಎರಡೆರಡು ಬಾರಿ ಯೋಚಿಸಿದ ನಾಗಪ್ಪ, ಕೊನೆಗೆ 'ದೇವರೇ ಗತಿ' ಎಂದುಕೊಂಡು ಇನ್ನೂರು ರೂಪಾಯಿ ಕೊಟ್ಟು ನಮಸ್ಕಾರ ಹೇಳಿ ಬಂದರು.

ಪುಟ್ಟಗಂಟಿನ ಮೂರನೇ ಎರಡು ಭಾಗ ಮಾಯವಾದುದಕ್ಕಾಗಿ ತುಂಬಾ ವ್ಯಸನವಾಗಿತ್ತು. ಈಗಲೇ ಇನ್ನೂರು ರೂಪಾಯಿ ಕೇಳಿದವರು, ಇನ್ನು ಪ್ರತಿಸಾರಿಯೂ ಕೋರ್ಟಿಗೆ ಬರುವಾಗ ಎಷ್ಟು ಕೇಳುವರೋ ಎಂಬ ಭೀತಿಯೂ ಕ್ಷಣಕಾಲ ತಲೆ ಹಾಕಿತು. ಆಗ ಹಣಕ್ಕೇನು ಮಾಡುವುದು? ಎಂಬ ಪ್ರಶ್ನೆ ಸುಳಿದಾಗ ಕಿಟ್ಟುವಿನ ವರದಕ್ಷಿಣೆಯ ಕಡೆಗೆ ಮನಸ್ಸು ಹರಿಯಿತು.

........ಶ್ರೀಕಂಠಯ್ಯನವರಿಂದ ಕಾಗದವೇ ಬರಲಿಲ್ಲವಲ್ಲ; ಎಂಟುನೂರು ವರದಕ್ಷಿಣೆ ಕೇಳಿ ಕಾಗದ ಬರೆದಿದ್ದಕ್ಕೆ, ಈ ಸಂಬಂಧವೇ ಬೇಡವೆಂದು ಸುಮ್ಮನಾಗಿಬಿಟ್ಟರೋ ಏನೋ. ಹುಡುಗ ಎಸ್. ಎಸ್. ಎಲ್. ಸಿ. ಮಾಡಿಕೊಂಡು, ತಾಲ್ಲೂಕು ಕಚೇರಿಯಲ್ಲಿ ಗೌರ್ನಮೆಂಟ್ ಕೆಲಸದಲ್ಲಿದ್ದಾನೆ ಅಂತಹವನಿಗೆ ಎಂಟುನೂರು ಕೊಡುವುದು ಹೆಚ್ಚೆ? ಓದದೆ, ಕೆಲಸವಿಲ್ಲದೆ ಇದ್ದ ಶ್ರೀನಿವಾಸನಿಗೆ ಸಾವಿರ ಕೊಟ್ಟರು ರಂಗಯ್ಯ. ಅವನಿಗಿಂತ ಕಿಟ್ಟು ನೂರುಪಾಲು ವಾಸಿ. ಖಂಡಿತವಾಗಿಯೂ

ಅವನಿಗೆ ಎಂಟುನೂರು ಹೆಚ್ಚಲ್ಲ. ಕೊನೆಯಪಕ್ಷ ಒಂದೂವರೆ ಸಾವಿರವಾದರೂ ತಾವು ಕೇಳಬೇಕಾಗಿತ್ತು. ಅಮಲ್ದಾರರು ಏನನ್ನುವರೋ ಎಂದು ಹಿಂಜರಿದು ಕೇವಲ ಎಂಟುನೂರು ಕೇಳಿ ಕಾಗದ ಬರೆದಿದ್ದರು. ಶ್ರೀಕಂಠಯ್ಯನವರಿಂದ ಉತ್ತರವೇ ಇಲ್ಲವಲ್ಲ!—ಎಂದುಕೊಂಡರು ನಾಗಪ್ಪ

ಸುಂದರುವನ್ನು ನೋಡಿಕೊಂಡು, ಆ ರಾತ್ರಿ ರಾಘವಯ್ಯನವರ ಮನೆಯಲ್ಲೇ ತಂಗಿ, ಬೆಳಗ್ಗೆ ಎದ್ದು ಊರಿಗೆ ಹೋಗೋಣವೆಂದು ನಿಶ್ಚಯಿಸಿ ಹೊರಟಿದ್ದ ನಾಗಪ್ಪನವರು ಅಷ್ಟರಲ್ಲಾಗಲೇ ಮಲ್ಲೇಶ್ವರಕ್ಕೆ ಬಂದಿದ್ದರು. ಪದ್ಮಳ ಮನೆಯ ಮುಂದಯೇ ಹಾದು, ಅತ್ತ ಓರೆ ನೋಟ ಬೀರಿ, ಮತ್ತೆ ಮುಂದೆ ನಡೆದು ರಾಘವಯ್ಯನವರ ಮನೆಯ ಬಾಗಿಲಿಗೆ ಬಂದರು. ಆವರಣದ ಹೊರಬಾಗಿಲಿನಲ್ಲಿಯೇ ನಿಂತಿದ್ದ ಮನೆಯ ಜವಾನ—

"ಯಾರುಬೇಕು ಸ್ವಾಮಿ ?"

ಎಂದು ಕೇಳಿದ. ತಾನು ಆ ಮನೆಯ ಅಳಿಯನ ತಂದೆ, ರಾಘವಯ್ಯನವರ ಬೀಗ–ಎಂದು ಇವನಿಗೆ ತಿಳಿಯದೇ ಎಂದು ಮನಸ್ಸಿನಲ್ಲಿಯೇ ಅಂದುಕೊಂಡು, ನಾಗಪ್ಪನವರು—

"ರಾಯರು ಇದ್ದಾರೇನಪ್ಪಾ ?"

"ಯಾರು, ದೊಡ್ಡವರೋ ಚಿಕ್ಕವರೋ ?"

"ಯಾರಾದರೂ ಸರಿಯೆ. ನಾನು ನೋಡಬೇಕು."

"ಇಲ್ಲೇ ಇರಿ ಸ್ವಾಮಿ. ಒಳಗೆ ಯಾರೂ ಬರಬಾರದು. ಚಿಕ್ಕಮ್ಮನೋರು ಹೇಳಿದ್ದಾರೆ."

"ನಾನು ನಿಮ್ಮ ಚಿಕ್ಕರಾಯರಿಗೆ ತಂದೆ ನಿಮ್ಮ ಚಿಕ್ಕ ಅಮ್ಮನೋರಿಗೆ ಮಾವ. ಪರವಾಗಿಲ್ಲ ಬಿಡಯ್ಯ"

"ನೀವು ಯಾರಾಗಿದ್ದರೆ ನನಗೇನು ಸ್ವಾಮಿ. ಒಳಗೆ ಬಿಡಬೇಡ ಎಂದು ಹೇಳಿದಮೇಲೆ ನಾನು ಅವರ ಮಾತು ಮೀರೋಕಾಗುತ್ತಾ ?"

"ಹೋಗಲಿ, ದೊಡ್ಡರಾಯರಿಗೆ ನಾನು ಬಂದಿದ್ದೀನಿ ಅಂತ ಹೇಳಯ್ಯ"

"ಅವರು ಊರಲ್ಲಿಲ್ಲ ಸ್ವಾಮಿ. ಗ್ರಾಮನೋಡಿಕೊಂಡು ಬರೋ

ದಿಕ್ಕೆ ಸರ್ಕೀಟ್ ಹೋಗಿದ್ದಾರೆ. ದೊಡ್ಡಮ್ಮನೋರೂ ಜೊತೇಲಿ ಹೋಗಿದ್ದಾರೆ."

"ಚಿಕ್ಕರಾಯರಿಗೆ, ನಿಮ್ಮ ತಂದೆ ಬಂದಿದ್ದಾರೆ ಅಂತ ಹೇಳಯ್ಯ."

"ಅವರು ಊರಿನಲ್ಲಿಲ್ಲ ಸ್ವಾಮಿ, ಸರ್ಕೀಟು ಹೋಗಿದ್ದಾರೆ."

"ನಿಮ್ಮ ಚಿಕ್ಕ ಅಮ್ಮನೋರೂ ಇಲ್ಲವೋ ?"

"ಅವರು ಕ್ಲಬ್ಬಿಗೆ ಹೋಗಿದ್ದಾರೆ."

ಅಷ್ಟರಲ್ಲಿ ಸರ್ರನೆ ಕಾರು ಆವರಣದೊಳಗೆ ನುಗ್ಗಿತು. ಸ್ವರ್ಣ ಇಳಿದು, ತನ್ನ ವ್ಯಾನಿಟಿಬ್ಯಾಗನ್ನು ತೂಗಾಡಿಸುತ್ತಾ ಕೆಳಗಿಳಿದಳು.

"ಅದೋ ಬಂದರಲ್ಲ–ಕೇಳಿಕೊಂಡು ಬಾರಯ್ಯ."

ಎಂದರು ನಾಗಪ್ಪ. ಅಷ್ಟರಲ್ಲಿ ಸ್ವರ್ಣ ಒಳಗೆ ಹೊರಟುಹೋಗಿದ್ದಳು. ಅವಳನ್ನೇ ಹಿಂಬಾಲಿಸಿದ ಜವಾನ ಎರಡು ನಿಮಿಷಗಳ ನಂತರ ಹಿಂತಿರುಗಿದ—

"ಯಾರಾದರಾಗಲಿ, ನಮಗೂ ಅವರಿಗೂ ಏನೂ ಸಂಬಂಧವಿಲ್ಲ. ಬಂದ ದಾರಿ ಹಿಡಿದು ಹೋಗಿ ಅಂತ ಹೇಳು ಅಂದರು ಸ್ವಾಮಿ"

ಎಂದ ಜವಾನ. ನಾಗಪ್ಪನವರ ಮುಖ ಕಪ್ಪಿಟ್ಟಿತು; ಮಾವನಾದವನಿಗೆ ಮರ್ಯಾದೆ ಮಾಡುವ ರೀತಿ ಇದೇನೇನು ?' ಎಂದುಕೊಂಡರು. ಸ್ವರ್ಣಳ ಬಗ್ಗೆ ಅದಕ್ಕಿಂತ ಹೆಚ್ಚು ಯೋಚಿಸಲು ಅವರಿಂದ ಸಾಧ್ಯವಾಗಲಿಲ್ಲ. ಅಲ್ಲಿಂದ ಮೆಲ್ಲನೆ ಹೆಜ್ಜೆ ಎತ್ತಿಟ್ಟರು. ಎಲ್ಲಿಗೆ ಹೋಗುವುದು ? ಆ ರಾತ್ರಿ ಮಲಗುವುದೆಲ್ಲಿ? ನಾರಾಯಣನ ಮನೆಗೆ ಹೋಗಬೇಕಾದರೆ ಬಸವನಗುಡಿಗೆ ಹೋಗಬೇಕು. ಈಗಲೇ ಒಂಭತ್ತು ಗಂಟೆಯ ಮೇಲಾಯಿತು. ಮಲ್ಲೇಶ್ವರದಿಂದ ಬಸವನಗುಡಿಗೆ ನಡೆದುಕೊಂಡು ಹೋಗುವುದೆಂದರೆ ಹನ್ನೊಂದುಗಂಟೆಯೇ ಹೊಡೆಯುತ್ತದೆ. ಏನುಮಾಡುವುದು – ಎಂದು ಪೇಚಾಡುತ್ತಿರುವಷ್ಟರಲ್ಲಿ ಪದ್ಮಮ್ಮನ ಮನೆಯ ಬಳಿಗೆ ಬಂದಿದ್ದರು. ಆ ಬಾಗಿಲಿನ ಕಡೆಗೆ ದೃಷ್ಟಿ ಹೊರಳಿಸಿದರು.

"ಒಳಕ್ಕೆ ಯಾಕೆ ಹೋಗಬಾರದು ?" ಎನ್ನಿಸಿತು. ಆದರೆ ಹಿಂದಿನದೆಲ್ಲ ನೆನಪಾಗಿ—

"ಹೇಗೆ ಹೋಗುವುದು ?" – ಎಂದು ಮನಸ್ಸು ಹಿಂಜರಿಯಿತು.

"ಹೋದರೆ ಪದ್ಮಮ್ಮ ಉಪಚರಿಸುತ್ತಾಳೆಯೋ ಇಲ್ಲವೋ ?"

ತೂಗಾಡಿತು ಮನಸ್ಸು.

"ಉಪಚಾರ ಏನುಬೇಕು-ಮಲಗಿಕೊಳ್ಳುವುದಕ್ಕೆ ಸ್ಥಳ ಸಿಕ್ಕರೆ ಸಾಕು."

"ಏನನ್ನುತ್ತಾಳೋ ಆಕೆ ?"

"ಛೆ, ಒಳ್ಳೆಯವಳು ಪದ್ಮಮ್ಮ. ಯಾವುದನ್ನೂ ಮನಸ್ಸಿನಲ್ಲಿಟ್ಟು ಕೊಳ್ಳುವುದಿಲ್ಲ. ಹಿಂದಿನದೆಲ್ಲ ಮರೆತುಬಿಟ್ಟಿದ್ದಾಳೆ!"

"ರತ್ನ........?"

"ಅವಳೇನು ಇನ್ನೂ ಹುಡುಗಿ! ತನ್ನಂತಹ ದೊಡ್ಡವನನ್ನು ಮಾತನಾಡಿಸುವ ಧೈರ್ಯ ಅವಳಿಗೆಲ್ಲಿದೆ ?"

ಹೋಗಲೋ ಬೇಡವೋ ಎಂದು ಹಾಗೂ ಹೀಗೂ ಓಲಾಡು ತ್ತಿದ್ದ ನಾಗಪ್ಪನವರ ಮನಸ್ಸು ಕೊನೆಗೆ ಹೋಗಲು ನಿಶ್ಚಯಿಸಿತು. ಪದ್ಮಮ್ಮನ ಮನೆಯ ಮೆಟ್ಟಲು ಹತ್ತಿ ಬಾಗಿಲು ತಟ್ಟಿದರು. ರತ್ನ ಬಂದು ಬಾಗಿಲು ತೆರೆದಳು.

"ಅಮ್ಮ ಇದ್ದಾರೇನಮ್ಮ?"

"ಹ್ಞ."

"ಏನು ಮಾಡುತ್ತಿದ್ದಾರೆ ?"

"ಒಳಗಿದ್ದಾರೆ"

ನಾಗಪ್ಪ ಒಳಗೆ ನಡೆದರು. ಯಾರ ಉಪಚಾರವೂ ಇಲ್ಲದೆ, ತಮ್ಮ ಡೊಂಕು ರುಮಾಲನ್ನು ತೆಗೆದು ಗೂಟಕ್ಕೆ ತಗುಲಿಸಿದರು. ಕೋಟು ತೆಗೆಯುವಷ್ಟರಲ್ಲಿ, ರತ್ನಳಿಂದ ಸುದ್ದಿ ಅರಿತ ಪದ್ಮಮ್ಮ ಹೊರಗೆ ಬಂದಳು.

"ಎಲ್ಲ ಸೌಖ್ಯತಾನೆ ?"

ನಾಗಪ್ಪನವರ ಪೀಠಿಕೆ ಅದು.

"ಹ್ಞ, ಊರಿನಲ್ಲಿ ಎಲ್ಲಾ ಕ್ಷೇಮವಾಗಿದ್ದಾರೆಯೋ ?"

ಪದ್ಮಮ್ಮ ಪ್ರಸನ್ನವದನದಿಂದಲೇ ಮಾತಿಗೆ ತೊಡಗಿದಳು.

"ಎಲ್ಲಾ ಚೆನ್ನಾಗಿದ್ದಾರೆ."

"ಏಳಿ, ಕೈಕಾಲು ತೊಳೆದುಕೊಳ್ಳಿ."

ನಾಗಪ್ಪನವರು ಮರುಮಾತನಾಡದೆ ಪದ್ಮಮ್ಮನ ಮಾತನ್ನು

ಪರಿಪಾಲಿಸಿದರು! ಎಲೆಯ ಮುಂದೆ ಕುಳಿತುದೂ ಆಯಿತು. ಹಸಿದ ಹೊಟ್ಟೆಗೆ ಒಂದೊಂದೇ ತುತ್ತು ಇಳಿಯುತ್ತಿರುವಾಗ—

"ಸುಂದರುವನ್ನು ನೋಡಲಿಲ್ಲವೇ?" ಎಂದಳು ಪದ್ಮಮ್ಮ. ನಾಗಪ್ಪನವರಿಗೆ ತುತ್ತು ಗಂಟಲಿನಲ್ಲೇ ಸಿಕ್ಕಿಕೊಂಡಂತಾಯಿತು.

"ಮನೆಯಲ್ಲಿರಲಿಲ್ಲ ಅವನು" ಅಷ್ಟಕ್ಕೇ ಮಾತು ನಿಂತಿತು.

ರತ್ನ ಹೊರಗಿನ ಕೋಣೆಯಲ್ಲಿ ನಾಗಪ್ಪನವರಿಗೆ ಹಾಸಿಗೆ ಹಾಸಿದಳು. ಊಟಮುಗಿಸಿದ ನಾಗಪ್ಪ ಪದ್ಮಮ್ಮನೊಡನೆ ಹೆಚ್ಚುಮಾತಿಗೆ ಹೋಗದೆ ಮಲಗಿಕೊಂಡು ಬಿಟ್ಟರು. ಆದರೆ ನಿದ್ದೆ ಬರುವುದೇ?

ಪುಟ್ಟಗಂಟು ಕರಗಿತು. ಮುಂದೆ ಮುಂದೆ ಕೋರ್ಟಿನ ಖರ್ಚಿಗೆ ಹಣಬೇಕು. ನಿಂಗನಹಳ್ಳಿಯ ಗೋಮಾಳದಲ್ಲಿರುವ ಹತ್ತು ಎಕರೆ ಜಮೀನನ್ನು ದರಖಾಸ್ತಿನಲ್ಲಿ ಗಿಟ್ಟಿಸಿಕೊಳ್ಳಲು ಕೋಟೆ ತಾಲ್ಲೂಕಿಗೆ ತಿರುಗುತ್ತಿರುವುದಾಗಿದೆ. ಅದಕ್ಕೂ ಹಣ ಬೇಕಾಗುತ್ತದೆ. ಮಗಳು ಸುಮಿತ್ರೆ ದಿನ ದಿನಕ್ಕೆ ದೊಡ್ಡವಳಾಗುತ್ತಿದ್ದಾಳೆ. ಅವಳ ಮದುವೆಗೆ ಹಣಬೇಕು, ಎಲ್ಲಕ್ಕೂ ಹಣಬೇಕು. ಆದರೆ ಹಣ ಎಲ್ಲಿದೆ?

ಅದೇ ವಿಷಯಗಳನ್ನೇ ಹತ್ತಾರು ಬಾರಿ ಯೋಚಿಸಿದರು. ಅವರ ಆರ್ಥಿಕ ಸಮಸ್ಯೆ ಬಗೆಹರಿಯಲಿಲ್ಲ. ನಿದ್ರೆ ಬಾರದೆ ಹೊರಳಾಡಿದರು. ಅಂಗಳದಲ್ಲಿದ್ದ ಗೋಡೆಯ ಗಡಿಯಾರ ಬಾರಿಸಿದ ಗಂಟೆಗಳನ್ನೆಲ್ಲಾ ಹನ್ನೆರಡು, ಒಂದು, ಎರಡು, ಮೂರು ಎಂದು ಎಣಿಸಿದರು. ಅಷ್ಟು ಹೊತ್ತಿನ ಬಳಿಕ ಮನಸ್ಸಿಗೇನೋ ಹೊಳೆದಂತಾಯಿತು. ಕಣ್ಣೆದುರಿಗೆ ನಿಧಿ ಇಟ್ಟುಕೊಂಡು ಕುರಡುಕಾಸಿಗೆ ಕಿಸೆಯೆಲ್ಲಾ ಹುಡುಕಿದಂತಾಯಿತಲ್ಲ ಎಂದು ಸಣ್ಣಗೆ ನಕ್ಕರು. ಅನಂತರ ಜೋಂಪು ಹತ್ತಿತು.

ಎಚ್ಚರವಾದಾಗ ಏಳುಗಂಟೆ. ಮುಖತೊಳೆದು ಬಂದ ಮೇಲೆ ಪದ್ಮಮ್ಮ ಕಾಫಿ ಕೊಟ್ಟಳು. ಒಂದೊಂದೇ ಗುಟುಕು ಹೀರುತ್ತಾ ನಾಗಪ್ಪನವರು—

"ರತ್ನಾಗೆ ಮದುವೆ ಮಾಡುವುದಿಲ್ಲವೆ?"

"ಮಾಡಬೇಕು."

"ಯಾವಾಗ?"

"ಇಷ್ಟರಲ್ಲೇ........"

"ವರ........?"

"ಅದೇ ಇನ್ನೂ ನಿಶ್ಚಯವಾಗಿಲ್ಲ !"

"ಬೇಕಾದರೆ ನಮ್ಮ ಕಿಟ್ಟೂಗೆ ಮಾಡಿಕೊಳ್ಳಬಹುದು. ಅವನಿಗೂ ಈ ನಡುವೆ ಯಾವು ಯಾವುದೋ ಹೆಣ್ಣುಗಳು ಬರುತ್ತಿವೆ. ನನಗೇನೋ ರತ್ನಾನ್ನೇ ಮಾಡಿಕೋಬೇಕು ಅಂತ ಇಷ್ಟವಿದೆ. ವೆಂಕೂನು ತುಂಬ ಆಸೆ ಪಡುತ್ತಾಳೆ"

"ಮಾಡಿಕೊಳ್ಳಬಹುದಾಗಿತ್ತು. ಆದರೆ........"

"ಆದರೆ ಏನು? ಅವನೇನೂ ವರದಕ್ಷಿಣೆ ಹೆಚ್ಚು ಕೇಳೋಲ್ಲ. ಮೂರುಸಾವಿರ ಕೊಟ್ಟರೆ ಸಾಕು. ಯುಗಾದೀಗೆ ಮುಂಚೆ – ಈ ಫಾಲ್ಗುಣದಲ್ಲೇ ಶುಭ ಕಾರ್ಯಮಾಡಿ ಬಿಡೋಣ."

"ಮೂರು ಸಾವಿರವೇನು, ಮೂವತ್ತು ಸಾವಿರದ ಈ ಆಸ್ತೀನೆಲ್ಲಾ ಕೊಡಬಹುದು – 'ವರ' ಅಂತ ಒಬ್ಬ ಯೋಗ್ಯಸ್ಥ ಸಿಕ್ಕಿದರೆ. ಈ ಮನೆ, ಶ್ರೀರಂಗಪಟ್ಟಣದ ಹತ್ತಿರ ಇರೋ ಜಮೀನು, ಆ ಹುಡುಗಿ ಹೆಸರಲ್ಲಿ ಇರೋ ಐದು ಸಾವಿರದ ಇನ್ಷೂರೆನ್ಸು ಎಲ್ಲಾ ಅವನಿಗೇ ಸೇರಿದ್ದು. ನಾನೇನು ತಲೆಮೇಲೆ ಹಾಕಿಕೊಂಡು ಹೋಗುತ್ತೀನೆಯೆ? ಮುಖ್ಯ ನನ್ನ ಮಗಳು ಸುಖವಾಗಿದ್ದರೆ ಸಾಕು"

"ಅದಕ್ಕೇ ನಾನು ಹೇಳಿದ್ದು. ಕಿಟ್ಟು ಇದ್ದಾನೆ – ರತ್ನಾಗೆ ತಕ್ಕ ವರ ಅಂತ. ಕಂಡವರು ಅನುಭವಿಸುವುದಕ್ಕೆ ಬದಲು ನಮ್ಮ ನಮ್ಮ ಸೊತ್ತು ನಮ್ಮ ನಮ್ಮಲ್ಲೇ ಇರಲಿ"

"ಅದೇನೋ ನಿಜವೆ. ಆದರೆ ರತ್ನ ಕಿಟ್ಟುವಿಗಿಂತ ದೊಡ್ಡವಳು, ವಯಸ್ಸಿನಲ್ಲಿ"

"ಒಂದು ತಿಂಗಳು ತಾನೆ ದೊಡ್ಡವಳು? ಪರವಾಗಿಲ್ಲ. ಮಹಾತ್ಮ ಗಾಂಧಿಯವರಂಥ ಮಹಾನುಭಾವರೇ ತಮಗಿಂತ ಎರಡು ವರ್ಷ ದೊಡ್ಡವಳಾದ ಹೆಂಡತಿಯನ್ನು ಕಟ್ಟಿಕೊಂಡರಂತೆ. ಅಂಥಾದ್ದರಲ್ಲಿ ಕಿಟ್ಟೂಗು – ರತ್ನಾಗು ಈ ವಯಸ್ಸೇನು ಅಡ್ಡಿ?"

"ಅದೂ ಸರಿಯೆ. ಆದರೆ ರತ್ನ ಅವನನ್ನು ಒಪ್ಪುವುದಿಲ್ಲವಲ್ಲ. ಅವಳು ಮದುವೆಯೇ ಬೇಡ ಅನ್ನುತ್ತಿದ್ದಾಳೆ. ಇಲ್ಲೇ ಒಬ್ಬರು ಡಾಕ್ಟರು ಇದ್ದಾರೆ. ವರದಕ್ಷಿಣೆ ಇಲ್ಲದೇನೆ ಮದುವೆಯಾಗುತ್ತೇನೆಂದು

ಬಂದಿದ್ದರು. 'ಇಷ್ಟವಿಲ್ಲ ನನಗೆ' ಎಂದು ಬಿಟ್ಟಳು ರತ್ನ. ಅಂಥಾದ್ದರಲ್ಲಿ ಕಿಟ್ಟುವನ್ನು ಒಪ್ಪುತ್ತಾಳೆಯೆ ?"

"ಒಪ್ಪದೆ ಏನು ಮಾಡುತ್ತಾಳೆ ? ನೀವು ಹೇಳಿದರೆ ಆಗುತ್ತದೆ"

ನಾಗಪ್ಪನವರು ಹೇಳಿ ಮುಗಿಸಿದೊಡನೆ, ಈ ಎಲ್ಲ ಮಾತುಗಳನ್ನೂ ಕೇಳಿಸಿಕೊಳ್ಳುತ್ತಾ ಹತ್ತಿರದ ಕೋಣೆಯಲ್ಲಿಯೇ ಕುಳಿತಿದ್ದ ರತ್ನ ಕೋಪಾವೇಶದಿಂದ ಅಂಗಳಕ್ಕೆ ಬಂದು :

"ಯಾರು ಹೇಳಿದರೂ ಆಗುವುದಿಲ್ಲ. ನಿಮ್ಮ ಮಗ ನಿಮ್ಮ ಮನೆಯಲ್ಲಿಯೇ ಇರಲಿ. ಈ ಬೆಣ್ಣೆ ಮಾತು ಹೇಳುವುದಕ್ಕೆ ಇಷ್ಟು ದೂರ ಬಂದರೇನೋ. ಇನ್ನೊಂದು ಸಾರಿ ನನ್ನ ಮದುವೆ ಮಾತು ಎತ್ತಬೇಡಿ. ಆ ಸುದ್ದಿ ಎತ್ತುವವರು ಈ ಮನೆ ಮೆಟ್ಟಲೇ ತುಳಿಯಬಾರದು." -ಎಂದು ಮಾತಿನ ಮಳೆಗರೆದಳು. ನಾಗಪ್ಪನವರ ಮುಖಕ್ಕೆ ಮಸಿ ಬಳಿದಂತಾಯಿತು.

"ಏನೋ ದಿಕ್ಕಿಲ್ಲದ ಹುಡುಗಿ. ಒಂದು ದಾರಿ ಮಾಡೋಣ ಅಂತ ಯೋಚಿಸಿದೆ. ಅದು ನಿಮಗೇ ಬೇಕಾಗಿಲ್ಲ !"

ಎನ್ನುತ್ತಾ ಅವರು ಎದ್ದು ಕೋಟು ತೊಟ್ಟುಕೊಂಡರು. ರುಮಾಲು ಕೈಗೆ ತೆಗೆದುಕೊಳ್ಳುವಷ್ಟರಲ್ಲಿ ಮತ್ತೆ ರತ್ನ—

"ಇಂಥ ದಿಕ್ಕಿಲ್ಲದ ಹುಡುಗೀರ್ನೇ ಹುಡುಕುತ್ತಾ ಇದ್ದೀರೇನೋ - ರಣಹದ್ದು ಬಾಯಿ ಬಿಟ್ಕೊಂಡು ಹೆಣ ಹುಡುಕೋ ಹಾಗೆ-ಹಣ ದೋಚೋದಿಕ್ಕೆ."

"ಹೋಗಲಿ. ಸುಮ್ಮನೆ ಇರಮ್ಮ ರತ್ನ. ಹಾಗನ್ನಬಾರದು.

ಮಗಳನ್ನು ಶಾಂತ ಗೊಳಿಸಿದಳು ಪದ್ಮಮ್ಮ.

"ನಾನು ಹೋಗ್ಬಿಟ್ಟು ಬರ್ತೀನಿ" ಎನ್ನುತ್ತಾ ನಾಗಪ್ಪನವರು ಹೊರಗಡೆಗೆ ಹೆಜ್ಜೆಯಿಟ್ಟರು.

"ಬರೋದೇನೂ ಬೇಕಾಗಿಲ್ಲ. ಹಾಗೇ ಹೋಗಿ........ಇನ್ಮೇಲೆ ಈ ರಸ್ತೇನೇ ಮರೆತು ಬಿಡಿ"—ಕೆಚ್ಚು ಕಂಠದಿಂದ ಕಿಚ್ಚು ಮಾತಿನಲ್ಲಿ ಚುಚ್ಚಿದಳು ರತ್ನ.

ನಾಗಪ್ಪನವರು ಹಿಂತಿರುಗಿಯೂ ನೋಡದೆ, ರಸ್ತೆಯ ತಿರುವಿನಲ್ಲಿ ಮಾಯವಾದರು !

ಹೆಂಗಸಲ್ಲದ ಹೆಂಡತಿಯನ್ನು ಕಟ್ಟಿಕೊಂಡು ಬಾಳುತ್ತಿದ್ದ ಸುಂದರುವಿನ ಕ್ಷೇಮ ಸಮಾಚಾರವನ್ನು ತಿಳಿಯದೆ ಚಡಪಡಿಸುತ್ತಿದ್ದಳು ವೆಂಕಮ್ಮ. ಶಾಮುವಿನ ಕೈಯಲ್ಲೊಂದು ಕಾಗದ ಬರೆಸಿ ಹಾಕಿದ್ದರೂ ಅದಕ್ಕೆ ಉತ್ತರ ಬಂದಿರಲಿಲ್ಲ. ಮನೆಯ ವಿಳಾಸಕ್ಕೆ ಕಾಗದ ಬಂದರೆ, ನಾಗಪ್ಪನವರೇನಾದರೂ ಸಿಟ್ಟಾಗಿ, ತಮಗೆ ತಿಳಿಯದೆ ಸುಂದರುವಿಗೆ ಕಾಗದ ಬರೆದಿದ್ದಕ್ಕಾಗಿ ಬೈಯ್ಯಬಹುದೆಂಬ ಹೆದರಿಕೆಯಿಂದ, ಕೋಟೆ ಹೈಸ್ಕೂಲಿಗೆ ಶಾಮುವಿನ ವಿಳಾಸಕ್ಕೇ ಕಾಗದ ಬರೆಯಬೇಕೆಂದು ಸುಂದರುವಿಗೆ ಬರೆಸಿದ್ದಳು ವೆಂಕಮ್ಮ. ಬಹು ದಿನಗಳಾದರೂ ಅವನಿಂದ ಕಾಗದ ಬಾರದಿದ್ದುದನ್ನು ಕಂಡು ಅವಳ ಮನಸ್ಸು ಕರಗತೊಡಗಿತು ಕೊನೆಗೆ ಪದ್ಮಮ್ಮನಿಗೊಂದು ಕಾಗದ ಬರೆದು, ಸುಂದರುವಿನ ಕ್ಷೇಮ ಸಮಾಚಾರವನ್ನು ತಿಳಿಸಬೇಕೆಂದು ಕೇಳಿಕೊಂಡಿದ್ದಳು. ಅದಕ್ಕೂ ಉತ್ತರ ಬಾರದಿದ್ದಾಗ, ಅವಳ ಕಳವಳ ಹೆಚ್ಚಾಯಿತು. ನಾಗಪ್ಪನವರು ಒಂದೆರಡು ಬಾರಿ, ಬೆಂಗಳೂರಿಗೆ ಹೋಗಿಬಂದಾಗ—

"ಸುಂದರು ಸಿಕ್ಕಿದ್ದನೆ? ಆರೋಗ್ಯವಾಗಿದ್ದಾನೆಯೆ?"

ಎಂದು ಕುತೂಹಲದಿಂದ ಆಕೆ ಪ್ರಶ್ನಿಸಿದ್ದಳು.

"ಆ ಅಯೋಗ್ಯನ ಮನೆ ಹತ್ತಿರ ನಾನು ಹೋಗಲಿಲ್ಲ. ಆರೋಗ್ಯವಿಲ್ಲದೆ ಅವನಿಗೇನು ಧಾಡಿ?"

"ಪಾಪ, ಯಾಕೆ ಹಾಗಂತೀರಿ ಅವನನ್ನ?"

"ಇನ್ನೇನು, ತಂದೆ ಅನ್ನೋನು ಮನೆ ಬಾಗಿಲಿಗೆ ಹೋದರೂ, ಒಳಕ್ಕೆ ಬಿಡಬೇಡ ಅಂತ ಜವಾನನ ಕೈಯ್ಯಲ್ಲಿ ಹೇಳಿ ಕಳುಹಿಸಿದ ಮೇಲೆ"

"ಸುಂದರು ಹಾಗೆ ಮಾಡಿದನೆ?"

"ಅವನಲ್ಲದಿದ್ದರೆ ಅವನ ಹೆಂಡತಿ. ಯಾರಾದರೇನು–ಎಲ್ಲಾ ಒಂದೇ."

ಮುಂದೆ ಮಾತನಾಡದಾದಳು ವೆಂಕಮ್ಮ. ಇದೆಲ್ಲಾ ಆ ಹತ್ತು ಸಾವಿರ ರೂಪಾಯಿನ ಮಹತ್ತು ಎಂದು ಆಕೆಗೆ ಹೊಳೆಯುವಿರಲಿಲ್ಲ. ಹುಡುಗನನ್ನು ಮಾರಿ ಹಣ ತೆಗೆದುಕೊಂಡಮೇಲೆ, ನಮ್ಮ ಹಕ್ಕು ಏನು ಉಳಿದಿವೆ ಎಂದುಕೊಂಡಳು. ಅವನನ್ನಾಗಲಿ, ಅವನ ಹೆಂಡತಿಯನ್ನಾಗಲಿ ದೂಷಿಸಿ ಫಲವಿಲ್ಲ, ಅದು ಅವರ ತಪ್ಪಲ್ಲ; ತನ್ನ ತಪ್ಪು, ತನ್ನ ಗಂಡನ ತಪ್ಪು—ಎಂದು ಕೊರಗಿ ಸಣ್ಣಗಾಗುತ್ತಾ ಬಂದಳು ವೆಂಕಮ್ಮ.

ಮನೆಯಲ್ಲಿ ತಾಯಿಯ ಪರಿಸ್ಥಿತಿಯನ್ನು ಅರಿತುಕೊಂಡಿದ್ದವನು ಶಾಮು ಒಬ್ಬನೇ. ಸುಮಿತ್ರೆ ಇನ್ನೂ ಅರಿಯದ ಹುಡುಗಿಯೇ ಆಗಿದ್ದಳು. ಕಿಟ್ಟುವಿಗೆ, ಕೋಟೆ ತಾಲ್ಲೂಕು ಕಚೇರಿಗೆ ದಿನವೂ ಐದು-ಹತ್ತು ಮೈಲಿ ನಡೆದು ಹೋಗಿಬರುವುದರಲ್ಲಿಯೇ ಆಯಾಸವಾಗುತ್ತಿತ್ತು. ನಾಣಿಯಂತೂ ಶಾಂತುವಿನೊಡನೆ ಮದುವೆಯಾಗುವ ಕನಸುಕಟ್ಟಿಕೊಂಡೇ ಸಂತೋಷಪಡುತ್ತ ಹೊತ್ತು ಕಳೆಯುತ್ತಿದ್ದುದರಿಂದ ತಾಯಿಯ ಸ್ಥಿತಿಯನ್ನು ವಿಚಾರಿಸುವ ಗೋಜಿಗೆ ಹೋಗಿರಲಿಲ್ಲ. ಶಾಮು ಮಾತ್ರ ಚಿಕ್ಕಂದಿನಿಂದ ಪರೋಪಕಾರ ಬುದ್ಧಿಯನ್ನೇ ಬೆಳಸಿಕೊಂಡು, ಪರಹಿತ ಸಾಧನೆಯಲ್ಲಿಯೇ ಮನಸ್ಸು ಹರಿಸುತ್ತಿದ್ದುದರಿಂದ ವೆಂಕಮ್ಮನ ಸುಖ-ದುಃಖಗಳನ್ನು ಅರಿತುಕೊಳ್ಳಲು ಸಮರ್ಥನಾಗಿದ್ದ. ಶ್ರೀನಿವಾಸನ ಗಾಯಗಳಿಗೆ ದಿನವೂ ಮುಲಾಮು ಹಚ್ಚಿ, ಬಟ್ಟೆಕಟ್ಟಿ, ಅವನ ಆರೈಕೆ ಮಾಡುವುದೂ ಶಾಮುವಿನ ಕೆಲಸವೇ. ಇನ್ನು ಪರೀಕ್ಷೆ ಸಮೀಪಿಸುತ್ತಿದ್ದುದರಿಂದ ಓದಿನ ಕಡೆಗೆ ಗಮನಕೊಡುವುದೂ ಮುಖ್ಯ ವಿಷಯವಾಗಿತ್ತು. ಒಂದು ಕಡೆ ತಾಯಿಯ ಕೊರಗು ನಿವಾರಿಸಬೇಕು; ಮತ್ತೊಂದು ಕಡೆ ಪರೀಕ್ಷೆ ಹತ್ತಿರ ಬರುತ್ತಿರುವುದರಿಂದ ಚೆನ್ನಾಗಿ ಓದಿಕೊಳ್ಳಬೇಕು. ಯುಗಾದಿ ಬೇರೆ ಸಮೀಪಿಸುತ್ತಿರುವುದರಿಂದ ಕಿಟ್ಟುವಿನ ಮದುವೆಯನ್ನು ಮುಗಿಸಬೇಕೆಂದು ಓಡಾಡುತ್ತಿರುವ ನಾಗಪ್ಪನವರಿಗೆ ಸಣ್ಣಪುಟ್ಟ ಕೆಲಸಗಳಲ್ಲಿ ಸಹಾಯಕನಾಗಿರಬೇಕು—ಹೀಗೆ ಇಕ್ಕಟ್ಟಿನಲ್ಲಿ ಸಿಕ್ಕಿಕೊಂಡಿದ್ದ ಶಾಮು.

ಕ್ರಮೇಣ ಅನ್ನ-ನೀರಿನ ಕಡೆಗೆ ಗಮನವೀಯದೆ ಹಾಸಿಗೆಯನ್ನೇ ಹಿಡಿದಳು ವೆಂಕಮ್ಮ. ಮನೆಯಲ್ಲಿ ಅಡಿಗೆ ಮಾಡುವವರು ಕೂಡ

ಇಲ್ಲದೆ, ಹುಡುಗರು ಉಪವಾಸ ಮಾಡುವಂತಾಯಿತು. ಇತರರ ಮನೆಗಳಲ್ಲಿ ಅಡಿಗೆ ಕೆಲಸಕ್ಕೆ ಒಪ್ಪಿಕೊಂಡು ಹೋಗುತ್ತಿದ್ದ ನಾಗಪ್ಪ, ತಮ್ಮ ಮನೆಯಲ್ಲಿ ಅಡಿಗೆ ಮನೆಯ ಹೊಸಲುದಾಟಿ ಒಳಗೆ ಹೋಗುತ್ತಿರಲಿಲ್ಲ. ಸುಮಿತ್ರೆ ಆ ಕೆಲಸಗಳನ್ನು ಅರಿಯಳು. ಈ ಸ್ಥಿತಿಯನ್ನು ನೋಡಿದ ನೆರೆಮನೆಯ ಸೀತು, ಉಪಾಯಗಾಣದೆ ಶಾಂತುವನ್ನು ವೆಂಕಮ್ಮನ ಮನೆಗೆ ಕಳುಹಿಸಬೇಕಾಯಿತು. ಸುಮಿತ್ರೆಯೂ ನೆರವಿಗೆ ಇದ್ದುದರಿಂದ ನಾಗಪ್ಪನವರ ಸಂಸಾರವನ್ನು ಮೊದಲಿನಂತೆಯೇ ನಡೆಸಿಕೊಂಡು ಹೋಗಲು ಶಾಂತುವಿಗೆ ಸಾಧ್ಯವಾಯಿತು.

ಕಂಡವರ ಮನೆಯ ಹುಡುಗಿಯನ್ನು ತಮ್ಮ ಮನೆಯಲ್ಲಿ ಎಷ್ಟು ದಿನ ದುಡಿಸುವುದು? ಕಿಟ್ಟುವಿಗೆ ಮದುವೆಯಾಗಿ ಸೊಸೆ ಮನೆಗೆ ಬಂದರೆ ಸ್ವಲ್ಪ ಮಟ್ಟಿಗೆ ಸಹಾಯವಾಗುತ್ತದೆ—ಎಂದುಕೊಂಡಳು ವೆಂಕಮ್ಮ. ಆದರೆ ಶ್ರೀಕಂಠಯ್ಯನವರಿಂದ ಮದುವೆ ಪ್ರಸ್ತಾಪದ ಕಾಗದವೇ ಬಾರದಿದ್ದುದನ್ನು ಕಂಡು ಅವಳಿಗೆ ಇನ್ನಷ್ಟು ನಿರಾಶೆಯಾಗಿತ್ತು.

ನಾಗಪ್ಪನವರಂತೂ ಬೇರೊಂದು ಕಡೆಯಿಂದ ಯಾವುದಾದರೂ ಹೆಣ್ಣು ಬಂದರೆ ಕಿಟ್ಟುವಿಗೆ ಮದುವೆ ಮಾಡಿಬಿಡಬೇಕೆಂದು ನಿರ್ಧರಿಸಿದ್ದರು. ಅದೇ ಸಮಯಕ್ಕೆ ಕಾಕತಾಳನ್ಯಾಯದಂತೆ ಮದ್ದೂರಿನಿಂದ ಕನ್ಯಾ ಪಿತೃವೊಬ್ಬರು ಆಗಮಿಸಿದರು. ನೇರವಾಗಿ ನಾಗಪ್ಪನವರನ್ನೇ ಹುಡುಕಿಕೊಂಡು ಬಂದು, ತನ್ನ ಹೆಸರು 'ರಿಟೈರ್ಡ್ ಹೆಡ್‌ಗುಮಾಸ್ತೆ' ನರಸಿಂಹಯ್ಯನೆಂದೂ, ಮದ್ದೂರಿನಲ್ಲಿಯೇ ವಾಸವಾಗಿರುವುದಾಗಿಯೂ, ವರನನ್ನು ಹುಡುಕಿಕೊಂಡು ಬಂದಿರುವುದಾಗಿಯೂ-ಮುಚ್ಚುಮರೆಯಿಲ್ಲದೆ ಪರಿಚಯ ಮಾಡಿಕೊಂಡರು.

"ತಾವು ಇಷ್ಟುದೂರ ದಯಮಾಡಿಸಿದ್ದು ತುಂಬ ಸಂತೋಷ" ಎಂದರು ನಾಗಪ್ಪ.

ಸ್ವಲ್ಪ ಹೊತ್ತಿನ ನಂತರ ಸುಮಿತ್ರೆಯ ಕೈಯ್ಯಲ್ಲಿ ಕಾಫಿ ತೆಗೆಸಿಕೊಂಡು ಬಂದು–

"ತೆಗೆದುಕೊಳ್ಳಬೇಕು." ಎಂದು ಉಪಚರಿಸಿದರು.

"ನಾನು ಕುಡಿಯುವುದಿಲ್ಲ ಸ್ವಾಮಿ. ವರನನ್ನು ಹುಡುಕುವುದಕ್ಕೆ ಬಂದಿದ್ದೇನೆಯೇ ಹೊರತು, ಕಾಫಿ ಕುಡಿಯುವುದಕ್ಕೆ ಬಂದಿಲ್ಲ!"

ನಿರ್ದಾಕ್ಷಿಣ್ಯವಾಗಿತ್ತು ನರಸಿಂಹಯ್ಯನವರ ಮಾತು. ಮನುಷ್ಯ ತುಂಬ ಖಂಡಿತವಾದಿ ಎಂದು ನಾಗಪ್ಪನವರಿಗೆ ಕ್ಷಣಮಾತ್ರದಲ್ಲಿ ಹೊಳೆಯಿತು.

"ಹುಡುಗ ತಾಲ್ಲೂಕು ಕಚೇರಿಯಲ್ಲಿದ್ದಾನಂತೆ. ನನ್ನ ಸ್ನೇಹಿತರೊಬ್ಬರಿಗೆ ಕೋಟೆ ತಾಲ್ಲೂಕಿನಿಂದ ಮದ್ದೂರಿಗೆ ವರ್ಗವಾಯಿತು. ಅವರೇ ಹೇಳಿದ್ದರು. ಹೋಗಿ ನೋಡಿಕೊಂಡು ಬರೋಣ ಅಂತ ಬಂದಿದ್ದೇನೆ"

"ತುಂಬ ಸಂತೋಷ."

"ಎಷ್ಟು ವರ್ಷ ಆಯಿತು ಸರ್ವಿಸ್ಸಿಗೆ ಸೇರಿ?"

"ಮೊದಲು ಒಂದು ವರ್ಷ ಬದಲಿ ನೋಡುತ್ತಿದ್ದ. ಖಾಯಂ ಆಗಿ ಈಗಾಗಲೇ ಮೂರು ವರ್ಷಕ್ಕೆ ಬಂತು."

"ಹಾಗಾದರೆ ನಲವತ್ತಾರು ಪ್ಲಸ್ ಹದಿನೆಂಟು ಬರುತ್ತೇಂತ ಕಾಣುತ್ತೆ ?"

"ಹ್ಞ"

"ಇವತ್ತು ಭಾನುವಾರ. ಹುಡುಗ ಮನೆಯಲ್ಲಿದ್ದಾನೊ ?"

ಹೊರಕೋಣೆಯಲ್ಲಿ ಕುಳಿತಿದ್ದ ಕಿಟ್ಟುವನ್ನು ಕರೆದರು ನಾಗಪ್ಪ. ನರಸಿಂಹಯ್ಯನವರು ಅವನನ್ನು ಎರಡು ನಿಮಿಷ ಆಪಾದಮಸ್ತಕ ನಿಟ್ಟಿಸಿ ನೋಡಿ–

"ವಯಸ್ಸೆಷ್ಟು ?" ಎನ್ನುತ್ತಾ ನಸ್ಯವೇರಿಸಿದರು.

"ಇಪ್ಪತ್ನಾಲ್ಕಾಯಿತು–ಶಿವರಾತ್ರಿಗೆ"

"ಸರಿ, ನೀನು ಹೋಗಪ್ಪ" ಎಂದು ಕಿಟ್ಟುವನ್ನು ಕಳುಹಿಸಿದರು ನರಸಿಂಹಯ್ಯ.

ಅನಂತರ ನಾಗಪ್ಪನವರ ಕಡೆಗೆ ತಿರುಗಿ–

"ಈ ವರ್ಷವೇ ಮದುವೆ ಮಾಡಬೇಕೆಂದಿದ್ದೀರೊ ?"

"ಈ ಯುಗಾದೀಗೆ ಮುಂಚೆಯೇ ಮುಗಿಸಿಬಿಡಬೇಕು ಅಂತ ಆಸೆ"

"ಇನ್ನೇನು ಇಪ್ಪತ್ತು ದಿನವೂ ಇಲ್ಲವಲ್ಲ–ಯುಗಾದಿ ?"

"ಹೌದು, ಮನೆಯಲ್ಲಿ ಮಾಡುವವರು ಇಲ್ಲ. 'ಅವಳು' ಹಾಸಿಗೆ ಹಿಡಿದುಬಿಟ್ಟಿದ್ದಾಳೆ. ಒಂದೇ ಒಂದು ಹೆಣ್ಣುಮಗು ಇದೆ. ಅದು

ಅರಿಯದ ಹುಡುಗಿ. ಏನೂ ಮಾಡಲಾರದು. ಹೀಗಾಗಿ ಸ್ವಲ್ಪ ತೊಂದರೆಯೇ ಆಗಿದೆ. ಆದಷ್ಟು ಬೇಗ ಅವನಿಗೆ ಮದುವೆ ಮಾಡಿಬಿಟ್ಟರೆ, ಅವನ ಹೆಂಡತಿ ಅನ್ನುವವಳು ಮನೆಗೆ ಬಂದು ಸ್ವಲ್ಪ ಸಹಾಯವಾಗಿರುತ್ತಾಳೆ ಅಂತ ಯೋಚನೆ ಮಾಡಿದ್ದೇನೆ."

"ಸರಿ, ಹಾಗಾದರೆ ಹುಡುಗನ ಜಾತಕ ಕೊಡಿ."

ನಾಗಪ್ಪನವರು ಒಳಗೆ ಹೋಗಿ ಕಿಟ್ಟುವಿನ ಜಾತಕದ ಪ್ರತಿಯನ್ನು ತಂದಿತ್ತರು.

"ಜಾತಕ ಕೂಡಿದರೆ ಆಗಿಹೋಗಲಿ. ನನಗೂ ಮೂರು ಹೆಣ್ಣು-ನಾಲ್ಕು ಗಂಡು ಇದೆ. ಇಬ್ಬರು ಹೆಣ್ಣು ಮಕ್ಕಳಿಗೂ ಮದುವೆ ಮಾಡಿದ್ದೇನೆ. ಮೊದಲನೆ ಹುಡುಗ ಬೊಂಬಾಯಿಯಲ್ಲಿ ಕೆಲಸದಲ್ಲಿದ್ದಾನೆ. ಅವನಿಗೂ ಬೆಂಗಳೂರಿನಿಂದಲೇ ಹೆಣ್ಣು ತಂದಿದ್ದೇನೆ. ಇನ್ನು ಎರಡನೆಯವನಿಗಾಗಬೇಕು. ಚಿಕ್ಕಮಗಳೂರಿನಿಂದ ಹುಡುಗಿ ಬಂದಿದೆ. ಅನುಕೂಲವಾದ ಸಂಬಂಧವಾದ್ದರಿಂದ ಆ ಮದುವೆಯನ್ನು ಈ ಯುಗಾದಿಗೇ ಮುಗಿಸಬೇಕೆಂದು ಯೋಚಿಸಿದ್ದೇನೆ. ಅದರ ಜೊತೆಯಲ್ಲಿ ಮೂರನೆ ಮಗಳ ಮದುವೆಯೂ ಆಗಿಹೋದರೆ ನನಗೆ ನಿಶ್ಚಿಂತೆ."

"ಹಾಗೇ ಮಾಡಿ. ಸಂತೋಷ"

"ಅಂದಹಾಗೆ ಕೊಡುವುದ - ತೆಗೆದುಕೊಳ್ಳುವುದು ಏನೇನು ಎಂದು ನಿರ್ಧರವಾಗಿ ಹೋಗಲಿ."

"ನೀವೇ ಹೇಳಿ." ಎಂದರು ನಾಗಪ್ಪ.

"ನಮ್ಮ ಹುಡುಗನಿಗೆ ಚಿಕ್ಕಮಗಳೂರು ಹೆಣ್ಣಿನವರು ಏನೇನು ಕೊಡುತ್ತಾರೋ ಅದನ್ನೇ ನಿಮ್ಮ ಮಗನಿಗೂ ಕೊಡುತ್ತೇನೆ. ಅದಕ್ಕಿಂತ ನಾನೇನೂ ಹೆಚ್ಚು ಕೊಡಲಾರೆ"

"ಅವರು ಏನೇನು ಕೊಡುತ್ತಾರೋ ?"

"ಆ ಮಾತೂ ಆಗಿದೆ. ಹುಡುಗನ ಕೈಗೆ ಸಾವಿರದಿನ್ನೂರು ಕೊಡುತ್ತಾರಂತೆ. ಬೆಳ್ಳಿತಟ್ಟೆ, ಚೊಂಬು, ಎರಡು ಬಟ್ಟಲು ಹುಡುಗನಿಗೆ ಕೊಡುತ್ತಾರಂತೆ. ಹುಡುಗಿಯ ಕೈಗೆ ಎರಡೆರಡು ಚಿನ್ನದ ಬಳೆ ಹಾಕುತ್ತಾರಂತೆ. ನಮ್ಮ ಖರ್ಚು ಏನೂ ಇಲ್ಲ. ಒಂದು ಕೂರು ಸೀರೆ, ಅರ್ಧ ಸವರನ್ನಿನಲ್ಲಿ ಒಂದು ಮಾಂಗಲ್ಯ ಮಾಡಿಸಿಕೊಂಡು

ಹೋಗಿ, ಕನ್ಯಾದಾನ ತೆಗೆದುಕೊಂಡು ಬರುವುದಷ್ಟೇ ನಮ್ಮ ಕೆಲಸ."

"ಹುಡುಗನಿಗೆ ಒಂದು ಕೈಗಡಿಯಾರ, ಎರಡು ಸೂಟು ಕೊಡಬೇಕು."

"ನಮ್ಮ ಹುಡುಗನಿಗೇನೂ ಅವರು ಕೊಡುವುದಿಲ್ಲ. ಆದ್ದರಿಂದ ನಾವೂ ನಿಮಗೆ ಕೊಡುವುದಕ್ಕಾಗುವುದಿಲ್ಲ."

"ಹುಡುಗನಿಗೆ ಕಾಲಕ್ಕೆ ತಕ್ಕಹಾಗೆ ಒಟ್ಟೆಬರೆ ಇಲ್ಲದಿದ್ದರೆ ಹೇಗೆ?"

"ನಮ್ಮ ಹುಡುಗ ಈಗ ಬೆಂಗಳೂರಿನಲ್ಲಿದ್ದುಕೊಂಡು, ರೇಡಿಯೋ ಫ್ಯಾಕ್ಟರಿಗೆ ಕೆಲಸಕ್ಕೆ ಹೋಗುತ್ತಿದ್ದಾನೆ. ತಿಂಗಳಿಗೆ ನೂರೈವತ್ತು ರೂಪಾಯಿ ಸಂಬಳ. ಅಂಥ ಅವನಿಗೆ ಆ ಚಿಕ್ಕಮಗಳೂರಿನವರು ಸೂಟು–ಕೈಗಡಿಯಾರ ಕೊಡಲಿಲ್ಲ. ಇನ್ನು ನಿಮ್ಮ ಮಗ ತಾಲ್ಲೂಕು ಕಚೇರಿ ಗುಮಾಸ್ತೆ. ನಲವತ್ತಾರು ಪ್ಲಸ್ ಹದಿನೆಂಟರ ನಾದ ಕಾರಕೂನ. ಅಂಥವನಿಗೆ ಸೂಟು–ಕೈಗಡಿಯಾರ ಎಲ್ಲಿ ತರೋಣ?"

ನರಸಿಂಹಯ್ಯನವರ ನಿರ್ದಾಕ್ಷಿಣ್ಯದ ನುಡಿಗಳಿಗೆ ಸೋತರು ನಾಗಪ್ಪ.

"ಹುಡುಗ ಹುಡುಗಿಯನ್ನು ನೋಡ ಬೇಡವೆ?"

"ನನ್ನ ಜೊತೆಯಲ್ಲಿ ಬಂದು ಬೇಕಾದರೆ ನೋಡಿಕೊಂಡು ಹೋಗಲಿ. ಗಂಡು ಹುಡುಕಿಕೊಂಡು, ಹುಡುಗಿಯನ್ನು ಊರೂರು ಮೆರವಣಿಗೆ ಮಾಡಿಸುವುದಕ್ಕಾಗುತ್ತದೆಯೆ?"

"ಅದೂ ನಿಜಾನ್ನಿ!"

"ಹುಡುಗಿ ಸ್ವಲ್ಪ ಕುಳ್ಳಾಗಿದ್ದಾಳೆ. ವಯಸ್ಸು ಹದಿನೆಂಟಾಯಿತು. ಎಣ್ಣೆ ಗೆಂಪು ಬಣ್ಣ. ಕೈ, ಕಾಲು, ಕಣ್ಣು, ಮೂಗು ಎಲ್ಲಾ ಸರಿಯಾಗಿದೆ. ಸೊಗಸಾಗಿ ಹಾರ್ಮೋನಿಯಂ ಬಾರಿಸುತ್ತಾಳೆ. ಮನೆ ಕೆಲಸ ಮಾಡುತ್ತಾಳೆ. ಬಾಯಿ ಮಾತ್ರ ಸ್ವಲ್ಪ ದೊಡ್ಡದು!" ಎಂದು ತಮ್ಮ ಮಗಳನ್ನು ವರ್ಣಿಸಿದರು ನರಸಿಂಹಯ್ಯ.

"ಹಾಗಾದರೆ ನೋಡುವುದೂ ಬೇಕಾಗಿಲ್ಲ. ಲಗ್ನಪತ್ರಿಕೆ ಇಡಿಸಿಬಿಡಿ."

"ಚೆನ್ನಾಗಿ ಯೋಚಿಸಿ ನೋಡಿ. ಯಜಮಾನಿಯನ್ನೂ ಕೇಳಿ ಒಪ್ಪಿಗೆ ತೆಗೆದುಕೊಳ್ಳಿ."

"ಅವಳೇನು ಒಪ್ಪುತ್ತಾಳೆ"

"ಮಾತು ಯಾವಾಗಲೂ ಒಂದೇ ಇರಬೇಕು. ಆಮೇಲೆ ತಕರಾರು ತಂದರೆ ಆಗೋದಿಲ್ಲ. ನನ್ನದು ಅತಿ ಕೆಟ್ಟ ಸ್ವಭಾವ. ಹಾಳು ತಾಲ್ಲೂಕು ಕಚೇರಿ ಕೆಲಸದಲ್ಲಿ ಪಳಗೀ ಪಳಗೀ ಕೆಟ್ಟಗುಣಗಳೆಲ್ಲಾ ಅಂಟಿಕೊಂಡು ಬಿಟ್ಟಿದೆ."

"ಛೆ, ಹಾಗೇಕೆ ಅಂದುಕೊಳ್ಳುತ್ತೀರಿ!"

"ಹೌದು ನಾಗಪ್ಪನವರೇ, ಇದು ಮದುವೆ ಮಾತು. ಎರಡು ಜೀವಗಳು ಬದುಕಿರುವವರೆಗೂ ಒಟ್ಟಾಗಿದ್ದು ಸುಖ-ದುಃಖಗಳಲ್ಲಿ ಹೊಂದಿಕೊಂಡಿರಬೇಕು. ಹುಡುಗನದೊಂದು ದಾರಿ – ಹುಡುಗಿಯದೊಂದು ದಾರಿ ಆಗಿಬಿಟ್ಟರೆ ಸಂಸಾರ ನಿಸ್ಸಾರ ; ಸುಖವಿಲ್ಲ ಅದಕ್ಕೆ ಖಡಾಖಂಡಿತವಾಗಿ ಎಲ್ಲ ವಿಷಯವೂ ತೀರ್ಮಾನವಾಗಬೇಕು. ಹುಡುಗಿಗೆ ಸ್ವಲ್ಪ ಬಾಯಿ ಮುಂದು. ಅದನ್ನು ಸರಿಪಡಿಸಿಕೊಳ್ಳುವುದು ನಿಮಗೆ ಸೇರಿದೆ"

"ಮದುವೆಯಾದಮೇಲೆ ಎಲ್ಲಾ ಸರಿಹೋಗುತ್ತದೆ ಬಿಡಿ"

"ಹಾಗಾದರೆ ಲಗ್ನಪತ್ರಿಕೆ ಮಾಡಿಕೊಳ್ಳಲು ಅಭ್ಯಂತರವಿಲ್ಲ ತಾನೇ?"

"ಏನೂ ಅಭ್ಯಂತರವಿಲ್ಲ ಸ್ವಾಮಿ"

"ನಿಮ್ಮ ಯಜಮಾನಮ್ಮನನ್ನು ಸ್ವಲ್ಪ ಕರೆಯಿರಿ. ನಾನು ಮಾತನಾಡಬೇಕು."

ನಾಗಪ್ಪನವರು ಒಳಗೆ ಹೋಗಿ ವೆಂಕಮ್ಮನಿಗೆ ವಿಷಯವನ್ನೆಲ್ಲಾ ತಿಳಿಸಿದರು. ಮಲಗಿದ್ದಾಕೆ ಮೆಲ್ಲನೆ ಎದ್ದು ಹೊರಗಡೆ ಬಂದು ಒಳಬಾಗಿಲ ಸನಿಯದಲ್ಲಿ ನಿಂತಳು.

"ನಿಮ್ಮ ಅಭಿಪ್ರಾಯ ಏನು ತಾಯಿ?"

"ಹುಡುಗ ಒಪ್ಪಿದರೆ ಆಗ ಹೋಗಲಿ" ಎಂದು ಕ್ಷೀಣವಾದ ಧ್ವನಿಯಲ್ಲಿ ನುಡಿದಳು ವೆಂಕಮ್ಮ.

"ಹಾಗಾದರೆ ಹುಡುಗನನ್ನೂ ಕೇಳಬೇಕಲ್ಲ!"

"ಅವನನ್ನೇನು ಕೇಳೋದು. ನಾನು ಹೇಳಿದ ಹಾಗೆ ಕೇಳುತ್ತಾನೆ." ಎಂದರು ನಾಗಪ್ಪ. ನರಸಿಂಹಯ್ಯನವರಿಗೆ ಆ ಮಾತು ಸರಿ

ಹೋಗಲಿಲ್ಲ. ಎಲ್ಲ ವಿಷಯದಲ್ಲಿಯೂ ನೇರವಾದ ಮಾತುಕತೆ ನಡೆದು ಹೋಗಲಿ ಎಂಬುದು ಅವರ ವಾದ. ಲೋಕವಿರೋಧಿಯಾದರೂ ಸರಿ, ಖಂಡಿತವಾದಿಯಾಗಿರಬೇಕೆಂಬುದು ಅವರ ಸಂಕಲ್ಪ ಇದ್ದಂತೆ ತೋರುತ್ತಿತ್ತು. ಎಂತಲೇ ಹುಡುಗಿಯ ಒಂದು ಕೆಟ್ಟಗುಣವಾದ, ಬಾಯಿ ದೊಡ್ಡದು, ಎಂಬುದನ್ನೂ ಮುಚ್ಚಿಡದೆ ಬೀಗರಾಗಲಿರುವ ನಾಗಪ್ಪನವರಿಗೆ ಹೇಳಿಬಿಟ್ಟಿದ್ದರು

"ಹಾಗಲ್ಲ ಸ್ವಾಮಿ, ಮೊದಲು ಹುಡುಗ ಒಪ್ಪಬೇಕು. ನಾಳೆ ಹುಡುಗಿಯ ಜೊತೆಯಲ್ಲಿ ಅವನು ತಾನೆ ಸಂಸಾರ ಮಾಡೋನು?"

ನರಸಿಂಹಯ್ಯನವರ ಪ್ರತಿ ಮಾತೂ ನಾಗಪ್ಪನವರನ್ನು ಸೋಲಿನ ಸಾಲಿಗೆ ಸೆಳೆಯುತ್ತಿತ್ತು. ಉಪಾಯಗಾಣದೆ ಎದ್ದು, ಕಿಟ್ಟು ಕುಳಿತಿದ್ದ ಕೋಣೆಗೆ ಹೋದರು. ಐದೇ ನಿಮಿಷಗಳ ಕಾಲಾವಕಾಶದಲ್ಲಿ ಅವನಿಗೂ ವಿಷಯವನ್ನು ತಿಳಿಸಿದರು.

"ಶ್ರೀಕಂಠಯ್ಯನವರಿಂದ ಕಾಗದವೇ ಬರಲಿಲ್ಲ. ಬಹುಶಃ ಅವರಿಗೆ ಒಪ್ಪಿಗೆ ಇಲ್ಲಾಂತ ಕಾಣುತ್ತೆ. ಅದೂ ಅಲ್ಲದೆ ಇವರು ವರ ದಕ್ಷಿಣೆ ಹೆಚ್ಚುಕೊಡುತ್ತಾರೆ. 'ಎಂಟುನೂರು ಕೊಡಪ್ಪಾ ಸಾಕು' ಎಂದು ಶ್ರೀಕಂಠಯ್ಯನವರಿಗೆ ಬರೆದಿದ್ದರೂ ಅವರು ಉತ್ತರ ಬರೆಯಲಿಲ್ಲ. ಈ ಸಂಬಂಧ ಅನುಕೂಲವಾಗಿದೆ: ಒಪ್ಪಿಕೊಳ್ಳೋ ಕಿಟ್ಟು."

"ಹುಡುಗಿಯನ್ನು ನೋಡದೆ ಹೇಗಣ್ಣಾ ಒಪ್ಪಿಕೊಳ್ಳುವುದು?"

"ಹುಡುಗಿಯನ್ನೇನೋ ನೋಡೋದು ಎಲ್ಲ ಹುಡುಗಿಯರ ಹಾಗೆಯೇ ಅವಳೂ ಒಬ್ಬ ಹುಡುಗಿ. ಕಣ್ಣು, ಕಿವಿ, ಮೂಗು, ಬಾಯಿ—ಎಲ್ಲಾ ಇದೆ. ಹಾಗೇನಾದರೂ ಇಲ್ಲದೆ ಇದ್ದರೆ ಮದುವೇ ದಿನವೇ ಮಂಗಳಾರತಿ ಎತ್ತಿಬಿಟ್ಟು ವಾಪಸ್ಸು ಬಂದುಬಿಡೋಣ."

"ನಿನ್ನಇಷ್ಟ ಇದ್ದಹಾಗೆ ಮಾಡಣ್ಣ. ನನಗಿಂತ ನೀನು ಹೆಚ್ಚು ತಿಳಿದವನು." ಎಂದ ಕಿಟ್ಟು. ತಂದೆಯೆಂದರೆ ಅವನಿಗೆ ಚಿಕ್ಕಂದಿನಿಂದಲೂ ಗೌರವ. ಅವರು ಏನುಮಾಡಿದರೂ ಸರಿಯೆ ಎಂಬ ಭಾವನೆ. ಎಂತಲೇ, ತಂದೆ ತನ್ನ ಹಿತವನ್ನೇ ಬಯಸುತ್ತಾರೆಂದು ಒಪ್ಪಿಗೆಯಿತ್ತಿದ್ದ ಕಿಟ್ಟು.

"ನೀನೇಬಂದು 'ಒಪ್ಪಿಕೊಂಡಿದ್ದೇನೆ' ಅಂತ ಹೇಳಿಬಿಡು

ಬಾರೋ" ಎನ್ನುತ್ತಾ ನಾಗಪ್ಪನವರು ಪುತ್ರನನ್ನು ಕರೆದುಕೊಂಡು ಅಂಗಳಕ್ಕೆ ಬಂದರು.

"ಹುಡುಗ ಒಪ್ಪಿಕೊಂಡಿದ್ದಾನೆ. ನೀವೇ ಕೇಳಿ"

"ಸಂಗತಿಯೆಲ್ಲಾ ನಿಮ್ಮ ತಂದೆಯಿಂದ ಗೊತ್ತಾಗಿದೆತಾನೆ? ನೀನೇನನ್ನುತ್ತೀಯಾ?"

"ದೊಡ್ಡವರು ಹೇಳಿದ ಹಾಗೆ ಆಗಲಿ."

"ಅಂದರೆ 'ಒಪ್ಪಿಗೆ' ಅನ್ನು!"

"ಹ್ಞ" ಎಂದ ಕಿಟ್ಟು.

ನರಸಿಂಹಯ್ಯನವರು-

"ಇನ್ನು ನನಗೆ ಸಮಾಧಾನವಾಯಿತು. ಜಾತಕ ತೋರಿಸಿ ಕೂಡಿಬಂದರೆ ದಿನ ಗೊತ್ತುಮಾಡಿ ಕಾಗದ ಬರೆಯುತ್ತೇನೆ; ನೀವು ಬಂದು ಲಗ್ನಪತ್ರಿಕೆ ಮಾಡಿಕೊಂಡು ಹೋಗಿ. ಆಗಲೇ ಹಣ ಕೊಟ್ಟು ಬಿಡುತ್ತೇನೆ" ಎಂದರು.

"ಈಗಲಾದರೂ ಒಂದು ಲೋಟ ಕಾಫಿ ಕುಡಿಯಬಹುದಲ್ಲ!"

"ಆಗಬಹುದು" ಎಂದರು ನರಸಿಂಹಯ್ಯ ನಗುತ್ತ.

ಮತ್ತೊಮ್ಮೆ ಸುಮಿತ್ರೆ ಕಾಫಿ ತಂದುಕೊಟ್ಟಳು.

"ನಮ್ಮ ಮದ್ರಾಸಿನ ಕಾಫಿಗೂ-ಈ ಊರಿನ ಕಾಫಿಗೂ ರುಚಿಯೇ ಬದಲಾಗಿ ಹೋಗಿದೆಯಲ್ಲಾ!"

"ಅದು ನೀರಿನ ಗುಣ!" ನಾಗಪ್ಪನವರು ನಕ್ಕು ನುಡಿದರು.

ಕಾಫಿಕುಡಿದು ಮುಗಿಸಿದ ನರಸಿಂಹಯ್ಯನವರು ಎದ್ದುನಿಂತು ಕೋಟು ಸರಿಪಡಿಸಿಕೊಂಡರು.

"ಹಾಗಾದರೆ ನಾನಿನ್ನು ಹೋಗಿಬರುತ್ತೇನೆ."

"ತುಂಬ ಸಂತೋಷ" ಎನ್ನುತ್ತಾ ನಾಗಪ್ಪನವರು ಬೀಳ್ಕೊಟ್ಟರು.

## ೧೩

"ತುಂಬ ಸಂತೋಷ!"

ಎನ್ನುತ್ತಲೇ ನರಸಿಂಹಯ್ಯನವರೂ ಮದುವೆಗೆ ಬಂದಿದ್ದವರನ್ನೆಲ್ಲಾ ಬೀಳ್ಕೊಟ್ಟು, ನಾಗಪ್ಪನವರ ಪರಿವಾರವನ್ನೂ ರೈಲು ಹತ್ತಿಸಿದರು. ಈ ಬಾರಿ ನಡೆದ ಮದುವೆ ಯಾರಿಗೂ ಯಾವ ವಿಧದಲ್ಲಿಯೂ ಮನಸ್ತಾಪ ಬರದಂತೆ ಸುಗಮವಾಗಿ ನಡೆದುದು ಎಲ್ಲರಿಗೂ ಸಮಾಧಾನವನ್ನುಂಟುಮಾಡಿತ್ತು. ವೆಂಕಮ್ಮನೂ ಪ್ರತ್ಯಕ್ಷವಾಗಿ ಸೊಸೆಯನ್ನು ಕಂಡು ಮೆಚ್ಚಿಕೊಂಡಳು. ಮೊದಲನೆ ಸೊಸೆಯ ಹಾಗೆ ಈ ಹುಡುಗಿಯ ಗುಣ ಇಲ್ಲದಿರಲಿ ಎಂದು ಹಾರೈಸಿದಳು. ಎರಡನೆಯ ಮಗ ಸುಂದರುವಿನ ಹಾಗೆ ಕಿಟ್ಟುವಿನ ಬಾಳು ದುಃಖಮಯವಾಗದಿರಲಿ ಎಂದು ದೇವರಲ್ಲಿ ಮೊರೆಯಿಟ್ಟಳು. ಸುಂದರುವೂ ಮದುವೆಗೆ ಬಂದಿದ್ದನಾದ್ದರಿಂದ, ವೆಂಕಮ್ಮ ಅವನನ್ನು ಕಣ್ಣಾರೆ ಕಂಡು ಸುಖ–ದುಃಖ ವಿಚಾರಿಸಿದಳು. ಆದರೆ ಇದ್ದ ಸಂಗತಿಯೆಲ್ಲಾ ಬರಿಯ ದುಃಖಮಯವಾದುದೇ ಆಗಿದ್ದರಿಂದ ವೆಂಕಮ್ಮನಿಗೆ ಅದನ್ನು ನೆನಪುಮಾಡಿಕೊಳ್ಳುವ ಇಷ್ಟವಿರಲಿಲ್ಲ. ಆದರೆ ಅವನು ಹೇಳಿದ ರತ್ನಳ ಸುದ್ದಿಯನ್ನು ಎಷ್ಟು ಪ್ರಯತ್ನಪಟ್ಟರೂ ವೆಂಕಮ್ಮನಿಗೆ ಮರೆಯುವುದು ಸಾಧ್ಯವಾಗಲಿಲ್ಲ. ಸುಂದರು ಹೇಳಿದ ಪ್ರತಿಯೊಂದು ಮಾತೂ ಅವಳ ಕಿವಿಯಲ್ಲಿ ಪ್ರತಿಧ್ವನಿಸುತ್ತಾ ಕಣ್ಮುಂದೆ ಕಲ್ಪನಾಚಿತ್ರಗಳು ಬಂದು ನಿಲ್ಲುತ್ತಿದ್ದವು........

"ಅಮ್ಮ, ಒಂದು ದಿನ ರತ್ನ ತನ್ನ ರೂಮಿನಲ್ಲಿ ನೇಣುಹಾಕಿಕೊಂಡು ಪ್ರಾಣಬಿಡಲು ಏರ್ಪಾಡುಮಾಡಿಕೊಂಡಿದ್ದಳು. ಅತ್ತಿ ಅಕಸ್ಮಾತ್ತಾಗಿ ನೋಡದೆ ಇದ್ದರೆ ಇಷ್ಟುಹೊತ್ತಿಗೆ ನಾವೆಲ್ಲಾ ಅವಳನ್ನು ಮರೆತುಬಿಡಬೇಕಾಗಿತ್ತು !"

"ಆಮೇಲೆ?"

"ಅತ್ತಿ ಅತ್ತುಕರೆದು ತಪ್ಪಿಸಿದಳು. ಆಮೇಲೆ ಸ್ವಲ್ಪ ಹೊತ್ತಿನ ಮೇಲೆ ನನಗೆ ಹೇಳಿಕಳುಹಿಸಿದಳು. 'ಹೋಗಬೇಡಿ' ಅಂದಳು ಸ್ವರ್ಣ. ತಡೆದು ನಿಲ್ಲಿಸಿಬಿಟ್ಟಮೇಲೆ ಏನುಮಾಡಲಿ ಹೇಳು."

"ಅವಳಿಗೇಕೆ ಅಷ್ಟು ಹೊಟ್ಟೆಕಿಚ್ಚು ?"

"ನಾನೂ-ರತ್ನ ಒಂದು ದಿನ ಹತ್ತಿರ ಹತ್ತಿರ ಕೂತುಕೊಂಡು ಮಾತನಾಡುತ್ತಿದ್ದೆವು. ಅದನ್ನ ಸ್ವರ್ಣ ನೋಡಿದಳು. ರತ್ನ ಹೋದ ಮೇಲೆ ನನ್ನನ್ನ ಇವಳು ಬಾಯಿಗೆ ಬಂದಹಾಗೆ ಬೈದಳು. ಅವತ್ತಿನಿಂದ ನಮ್ಮಿಬ್ಬರಮೇಲೂ ಇವಳಿಗೆ ಗುಮಾನಿ ಅವಕ್ಕೇ ಅತ್ತೆ ಹೇಳಿಕಳುಹಿಸಿದಾಗ 'ಹೋಗಬೇಡಿ' ಅಂತ ತಡೆದಳು."

"ಹೀನ ಅದೃಷ್ಟವಪ್ಪ ನಮ್ಮದು. ಆ ಸಂಬಂಧ ಗಂಟುಬಿದ್ದದ್ದು ನಮ್ಮ ಕರ್ಮ."

"ಸ್ವಲ್ಪ ಹೊತ್ತಾದಮೇಲೆ ಅತ್ತೇನೇ ಬಂದರು. ಸದ್ಯ, ಆಗ ಸ್ವರ್ಣ ಮನೆಯಲ್ಲಿರಲಿಲ್ಲ-ಕ್ಲಬ್ಬಿಗೆ ಹೋಗಿದ್ದಳು."

"ಆಮೇಲೆ ನೀನು ಹೋಗಿದ್ದೆಯಾ ?"

"ಹ್ಞಾ, ಹೋಗಿ ರತ್ನಾನ ಸಮಾಧಾನ ಮಾಡಿಬಂದೆ. ಒಂದು ದಿನವೆಲ್ಲಾ ಕೂಡಿಸಿಕೊಂಡು, ನನಗೆ ತೋಚಿದಷ್ಟು ಬುದ್ಧಿಹೇಳಿದೆ. ಅವತ್ತಿನಿಂದ ಚೆನ್ನಾಗಿದ್ದಾಳಮ್ಮ. ನಾನು ಹೇಳಿದ ಸಮಾಧಾನ ಅವಳ ಮನಸ್ಸಿಗೆ ತುಂಬ ಹಿಡಿಸಿತೂಂತ ಕಾಣುತ್ತೆ. ಈಗ ತುಂಬ ಬದಲಾಗಿ ಬಿಟ್ಟಿದ್ದಾಳೆ. ಮೊದಲಿನ ಹಾಗೆಯೇ ನಗುನಗುತ್ತ ಇರುತ್ತಾಳೆ."

ಸುಂದರುವಿನ ಮಾತುಕೇಳಿ ವೆಂಕಮ್ಮನ ಕಣ್ಣುಗಳಲ್ಲಿ ಗೆಲುವು ಮಿಂಚಿತು.

"ರತ್ನಾನ, ನಿಮ್ಮತ್ತೇನ ನಾನು ತುಂಬ ಕೇಳಿದೇಂತ ಹೇಳಪ್ಪ!"

"ಆಗಲಮ್ಮ"

"ನಿನ್ನ ಬಾಳು ಹೀಗೇ ಸುಖ ಕಾಣವೆ ಸುರಟಿಕೊಂಡು ಹೋಯಿತಲ್ಲೋ ಸುಂದರು."

ತಾಯಿಯ ಮಾತಿನಲ್ಲಿ ತುಂಬಿದ್ದ ದುಃಖ ಸುಂದರುವಿಗೆ ಅರ್ಥವಾಗದಿರಲಿಲ್ಲ. ಆವನು ಬದಲು ನುಡಿಯದೆ ಕಾರು ಹತ್ತಿ, ಮದುವೆಯ ದಿನದ ಸಂಜೆಯೇ ಹೊರಟು ಹೋದ.

ಅವನ ಹಿಂದೆಯೇ ಹೊರಟು ಹೋಗಿದ್ದ ವೆಂಕಮ್ಮನ ಮನಸ್ಸನ್ನು

ನರಸಿಂಹಯ್ಯನವರ ಹೆಂಡತಿ ಕಾವೇರಮ್ಮ ಹಿಂದಕ್ಕೆ ಕರೆದುಕೊಂಡು ಬರಬೇಕಾಯಿತು!

"ಉರುಟಣೆಗೆ ಕೂಡಿಸಿದ್ದಾರೆ. ನೀವು ಇಲ್ಲೇ ಕೂತರೆ ಹೇಗೆ ಯಜಮಾನಮ್ಮನೋರೆ?"

ಕಾವೇರಮ್ಮ ಮುಗುಳು ನಗೆ ನಗುತ್ತಾ ಹೇಳಿದರು. ಆಕೆಯದು ಅತಿ ಸಾತ್ವಿಕ ಸ್ವಭಾವವೆಂದು, ಮದುವೆಯ ಮನೆಗೆ ಕಾಲಿರಿಸಿದಂದಿನಿಂದಲೇ ವೆಂಕಮ್ಮ ಕಂಡುಕೊಂಡಿದ್ದಳು. ಬಂಧು-ಬಳಗದವರೊಡನೆ ಆಕೆ ಆಡುತ್ತಿದ್ದ ಮಾತುಗಳು ತುಂಬ ಆತ್ಮೀಯತೆಯಿಂದ ಕೂಡಿದ್ದವು. ಯಾರ ಮನಸ್ಸೂ ನೋಯಿಸಬಾರದೆಂದು ಸಂಕಲ್ಪಿಸಿಕೊಂಡಿದ್ದರೇನೋ ಕಾವೇರಮ್ಮ! ವೆಂಕಮ್ಮನಿಗಂತೂ ಆ ಬೀಗಿತ್ತಿಯನ್ನು ಕಂಡು ತುಂಬ ಸಂತೋಷವಾಗಿತ್ತು. ಕಪ್ಪಹಳ್ಳಿಯ ರಾಜಮ್ಮನಿಗಾಗಲಿ, ರಾಘವಯ್ಯನವರ ಪತ್ನಿ ಅನ್ನಪೂರ್ಣಮ್ಮನಿಗಾಗಲಿ ಕಾವೇರಮ್ಮನಲ್ಲಿದ್ದ ಯೋಗ್ಯತೆಯಲ್ಲಿ ಒಂದು ಸಾಸಿವೆ ಕಾಳಿನಷ್ಟು ಪಾಲೂ ಇಲ್ಲವೆಂದು ತೀರ್ಮಾನಿಸಿಕೊಂಡಿದ್ದಳು ವೆಂಕಮ್ಮ. ಅಂತಹ ಗುಣ ಸಂಪನ್ನೆಯಾದ ತಾಯಿಯ ಹೊಟ್ಟೆಯಲ್ಲಿ ಹುಟ್ಟಿದ ಮಗಳೂ ಗುಣ ಸಂಪನ್ನೆಯಾಗಿಯೇ ಇರಬೇಕೆಂದು ತರ್ಕಿಸಿ ವೆಂಕಮ್ಮ ನಂಬಿದಳು.

ಕಿಟ್ಟುವಿಗಂತೂ ಹೆಂಡತಿಯಾದ ಹುಡುಗಿ ತುಂಬ ಮೆಚ್ಚಿಕೆಯಾಗಿದ್ದಳು. ಶ್ರೀಕಂಠಯ್ಯನವರ ಮಗಳು ಲಲಿತೆಯಷ್ಟು ಈ ಹುಡುಗಿ ಸೌಂದರ್ಯವತಿಯಾಗಿರಲಿಲ್ಲವಾದರೂ ಅಸಹ್ಯಪಡುವಂತಹ ಕುರೂಪಿಯಾಗಿರಲಿಲ್ಲ. ಎಣ್ಣೆಗೆಂಪು ಮೈ ಬಣ್ಣ, ದುಂಡು ಮುಖ, ಉಬ್ಬಿದ ಕೆನ್ನೆ, ಅಗಲವಾದ ಕಣ್ಣುಗಳು, ಚಿಕ್ಕಮೂಗು, ಮೂಗಿಗೆ ಅರ್ಧ ಇಂಚು ದೂರದಲ್ಲಿರುವ ಚಿಕ್ಕಬಾಯಿ-ನರಸಿಂಹಯ್ಯ ಹೇಳಿದಂತೆ 'ದೊಡ್ಡ ಬಾಯಿ' ಮಾಡುವ ಚಿಕ್ಕ ಬಾಯಿ! -ಹುಡುಗಿಯನ್ನು ಲಕ್ಷಣವಂತೆಯೆಂದೇ ಹೇಳುತ್ತಿದ್ದವು. ಹದಿನೆಂಟು ವಯಸ್ಸಿನ ಹುಡುಗಿಯಂತೆ ದಪ್ಪ ದಪ್ಪವಾಗಿ ಬೆಳೆದಿದ್ದರೂ ಉದ್ದವಾಗಿ ಬೆಳೆದಿರಲಿಲ್ಲ! 'ಹುಡುಗಿ ಸ್ವಲ್ಪ ಕುಳ್ಳು' ಎಂದು ನರಸಿಂಹಯ್ಯನವರು ನಿಜವನ್ನೇ ಹೇಳಿದ್ದರು. ಅವಳು ಹೇಗಿದ್ದರೇನು-ಕಿಟ್ಟುವಿಗೆ ಮೆಚ್ಚಿಕೆಯಾಗಿದ್ದಳು!

ಅವಳು ಮೆಚ್ಚಿಕೆಯಾಗಿದ್ದರೂ ಅವಳ ಹೆಸರು ಮೆಚ್ಚಿಕೆಯಾಗಲಿಲ್ಲ ಕಿಟ್ಟುವಿಗೆ ! ಲಗ್ನಪತ್ರಿಕೆಯಲ್ಲಿ 'ಚಿ|| ಸೌ|| ನರಸು ಎಂಬ ಕನ್ಯಾರತ್ನವನ್ನು' ಎಂದು ಅಚ್ಚಾಗಿತ್ತು. ತಾಲ್ಲೂಕು ಕಚೇರಿಯಲ್ಲಿ ಸ್ನೇಹಿತರಿಗೂ, ಸಹೋದ್ಯೋಗಿಗಳಿಗೂ ಲಗ್ನಪತ್ರಿಕೆ ಕೊಟ್ಟಾಗ, ಅವರೆಲ್ಲಾ–

"ನೀನು ಮದುವೆಯಾಗುವುದು ಹುಡುಗಿಯನ್ನೋ ಮುದುಕಿಯನ್ನೋ?" ಎಂದು ಹಾಸ್ಯಮಾಡಿದ್ದರು.

"ನರಸು ಎಂದರೆ ಅದು ತುಂಬ ಹಳೆಯಕಾಲದ ಹೆಸರು. ಈಗಿನ ಕಾಲದ ಮುದುಕಿಯರಿಗೂ ಆ ಹೆಸರು ಇರುವುದು ಅಪುರೂಪ ! ಅದಕ್ಕೇ ನೀನು ಮದುವೆಯಾಗುವುದು ಹುಡುಗಿಯನ್ನೋ ಮುದುಕಿಯನ್ನೋ ಎಂದು ಕೇಳಿದ್ದು" ಎಂದು ಗೆಳೆಯರು ವಿವರಣೆಯಿತ್ತಾಗ,

'ಅದು 'ನರಸು' ಅಲ್ಲ. ಮುದ್ರಣ ದೋಷದಿಂದ ಹಾಗಾಗಿದೆ. ಅವಳ ಹೆಸರು 'ಸರಸು' ಅಂತ!"

ಎಂದು ಸುಳ್ಳು ಸಮಾಧಾನ ಹೇಳಿದ್ದ. 'ನರಸು' ಎನ್ನುವ ಹೆಸರು ಅವನಿಗೂ ಒಪ್ಪಿರಲಿಲ್ಲ. ಅಗ್ರಹಾರಕ್ಕೆ ಬಂದ ಮರುದಿನವೇ–

"ಅಮ್ಮ, ಅವಳ ಹೆಸರೇ ಚೆನ್ನಾಗಿಲ್ಲಮ್ಮ. ನರಸು ಅನ್ನೋದಿಕ್ಕೆ ಬದಲು ಸರಸು ಅಂತ ಇಡೋಣಮ್ಮ" ಎಂದು ಮಗುವಿನಂತೆ, ಮುಗ್ಧ ಮಾತಿನಲ್ಲಿ ತಾಯಿಯನ್ನು ಕೇಳಿದ್ದ.

"ಯಾವ ಹೆಸರಾದರೇನೋ ಕಿಟ್ಟು ? ಗುಣ ಮುಖ್ಯವಪ್ಪ ! ಈಗೇನು, ನಿನ್ನ ಇಷ್ಟದ ಹಾಗೆಯೇ 'ಸರಸು' ಅಂತಲೇ ಕರೆಯೋಣ"

ವೆಂಕಮ್ಮನ ಮಾತು ಕೇಳಿ ಕಿಟ್ಟು ಆನಂದದಿಂದ ಕುಣಿದಾಡಿದ. ಅವನ ಒಳದನಿ ಹತ್ತಾರುಬಾರಿ ಕೂಗಿಕೊಂಡಿತು–

"ಸರಸು.... ಸರಸು.... ಸರಸು....!"

ಸರಸು ಗೃಹಪ್ರವೇಶಮಾಡಿ, ಕಿಟ್ಟುವಿನ ಕಣ್ಮಣಿಯಾಗಿ ಕಳೆದ ರಾತ್ರಿ :

"ಇನ್ನುಮೇಲೆ ನೀನು 'ನರಸು' ಅಲ್ಲ ಕಣೆ, ಸರಸು–ಸರಸು ; ನಿನ್ನ ಹೆಸರು ಸರಸು!" ಎಂದು ಅವಳ ಕೆನ್ನೆಯನ್ನು ಹಿಡಿದು ಹೇಳಿದ್ದ ಕಿಟ್ಟು.

ಆಗ ಅವಳೇ ಅವನ ಕೆನ್ನೆಗೆ ಮುತ್ತುಕೊಟ್ಟಿದ್ದಳು.

ತಿಂಗಳನಂತರ ಅದೇ ಕೆನ್ನೆಗೆ ಪೆಟ್ಟುಕೊಟ್ಟಳು—ಸರಸು ವಾಗಿದ್ದ ನರಸು !

ಅದಕ್ಕಾದರೂ ದೊಡ್ಡ ಕಾರಣವೇನೂ ಇರಲಿಲ್ಲ !

ಆ ದಿನ ಮೊದಲನೇ ತಾರೀಕಾಗಿದ್ದರಿಂದ, ಕಿಟ್ಟುವಿಗೆ ಸಂಬಳ ಬರುತ್ತದೆಂದು ತಿಳಿದಿದ್ದ ನಾಗಪ್ಪನವರು ತಾಲ್ಲೂಕು ಕಚೇರಿಗೇ ಹೋಗಿ, ಅವನಿಂದ ಸಂಬಳ ಎಲ್ಲ ಹಣವನ್ನೂ-ಒಂದು ಕಾಸೂ ಬಿಡದೆ ತೆಗೆದುಕೊಂಡು, ತಮ್ಮ ಕ್ರಿಮಿನಲ್ ಕೇಸಿಗೆ ಹಾಜರಾಗಲು ಹಾಗೆಯೇ ಬೆಂಗಳೂರಿಗೆ ಬಸ್ಸು ಹತ್ತಿದರು. ಪೌಡರ್, ಸ್ನೋ, ಸೋಪು, ಕಸೂತಿ ದಾರ, ಹೂ ಮೊದಲಾದುವನ್ನು ತಂದುಕೊಡುತ್ತೇನೆಂದು ಹೆಂಡತಿಗೆ ಬಹಳ ದಿನಗಳಿಂದ ಆಸೆಯಿಟ್ಟು ಮಾತುಕೊಟ್ಟಿದ್ದ ಕಿಟ್ಟು ಬರಿಯ ಕೈಯ್ಯಲ್ಲೇ ಮನೆಗೆ ಬರಬೇಕಾಯಿತು. ನೀರಸನಾಗಿ ಬಂದ ಗಂಡನನ್ನು ಕಂಡು ಸರಸು ವಿರಸಗೊಂಡಳು.

"ನಾ ಹೇಳಿದ್ದೊಂದೂ ತರಲಿಲ್ಲವೋ ?"

ಕಿಟ್ಟು ಮಾತನಾಡಲಿಲ್ಲ.

"ನಿಮ್ಮನ್ನೇರಿ ! ಇಂಥ ಸಮಯದಲ್ಲಿ ಗಂಡಸರು ಕಿವುಡರಾಗೋದೇನೂ ಹೆಚ್ಚಲ್ಲ !!"

"ಅಲ್ಲ ಸರಸು, ಅಣ್ಣನಿಗೆ ಅರ್ಜಂಟಾಗಿ ದುಡ್ಡು ಬೇಕಾಗಿತ್ತಂತೆ. ಅದಕ್ಕೇ ಕಚೇರಿಗೇ ಬಂದು ತೆಗೆದುಕೊಂಡು ಹೊರಟುಹೋದರು."

"ನಿಮ್ಮ ಖರ್ಚಿಗೇಂತ ಒಂದು ಐದು ರೂಪಾಯಿ ಇಟ್ಟುಕೊಳ್ಳೋದಿಕ್ಕೆ ಆಗಲಿಲ್ಲವೇನೋ ನಿಮಗೆ ?"

ಕಿಟ್ಟುವಿಗೆ ಉತ್ತರ ಹೇಳಲು ತೋಚಲಿಲ್ಲ.

"ಎಂಥ ಗಂಡಸರ್ರೀ ನೀವು ? ಹೆಂಡತಿ ಕೇಳಿದ್ದು ತಂದು ಕೊಡೋದಿಕ್ಕಾಗದೆ ಇದ್ದ ಗಂಡಸು !"

ಎನ್ನುತ್ತಾ ಸರಸು ಕಿಟ್ಟುವಿನ ಮುಖಕ್ಕೆ ತಿವಿಯುವ ಭರದಲ್ಲಿ ಅವನ ಕೆನ್ನೆಗೇ ಪೆಟ್ಟುಕೊಟ್ಟಳು ! ಆ ಪ್ರಸಂಗವನ್ನು ಆಕಸ್ಮಿಕವಾಗಿ ನೋಡಿಬಿಟ್ಟಳು ವೆಂಕಮ್ಮ.

"ಏನಮ್ಮ ಸರಸು, ಗಂಡನನ್ನ ದಂಡಿಸುತ್ತಿದ್ದೀಯಾ ?"

ವೆಂಕಮ್ಮ ನಗುತ್ತಲೇ ಕೇಳಿದರೂ ಸರಸುವಿನ ಸಿಟ್ಟು ಕೆಟ್ಟದಾರಿಯಲ್ಲಿ ಕೆರಳಿತು–

"ದಂಡಿಸೂ ದಂಡಿಸುತ್ತೇನೆ; ದಂಡ ಸೇವೆಯೂ ಮಾಡುತ್ತೇನೆ! ನೀವು ಯಾರು ಅದನ್ನು ಕೇಳೋಕೆ ?"

ಸರಸುವೇ ಹಾಗಂದಳೋ ಅಥವಾ ಬೇರೆ ಯಾರಾದರೂ ಆ ಮಾತನ್ನು ಹೇಳಿದರೋ ಎಂದು ಸಂಶಯುಪಡುವಂತಾಯಿತು ವೆಂಕಮ್ಮನಿಗೆ

"ಇದೇನು ಮಾತು ಆಡ್ತಾ ಇದ್ದೀಯಾ ಸರಸು ?"

"ಇರೋ ಮಾತು ಆಡ್ತಾ ಇದ್ದೀನಿ. ನನ್ನ ಗಂಡನನ್ನ ಬೇಕಾದ್ದು ಮಾಡೋ ಹಕ್ಕು ನನಗಿದೆ. ನೀವು ಯಾರು ಅದನ್ನೆಲ್ಲಾ ಕೇಳೋದಿಕ್ಕೆ?"

ಎರಡನೆ ಬಾರಿಯೂ ಆ ಮಾತು ಆಡಿದ್ದಳು ಸರಸು—'ನೀವು ಯಾರು ಅದನ್ನ ಕೇಳೋಕೆ ?'

ಅವಳ ಗಂಡನನ್ನು ಹೆತ್ತು, ಹೊತ್ತು, ಸಾಕಿ, ಸಲಹಿ, ಇಪ್ಪತ್ನಾಲ್ಕು ವರ್ಷ ಬೆಳಸಿದವಳನ್ನೇ 'ನೀವು ಯಾರು ?' ಎಂದು ಕೇಳಿಬಿಟ್ಟಳಲ್ಲಾ, 'ನಿನ್ನೆ–ಮೊನ್ನೆ' ಬಂದ ಈ ಹುಡುಗಿ—ಎಂದು ವೆಂಕಮ್ಮನಿಗೆ ವ್ಯಥೆಯಾಯಿತು. ಬೇಕಾದ್ದು ಮಾಡುವ ಹಕ್ಕು ಅವಳಿಗಿದ್ದರೆ, ಬೇಕಾದ್ದು ಕೇಳಿ–ಹೇಳುವ ಹಕ್ಕು ತನಗೂ ಇಲ್ಲವೆ ? ಒಟ್ಟಿನಲ್ಲಿ ಹುಡುಗಿ, ತಾಯಿಯುಹಾಗೆ ಗುಣವಂತೆಯಲ್ಲ. ನರಸಿಂಹಯ್ಯನವರು ಹೇಳಿದಂತೆ ಬಾಯಿ ದೊಡ್ಡದೇ ! ಅದನ್ನು ಚಿಕ್ಕದು ಮಾಡುವ ಕಾಲ ಮೀರಿ ಹೋಗಿದೆ ಎಂದುಕೊಂಡಳು ವೆಂಕಮ್ಮ.

"ಕೈಹಿಡಿದ ಗಂಡನನ್ನು ಹಾಗೆಲ್ಲ ದಂಡಿಸಬಾರದು."

ಎಂದು ಹೇಳಬೇಕೆಂದು ಬಾಯಿ ತೆರೆದಿದ್ದಳು. ಅಷ್ಟರಲ್ಲಿ 'ಇದೇನೋ ಕೆಟ್ಟ ಘಳಿಗೆ, ಸ್ವಲ್ಪ ಹೊತ್ತಿನಮೇಲೆ ಸರಿಹೋಗುತ್ತಾಳೆ' ಎಂದುಕೊಂಡು ಸುಮ್ಮನಾದಳು.

ಅಂದಿನಿಂದ ಸೊಸೆ–ಅತ್ತೆಯರಲ್ಲಿ ಮಾತು ಕಡಿಮೆಯಾಗತೊಡಗಿತು. ವೆಂಕಮ್ಮನೇನೋ ಹಿಂದಿನ ಪ್ರೀತಿಯಿಂದಲೇ ಸರಸುವನ್ನು ಮಾತನಾಡಿಸುತ್ತಿದ್ದಳು. ಆದರೆ ಸರಸುವೇ ಸದಾ ಸಿಡುಕು ಮೋರೆ ಮಾಡಿಕೊಂಡು ಸಿಡಿಮಿಡಿಗುಟ್ಟುತ್ತಿದ್ದಳು. ಕಿಟ್ಟುವೂ ಮೌನ

ವ್ರತ ಆರಂಭಿಸಬೇಕಾಯಿತು.

ಒಂದು ದಿನ ರಾತ್ರಿ ಕಿಟ್ಟು, ನಾಣಿ, ಶಾಮು ಮೂವರೂ ಊಟಕ್ಕೆ ಕುಳಿತಿದ್ದರು. ವೆಂಕಮ್ಮ ಶಾಮುವನ್ನು ಮುಂದಕ್ಕೆ ಓದಿಸುವ ವಿಚಾರವಾಗಿ ಮಾತಾಡುತ್ತಾ ಬಡಿಸತೊಡಗಿದಳು.

"ನನಗೇನೋ ಶಾಮು ಓದಬೇಕೂಂತ ಆಸೆ. ಅವನಿಗೆ ವಿದ್ಯೆ ಚೆನ್ನಾಗಿ ಹತ್ತುತ್ತೆ ಅಮ್ಮ"–ಎಂದು ನಾಣಿ ಹೇಳಿದ.

"ಅವರಣ್ಣ ಏನು ಹೇಳುತ್ತಾರೊ?" – ಎಂದು ವೆಂಕಮ್ಮ ಅನುಮಾನಿಸುತ್ತಾ ನುಡಿದಳು.

"ಅವರೇನನ್ನುತ್ತಾರಮ್ಮ?"

"ಓದುವುದು ಅಂದರೆ ಸುಮ್ಮನೆ ಆಯ್ತೇನೊ ನಾಣಿ? ಬೆಂಗಳೂರಿನಲ್ಲಿ ಊಟಕ್ಕೇನು ಮಾಡುತ್ತಾನೆ? ಫೀಸಿಗೆ ಏನು ಮಾಡುತ್ತಾನೆ? ಅದಕ್ಕೆಲ್ಲಾ ದುಡ್ಡು ಯಾರು ಕೊಡುತ್ತಾರೆ?"

"ಯಾರು ಕೊಡುತ್ತಾರೆ ಅಂದರೆ, ನಾವೇ ಕೊಡಬೇಕಮ್ಮ."

"ನಿಮ್ಮಿಬ್ಬರ ಸಂಪಾದನೆ–ನಿಮ್ಮ ತಂದೆ ಪೆನ್ಷನ್ನು ಎಲ್ಲಾ ಮನೇ ಖರ್ಚಿಗೇ ಸಾಲೋಲ್ಲ. ಈ ಮಧ್ಯೆ ಕೋರ್ಟಿಗೆ ತೆರಬೇಕು. ಇನ್ನು ಅವನ ಓದಿಗೆ ಎಲ್ಲಿ ತರೋದಪ್ಪ?"

"ಹೇಗಾದರೂ ಮಾಡಬಹುದಮ್ಮ ಕಿಟ್ಟಣ್ಣನ ಸಂಬಳದಲ್ಲಿ ಸ್ವಲ್ಪ, ನನ್ನ ಸಂಬಳದಲ್ಲಿ ಸ್ವಲ್ಪ ಮಿಗಿಸಿದರೆ ಅವನ ಓದು ಸಾಗುತ್ತದೆ. ಅವನು ಒಳ್ಳೆ ಬುದ್ಧಿವಂತನಮ್ಮ. ಅವನು ಓದಿದರೆ ನಮ್ಮ ಮನೆಗೇ ದೊಡ್ಡ ಹೆಸರು."

"ಆಗಲಪ್ಪ, ನಿಮ್ಮ ತಂದೆ ಏನನ್ನುತ್ತಾರೋ ನೋಡೋಣ."

"ಅಣ್ಣನಿಗೇನೋ ಶಾಮುವನ್ನು ಮುಂದಕ್ಕೆ ಓದಿಸುವುದಕ್ಕೆ ಇಷ್ಟವಿಲ್ಲಮ್ಮ. ಎಸ್. ಎಸ್. ಎಲ್. ಸೀನೇ ಸಾಕು. ಎಲ್ಲಾದರೂ ಕೆಲಸ ಹುಡುಕಿ, ಅವನ ಜೀವನ ಅವನು ಸಂಪಾದಿಸಿಕೊಳ್ಳಲಿ ಅಂತಾರೆ"

"ನೀವಿಬ್ಬರೂ ಅಣ್ಣ – ತಮ್ಮಂದಿರು ಒಪ್ಪಿಕೊಂಡು ಅವನಿಗೆ ದುಡ್ಡು ಒದಗಿಸಿದರೆ ತಾನೆ ಅವನ ಓದು ಸಾಗಬೇಕು."

"ನಾನೇನೋ ಕೈಲಾದಷ್ಟು ಕೊಡುತ್ತೇನಮ್ಮ. ಕಿಟ್ಟಣ್ಣನೂ

ಕೊಟ್ಟರೆ ಖಂಡಿತ ಆಗುತ್ತದೆ"

ನಾಣಿ ಮಾತು ಮುಗಿಸಿ ಕೈ ತೊಳೆಯಲು ಹೊರಟ. ಕಿಟ್ಟು, ಶಾಮು ಅವನನ್ನು ಹಿಂಬಾಲಿಸಿದರು.

"ಸರಸೂ, ಗೋಮಯ ಹಚ್ಚಿ, ನೀನೂ ಸುಮಿತ್ರೆ ಊಟಕ್ಕೆ ಕುಳಿತುಕೊಳ್ಳಿ."

ವೆಂಕಮ್ಮನ ಮಾತಿಗೆ ಉತ್ತರವೆಂಬಂತೆ ಸಿಡಿಮಿಡಿಗೊಂಡ ಸರಸು ಸಗಣಿಯನ್ನು ತೆಗೆದುಕೊಂಡು ಬಂದು, ಆ ಮೂವರ ಎಂಜಲಿನ ಮೇಲಿಯೂ ಎಸೆದಳು. ಲೋಟದಲ್ಲಿದ್ದ ನೀರನ್ನೆಲ್ಲಾ ಸಗಣಿಯ ಮೇಲೆ ಚೆಲ್ಲಿ, ರಣಾರನೆ ಲೋಟವನ್ನು ಕೆಳಗೆ ಬಡಿದಳು. ಆ ಶಬ್ದಕ್ಕೆ ಹಿಂತಿರುಗಿ ನೋಡಿದಳು ವೆಂಕಮ್ಮ. ಸರಸು ಸೀರೆಯನ್ನು ಮುದುರಿ ಕೊಂಡು, ಅಡಿಗೆ ಮನೆಯನ್ನೇ ಸಾರಿಸುವುದಕ್ಕೆ ತೊಡಗಿದಂತೆ, ಸಗಣಿ ಯನ್ನು ಕಲಸಿ ಹರಡಿದಳು.

"ಯಾಕಮ್ಮಾ ಅಷ್ಟಗಲ ಹಚ್ಚುತ್ತಿದ್ದೀ? ಚಿಕ್ಕದಾಗಿ ಹಚ್ಚು..."

"ನಂಗೆ ಬರೋದು ಹೀಗೇನೇ. ಬೇಡದಿದ್ದರೆ ನೀವೇ ಹಚ್ಚಿ ಕೊಳ್ಳಿ."

"ಯಾಕೆ ಸಿಟ್ಟುಮಾಡಿಕೊಳ್ತೀ ಸರಸು ? ನಾನು ನಿನ್ನ ಏನಂದೆನೆ?"

"ಅನ್ನೋದು ಅಂತಾನೆ ಇರೋದು. ಮುಖ್ಯ ನನ್ನ ಹೀನ ಅದೃಷ್ಟ. ನಮ್ಮ ಮನೆ ಅನ್ನತಿಂದು ಬೆಳೆದು, ಕಂಡೋರ ಮನೆ ಯವರ ಕೈಯ್ಯಲ್ಲಿ ಬೈಯ್ಯಿಸಿಕೊಳ್ಳೋದು."

"ಇದು ಯಾರಮನೆ ಅಂತ ತಿಳಕೊಂಡಿದ್ದೀಯೇ ಹುಡುಗಿ ? ಇದೂ ನಿನ್ನ ಮನೇನೆ ಕಣೆ."

"ನನ್ನ ಮನೇನೆ ಆಗಿದ್ದರೆ, ಇನ್ನೊಬ್ಬರ ಕೈಯಲ್ಲಿ ಯಾಕೆ ಅನ್ನಿಸಿಕೋ ಬೇಕಾಗಿತ್ತು ?"

"ಇಷ್ಟಕ್ಕೂ ನಿನ್ನ ಏನಂದೆನೇ ಅಮ್ಮ?"

"ಏನಾದ್ರೂ ಅಂದುಕೊಳ್ಳಿ...."

ಎನ್ನುತ್ತಾ ಸರಸರನೆ ಹೊರಗೆ ಹೊರಟು ಹೋದಳು.

"ನನಗೇನು ಬಂತೋ ಹೊತ್ತು ? ಆ ಅರೀದ ಹುಡುಗೀ ಮುಂದೆ

ಇಷ್ಟೊಂದು ಮಾತಾಡಿಬಿಟ್ಟೆ."

ಎಂದು ತಮ್ಮಷ್ಟಕ್ಕೆ ತಾವೇ ಅಂದುಕೊಂಡು, ಕ್ಷಣಕಾಲ ನೊಂದುಕೊಂಡರು. ಅವರ ದೃಷ್ಟಿ ಸರಸು ಹಚ್ಚಿದ ಗೋಮಯದ ಕಡೆಗೆ ಹರಿದಾಗ, ಇನ್ನೂ ಅನ್ನದ ಅಗಳುಗಳು ಹಾಗೆಯೇ ಉಳಿದು ಹೋದುದು ಕಾಣಿಸಿತು.

"ಲೇ ಸುಮಿತ್ರಾ, ಏನೇ ಮಾಡ್ತಾ ಇದ್ದೀಯಾ ? ಬಾರೇ ಇಲ್ಲಿ."

ಎಂದು ತುಸು ಸಿಟ್ಟಿನಿಂದಲೇ ಕೂಗಿದಳು ವೆಂಕಮ್ಮ.

"ಯಾಕಮ್ಮಾ ?"

"ಸ್ವಲ್ಪ ಸಗಣಿ ತಗೊಂಡು ಬಂದು ಆ ಎಂಜಲು ಅಗುಳು ಒತ್ತಿ ಹಾಕು."

ತಾಯಿಯ ಆಜ್ಞೆ ನೆರವೇರಿಸಿದಳು ಸುಮಿತ್ರೆ.

"ನೀನೂ ನಿಮ್ಮತ್ತಿಗೇನೂ ಊಟಕ್ಕೆ ಬನ್ನಿ."

ಸುಮಿತ್ರೆ ಅತ್ತಿಗೆಯನ್ನು ಕರೆಯುವುದಕ್ಕೆ ಹೋದಳು. ಸರಸು ಆಗಲೇ ಹೊರಗಿನ ಕೋಣೆಯಲ್ಲಿ ಸೇರಿಕೊಂಡು ಒಳಗಿನಿಂದ ಬಾಗಿಲು ಚಿಲಕ ಹಾಕಿಕೊಂಡಿದ್ದಳು.

"ಅತ್ತಿಗೇ....ಅತ್ತಿಗೇ...."

ನಾಲ್ಕಾರು ಬಾರಿ ಕೂಗಿದಳು ಸುಮಿತ್ರೆ. ಉತ್ತರವನ್ನೂ ಕೊಡದೆ, ಬಾಗಿಲನ್ನೂ ತೆರೆಯದೆ ಸುಮ್ಮನಿದ್ದಳು ಸರಸು. ನಿರಾಶೆ ಯಿಂದ ಸುಮಿತ್ರೆ ಅಡಿಗೆ ಮನೆಗೆ ಹಿಂತಿರುಗಿ ತಾಯಿಗೆ ತಿಳಿಸಿದಳು.

"ಹುಡುಗಿ ಸಿಟ್ಟು ಮಾಡಿಕೊಂಡಳೇನೋ ?"

ಎಂದು ಮೆಲ್ಲನೆಯಲ್ಲಿ ವೆಂಕಮ್ಮ ಹೇಳಿದುದು ಸುಮಿತ್ರೆಗೂ ಕೇಳಿಸಿತು.

"ಯಾವಾಗಲೂ ಸಿಟ್ಟೇ ಅತ್ತಿಗೇಗೆ, ನಗುನಗುತ್ತಾ ಇದ್ದಿದ್ದು ಯಾವಾಗಮ್ಮ ?"

"ಅತ್ತೆ ಮನೇಗೆ ಹೋದಕಾಲಕ್ಕೆ ನೀನೂ ಹಾಗೇ ಮಾಡ್ತೀಯೆ ಕಣೆ. ಅತ್ತೆ ಮಾತಾಡಿದರೆ ಸೊಸೇಗೆ ಮೂಗಿನಮೇಲೇ ಕೋಪ !"

ಸಣ್ಣಗೆ ನಗುತ್ತಾ ಆಡಿದ ತಾಯಿಯ ಮಾತು ಸುಮಿತ್ರೆಯನ್ನೂ ನಾಚಿಕೆಯಿಂದ ನಗಿಸಿತು.

"ಹೋಗ್ಲಿ, ನನಗಾದರೂ ಹಾಕೆ ಅಮ್ಮ. ಹೊಟ್ಟೆ ತುಂಬ ಹಸಿಯುತ್ತೆ."

"ತುಂಬ ಹಸಿದರೆ ತುಂಬ ಊಟಮಾಡು"

ಎನ್ನುತ್ತಾ ವೆಂಕಮ್ಮ ಬಡಿಸ ತೊಡಗಿದರು.

"ಅಮ್ಮಾ, ಅಣ್ಣ ಹೋಗಿ ಎರಡು ದಿನ ಆಯ್ತು. ಇನ್ನೂ ಬರ ಲಿಲ್ಲವಲ್ಲಾ ?"

"ಏನು ಕೆಲಸವ್ರೋ ಏನೋ ನಾಳೆ ಬರಬಹುದು "

ಎನ್ನುತ್ತಾ ವೆಂಕಮ್ಮ ಹೊರಗಿನ ಕೋಣೆಯ ಕಡೆಗೆ ಹೊರಟರು. ಬಾಗಿಲ ಬಳಿ ನಿಂತು ಎರಡು ಬಾರಿ ಸರಸುವನ್ನು ಕರೆದಳು.

"ಊಟ ಮಾಡು ಬಾ "

"ನನಗೆ ಹಸಿವೆ ಇಲ್ಲ" ಎಂದು ಉತ್ತರಿಸಿ, ವೆಂಕಮ್ಮನ ಮುಖಕ್ಕೆ ರಾಚುವಂತೆ ಬಾಗಿಲು ಹಾಕಿಕೊಂಡು ಬಿಟ್ಟಳು.

"ಇದ್ಯಾಕೇಮ್ಮ. ಹೀಗೆ ಮಾಡ್ತಿ?"

ಹೊರಗಡೆಯೇ ನಿಂತು ಕೇಳಿದ ವೆಂಕಮ್ಮನ ಧ್ವನಿ ಮರುಕ ಹುಟ್ಟಿಸುವಂತಿತ್ತು.

"ನೀನು ಊಟಮಾಡದೆ ಇದ್ದರೆ ನನಗೂ ಸೇರೋಲ್ಲ. ಬಾಮ್ಮ, ಹಟಮಾಡಬೇಡ "

ಉತ್ತರವಿಲ್ಲ.

"ನನ್ನದು ತಪ್ಪು ಕಣೆ ಸರಸು. ಒಪ್ಪಿಕೊಂಡುಬಿಟ್ಟಿದ್ದೀನಿ. ಇನ್ನುಮೇಲೆ ಹಾಗೆಲ್ಲ ಮಾತಾಡೋಲ್ಲ. ಬಾಗಿಲು ತೆಗೆಯಮ್ಮ."

ಜೀವವಿದ್ದವರಿಗೇ ಕರುಣೆಯಿಲ್ಲದಿರುವಾಗ, ಜೀವವಿಲ್ಲದ ಮರದ ಬಾಗಿಲಿಗೆ ಕರುಣೆಯಿರುತ್ತದೆಯೆ ? ಅದು ತೆರೆದುಕೊಳ್ಳಲಿಲ್ಲ !

"ಲೋ ಕಿಟ್ಟು, ನಿನ್ನ ಹೆಂಡ್ತೀನ ಸಮಾಧಾನಮಾಡಿ ಊಟಕ್ಕೆ ಕಳಿಸೋ"

ಕಿಟ್ಟುವೂ ಒಳಗಡೆಯೇ ಇದ್ದ. ಆದರೆ ಸರಸು ಅವನನ್ನು ಬಾಗಿಲು ತೆರೆಯಲು ಬಿಡಲಿಲ್ಲ. ತಾಯಿಗೆ ಉತ್ತರಿಸಲು ಬಾಯಿ ತೆರೆದಾಗ ಕೈ ಅಡ್ಡಯಿಟ್ಟಳು ಸರಸು.

"ಇಬ್ಬರೂ ಸೇರಿಕೊಂಡು ನನ್ನ ಉಪವಾಸ ಕೆಡುವಬೇಕೂಂತ

ಮಾಡಿದ್ದೀರೇನ್ರೋ?"

"ಉಪವಾಸವಾದರೂ ಮಾಡಿಕೊಳ್ಳಿ-ವನವಾಸವಾದರೂ ಮಾಡಿಕೊಳ್ಳಿ"—ಎಂದು ಮೆಲ್ಲನೆ ಒಳಗೆ ಕುಳಿತಿದ್ದ ಸರಸು ಹೇಳಿದುದು ವೆಂಕಮ್ಮನ ಕಿವಿಗೂ ಬಿದ್ದಿತು. ಆಕೆಗೆ ಅಳುವುದೊಂದು ಮಾತ್ರ ಉಳಿದಿತ್ತು. ಅದಕ್ಕೂ ಸಿದ್ಧತೆಯೆಂಬಂತೆ ಕಣ್ಣು ತುಂಬ ನೀರು ತುಂಬಿಕೊಂಡು ಹೊರಗೆ ಬರಲು ಕಾದಿತ್ತು. ಅಷ್ಟರಲ್ಲಿ-

"ಅಮ್ಮಾ, ಮಜ್ಜಿಗೆ ಹಾಕು ಬಾರೇ........" ಎಂದು ರಾಗವಾಗಿ ಸುಮಿತ್ರೆ ಕರೆದುದರಿಂದ ವೆಂಕಮ್ಮ ಅಡಿಗೆ ಮನೆಗೆ ಬಂದಳು.

"ಇದೇನಮ್ಮ, ಇಷ್ಟು ನೀರಾಗಿದೆ ಮಜ್ಜಿಗೆ ? ಕಣ್ಣೀರಿದ್ದ ಹಾಗಿದೆಯಲ್ಲೆ........!"

ತಾಯಿಯ ಮುಖವನ್ನು ನಿಟ್ಟಿಸಿದಳು ಸುಮಿತ್ರೆ. ನಿಜವಾಗಿಯೂ ಅಲ್ಲಿ ಕಣ್ಣೀರೇ ಇತ್ತು.

"ಯಾಕಮ್ಮ ಅಳ್ತಾ ಇದ್ದೀಯಾ?"

"ನಾನ್ಯಾಕೆ ಅಳಲೇ ತಾಯಿ. ಕಣ್ಣಿಗೇನೋ ಕಸ ಬಿತ್ತು ಅಷ್ಟೆ."

ಎಂದು ಸುಮ್ಮನಾದಳು ವೆಂಕಮ್ಮ. ಸರಸುವಿನ ಪ್ರಸಂಗವನ್ನು 'ಕಣ್ಣಿಗೆ ಕಸಬಿದ್ದಷ್ಟೇ' ಹಗುರವಾಗಿ ಭಾವಿಸಿದ್ದಳು ಆಕೆ.

ಆದರೆ ಆ ರಾತ್ರಿ ಸರಸು ಉಪವಾಸಮಾಡಿ, ಕಿಟ್ಟುವಿನ ಕಿವಿ ಊದಿ, ಮೋರೆ ತಿವಿದು, ಕಣ್ಣೀರು ಕರೆದು, ತೌರಿಗೆ ಹೊರಟು ಹೋಗುವುದಾಗಿ ಬೆದರಿಸಿ, ಒಂದು ತೊಟ್ಟು ನೀರು ಕೂಡ ಬಾಯಿಗೆ ಹಾಕಿಕೊಳ್ಳುವುದಿಲ್ಲವೆಂದು ಹೆದರಿಸಿ, ಮರುದಿನ ಬೆಳಗಾಗುವ ವೇಳೆಗೆ, ಚೊಕ್ಕಟವಾಗಿದ್ದ ಮನೆಯ ತುಂಬ ಕಸವನ್ನೇ ತುಂಬಿದ್ದಳು !

ಕಿಟ್ಟು ಮುಖತೊಳೆದುಕೊಂಡು ಅಡಿಗೆ ಮನೆಯ ಕಡೆಗೆ ಹೆಜ್ಜೆ ಇಡುವಷ್ಟರಲ್ಲಿ – "ಕಾಫೀಗೆ ಕಾಯ್ಕೊಂಡು ಬಾಲ ಅಲ್ಲಾಡಿಸ್ತಾ ನಿಂತ್ಕೋಬೇಡಿ. ಬನ್ನಿ ಇಲ್ಲಿ"

ಎಂದಳು ಸರಸು ಹಿಂದಿನ ರಾತ್ರಿಯೇ ಅವಳು ಒಂದೆರಡು ಸಾರಿ ಚೆನ್ನಾಗಿ ನೋವಾಗುವಂತೆ ತನ್ನ ಕೆನ್ನೆ ಹಿಂಡಿದ್ದುದು ನೆನಪಾಯಿತು ಕಿಟ್ಟುವಿಗೆ. ಬಾಯಾಳಿಯಲ್ಲದ ಅವನನ್ನು ಸಂಪೂರ್ಣವಾಗಿ ಅಡಗಿಸಿ ಬಿಟ್ಟಿದ್ದಳು ಸರಸು.

ಸುಮಿತ್ರೆ ಸುಡುತ್ತಿದ್ದ ಕಾಫಿಯ ಬಟ್ಟಲನ್ನು ತನ್ನ ಫ್ರಾಕಿನ ಅಂಚಿನಲ್ಲಿ ಹಿಡಿದುಕೊಂಡು ಕಿಟ್ಟುವಿಗೆ ಕೊಡಲು ಹೊರ ಕೋಣೆಯ ಬಳಿಗೆ ಬಂದಳು. ಅಲ್ಲಿಯೇ ನಿಂತಿದ್ದ ಸರಸುವನ್ನು ನೋಡಿ—

"ಅತ್ತಿಗೆ ಕಾಫಿ ಬೇಡವಾ ನಿಂಗೆ?"

ಎಂದು ನಗುತ್ತಾ ಕೇಳಿದಳು.

"ಯಾರಿಗೆ ಬೇಕೇ ನಿಮ್ಮ ಕಲಗಚ್ಚು ಕಾಫಿ?"

"ಹಾಗಾದರೆ, ನಿನ್ನ ಪಾಲೂ ನಂಗೇ ಸಿಕ್ತು ಬಿಡು!"

ನಗುನಗುತ್ತಾ ಸುಮಿತ್ರೆ ಕೋಣೆಯೊಳಗೆ ಹೆಜ್ಜೆಯಿಟ್ಟಳು.

"ಯಾಕೆ, ಇಲ್ಲಿಗೂ ಬರ್‍ತಾ ಇದ್ದೀಯಾ?"

"ಕಿಟ್ಟಣ್ಣನಿಗೆ ಕಾಫಿ....... ?"

ಅವಳು ಮಾತು ಮುಗಿಸಿರಲಿಲ್ಲ. ಅಷ್ಟರಲ್ಲಿ—

"ಅವರಿಗೂ ಬೇಡ ಆ ಕಾರ್ಕೋಟಕ ವಿಷ. ನೀವೇ ಹೀರಿ ಕೊಂಡು ನೆಗೆದು ಬಿದ್ದು ಹೋಗಿ...."

ಎನ್ನುತ್ತಾ ಸುಮಿತ್ರೆಯನ್ನು ಕೋಣೆಯಿಂದ ಹೊರಗೆ ನೂಕಿ ಬಿಟ್ಟಳು ಸರಸು. ಆ ರಭಸಕ್ಕೆ, ಬಿಸಿತಾಳಲಾರದೆ ಮೆಲ್ಲನೆ ಹೆಜ್ಜೆ ಯಿಡುತ್ತಿದ್ದ ಸುಮಿತ್ರೆ ಮುಗ್ಗರಿಸಿ ಬಿದ್ದು, ಕೈ ಮೈ ಮೇಲೆಲ್ಲಾ ಬಿಸಿ ಕಾಫಿಯನ್ನು ಚೆಲ್ಲಿಕೊಂಡು- -

"ಅಮ್ಮಾ—" ಎಂದು ಗಟ್ಟಿಯಾಗಿ ಕೂಗಿಕೊಂಡಳು.

ವೆಂಕಮ್ಮನ ಹೃದಯವನ್ನೇ ಇರಿದಂತಾಯಿತು ಆ ನೋವಿನ ಕೂಗು. ಆಕೆ ಹೊರಗೆ ಓಡಿಬಂದಳು; ಮಗಳ ಸ್ಥಿತಿಯನ್ನು ಕಂಡು—

"ಮೆಲ್ಲಗೆ ಹೋಗು ಅಂದೆನಲ್ಲ, ಕೇಳಿದೆಯೇನೆ?"

"ಅಲ್ಲಮ್ಮ, ಅತ್ತಿಗೆ ಬೈದು ನೂಕಿ ಬಿಟ್ಟಳು."

ವೆಂಕಮ್ಮ ಸರಸುವಿನ ಕಡೆಗೆ ನೋಡಿದಳು. ಹಾಗೆಯೇ ಕಿಟ್ಟುವಿನ ಕಡೆಗೂ ಕಣ್ಣು ಹರಿಯಿತು.

"ನೋಡಿಕೊಂಡೇ ಇದ್ದೆಯೇನೊ ಕಿಟ್ಟು? ನೀನಾದರೂ ಅವಳ ಕೈಯ್ಯಿಂದ ಬಿಸಿಲೋಟ ತೊಗೊಳ್ಳೊದಿಕಿಲ್ವೆ?"

ಆ ಮಾತಿಗೆ ಕಿಟ್ಟು ಉತ್ತರಿಸಲಿಲ್ಲ. ಸರಸುವೇ ವಿರಸವಾಗಿ ಮಾತಿಗೆ ತೊಡಗಿದಳು—

"ನೋಡಿಕೊಂಡಿರದೆ ಕುಣುಕೊಂಡಿರಬೇಕಾಗಿತ್ತೇನು ? ಇಲ್ಲಿ ಯಾರು ಕಾಯ್ಕೊಂಡಿದ್ದಾರೆ ಆ ಕಲಗಚ್ಚು ಕಾಫಿ ಕುಡಿಯೋಕೆ ?"

"ಇದೇನೇ ಸರಸು, ಹೀಗಾಗಿ ಬಿಟ್ಟೆ ನೀನು ?"

"ನಾನು ಹ್ಯಾಗಾದರೆ ನಿಮಗೇನು ? ಇನ್ನು ಮೇಲೆ ನಮ್ಮ ಪಾಡು ನಮಗೆ–ನಿಮ್ಮ ಪಾಡು ನಿಮಗೆ !"

ಎನ್ನುತ್ತಾ ಸರಸು ಬಿರುಬಿರನೆ ಅಡಿಗೆ ಕೋಣೆಗೆ ನಡೆದಳು. ಕೆಳಗೆ ಬಿದ್ದ ಸುಮಿತ್ರೆಯನ್ನು ಸಹ ಗಮನಿಸದೆ, ಭಾರವಾದ ಹೆಜ್ಜೆ ಇಡುತ್ತಾ ಸರಸುವನ್ನು ಹಿಂಬಾಲಿಸಿದಳು ವೆಂಕಮ್ಮ.

ಅಡಿಗೆ ಮನೆಗೆ ಬಂದ ಸರಸು, ಮೂಲೆಯಲ್ಲಿಟ್ಟಿದ್ದ ಕಬ್ಬಿಣ ದೋಲೆಯನ್ನು ಕೈಗೆ ತೆಗೆದುಕೊಂಡಳು. ಅದರೊಡನೆ ಒಂದೆರಡು ಪಾತ್ರೆಗಳನ್ನೂ ಸಂಗ್ರಹಿಸಿಕೊಂಡು, ತನ್ನ ಹೊರಗಿನ ಕೋಣೆಯ ಕಡೆಗೆ ನಡೆದಳು. ವೆಂಕಮ್ಮ ಅಂಗಳದ ಬಾಗಿಲಿನಲ್ಲೇ ಅಡ್ಡವಾಗಿ ನಿಂತು ತಡೆದಳು.

"ನಾನಿನ್ನೂ ಸತ್ತಿಲ್ಲ ಕಣೆ ಸರಸು–ಬದುಕಿದ್ದೀನಿ."

"ನೀವು ಸತ್ತರೆಷ್ಟು ಬದುಕಿದರೆಷ್ಟು ? ನನಗೇನಾಗಬೇಕು ಅದನ್ನ ಕಟ್ಟಿಕೊಂಡು ?"

"ಸದ್ಯ ನಿನಗೇನೂ ಆಗಬೇಕಾಗಿಲ್ಲಮ್ಮ–ನನ್ನ ಮಗನಿಗೆ ಆಗ ಬೇಕು. ಅವನು ತಾನೆ ನನಗೆ ಜೆಂಕಿ ಹಚ್ಚೋನು ?"

"ಅವರಿಲ್ದೆ ಇದ್ರೆ, ಇನ್ನೂ ನಾಲ್ಕು ಜನ ಇದ್ದಾರಲ್ಲ ಕುಲುಪುತ್ರರು. ಯಾರಾದ್ರೂ ಹಚ್ತಾರೆ."

ಸಹಿಸಲಾಗದೆ ವೆಂಕಮ್ಮ ಕೂಗಿಕೊಂಡಳು–

"ಕಿಟ್ಟೂ....ಕಿಟ್ಟೂ...."

"ಕಿಟ್ಟನಂತೆ ಕಿಟ್ಟು ! ಕೊಟ್ಬಿಟ್ಟಿದ್ದಾರೆ ಕಿಟ್ಟು ಬರೋದಿಕ್ಕೆ. ಸಾವಿರದಿನ್ನೂರು ಕೊಟ್ಟು ನಮ್ಮ ತಂದೆ ಎಂದೋ ಕೊಂಡುಕೊಂಡು ಬಿಟ್ರು–ನನ್ನ ಕುತ್ತಿಗೇಗೆ ಉರುಳು ಹಾಕೋಕೆ"

ಎನ್ನುತ್ತಾ ಸರಸು ದಢಾರನೆ ವೆಂಕಮ್ಮನನ್ನು ನೂಕಿ, ಕೆಳ ಗುರುಳಿಸಿ, ಹೊರಗೆ ಹೊರಟಳು. ತಾಯಿ ಕೆಳಗೆ ಬಿದ್ದೊಡನೆ ಸುಮಿತ್ರೆ "ನಾಣೀ, ಚಿಕ್ಕಣ್ಣಾ" ಎಂದು ಕೂಗುತ್ತಾ ಹಿತ್ತಲಿನಲ್ಲಿ ಬಿಸಿಲು

ಕಾಯಿಸಿಕೊಂಡು ಕುಳಿತಿದ್ದ ಶಾಮು, ನಾಣಿಯರ ಬಳಿಗೋಡಿ ಬಂದು ನಡೆದ ಸಂಗತಿಯನ್ನು ನಿಮಿಷದಲ್ಲಿ ತಿಳಿಸಿದಳು. ಮೂವರೂ ಅಂಗಳಕ್ಕೆ ಬರುವ ವೇಳೆಗೆ ವೆಂಕಮ್ಮ ಎದ್ದು ಕುಳಿತಿದ್ದಳು. ಹಣೆಯ ತುದಿಯಿಂದ ರಕ್ತ ಬುಳುಬುಳನೆ ಹರಿಯುತ್ತಿತ್ತು. ಆಕೆ ಕೆಳಗೆ ಬಿದ್ದೊಡನೆ ದ್ವಾರಪ್ಪಂದಕ್ಕೆ ತಲೆ ರಾಚಿ, ಹಣೆಯಂಚಿಗೆ ಪೆಟ್ಟಾಗಿ, ಹೊಸಲಿಗೆ ನೆತ್ತರು ಚಿಮುಕಿಸಿದಂತಾಗಿತ್ತು.

ಶಾಮು ಬಟ್ಟೆ ನೆನಸಿಕೊಂಡು ಬಂದು ರಕ್ತವನ್ನು ತೊಡೆದ. ಶ್ರೀನಿವಾಸನ ಗಾಯಗಳಿಗಾಗಿ ತಂದಿದ್ದ ಮುಲಾಮನ್ನೇ ತಾಯಿಯ ಹಣೆಗೂ ಹಚ್ಚಿ, ಬಟ್ಟೆ ಕಟ್ಟಿದ. ಮೆಲ್ಲನೆ ಆಕೆಯನ್ನು ಅಡಿಗೆ ಕೋಣೆಗೆ ಕರೆತಂದು ಕೂಡಿಸಿದ್ದೂ ಆಯಿತು. ನಡೆದ ಸಂಗತಿಯನ್ನೆಲ್ಲಾ ಸುಮಿತ್ರೆ ವಿವರವಾಗಿ ವರ್ಣಿಸಿದಳು.

"ಅಮ್ಮ, ಇನ್ನೂ ಕಾಫಿ ಕುಡಿಯಲಿಲ್ಲವೇನೇ ಸುಮಿತ್ರ?"

ಅದು ನಾಣಿಯ ಪ್ರಶ್ನೆ.

"ಉಹ್ಞು"

"ನೀನು?"

"ನಾನೂ ಇಲ್ಲ"

"ಕಿಟ್ಟಣ್ಣ?"

"ಅವನಿಗೆ ಕೊಡೋದಿಕ್ಕೆ ಹೋಗೇ ಇಷ್ಟು ರಾಮಾಯಣ ಆಗಿದ್ದು"

"ಹಾಗಾದರೆ ಅವನು ಕುಡಿಯೋದಿಲ್ಲವಂತೊ?"

"ಹೋಗಲಿ ಬಿಡೋ ನಾಣಿ. ಮದುವೆ ಆದಮೇಲೆ ಅವನ ಬುದ್ಧೀನೇ ಕೆಟ್ಟು ಹೋಗಿದೆ" – ಶಾಮು ಸಮಾಧಾನ ಹೇಳಿದ.

"ಬುದ್ಧಿ ಯಾಕೋ ಕೆಡುತ್ತೆ? ಹೆದರಿ ಹೆದರಿ ಸಾಯ್ತಾನೆ. ಮೊದಲಿಂದಲೂ ಹಾಗೇನೇ ಅವನು? ಒಂದು ಮಾತುಕೂಡ ಸರಿಯಾಗಿ ಆಡೋಕೆ ಬರೋಲ್ಲ–ಶುದ್ಧ ಪೆಂಗ. ಅಪ್ಪನಿಗೆ ಹೆದರಿಕೊಂಡು ಆ ಹುಡುಗೀನ ಮದುವೆಯಾದ. ಆ ಹುಡುಗೀಗೆ ಹೆದರಿಕೊಂಡು ನಮ್ಮನ್ನ ಬಿಟ್ಟ. ಇನ್ನು ನಮಗೆ ಹೆದರಿಕೊಂಡು ಈ ಊರೇ ಬಿಟ್ಟು ಬಿಟ್ಟು ಕೋಟೆಗೇ ಹೋಗ್ತಾನೇನೊ!"

"ಏನೋ ಪಾಪ, ಅವನ ದುರದೃಷ್ಟ!"

"ಅವನ ದುರದೃಷ್ಟ ಅಲ್ಲ, ಅಣ್ಣನ ಅದೃಷ್ಟಕಣೊ. ಆ ದೊಡ್ಡ ಬಾಯಿ ಹುಡುಗಿಯನ್ನ ಈ ಚಿಕ್ಕ ಬಾಯಿ ಹುಡುಗನಿಗೆ ಕಟ್ಟಿ ಸಾವಿರದ ಇನ್ನೂರು ರೂಪಾಯಿ ಜೇಬಿಗೆ ಉದುರಿಸಿಕೊಂಡಿದ್ದು ಅಣ್ಣನ ಅದೃಷ್ಟ ಅಲ್ವೇನೋ?"

"ಹೋಗಲಿ ಸುಮ್ನಿರೋ–ಅದೆಲ್ಲಾ ಯಾಕೀಗ?" – ಎನ್ನುತ್ತಾ ಶಾಮು ತಾನೇ ಒಂದು ಲೋಟಕ್ಕೆ ಕಾಫಿ ಬಗ್ಗಿಸಿ ನಾಣಿಯ ಕೈಗಿತ್ತ. ಸುಮಿತ್ರೆಯೂ ತನ್ನ ಲೋಟವನ್ನು ಮುಂದುಮಾಡಿದಳು.

"ನೀನೂ ಸ್ವಲ್ಪ ಕುಡಿಯಮ್ಮ"—ಬೇಡಿಕೊಳ್ಳುವಂತೆ ಹೇಳಿದ ಶಾಮು.

"ನಾವೆಲ್ಲಾ ಮುಟ್ಟಿದ್ದಕ್ಕೆ ಮೈಲಿಗೆ ಆಗ್ಹೋಯ್ತು ಚಿಕ್ಕಣ್ಣ. ಅಮ್ಮ ಕುಡೀತಾರೋ ಇಲ್ವೋ?" — ಸಂದೇಹವೆಂದ ನುಡಿದಳು ಸುಮಿತ್ರೆ.

"ಮಡಿಯೂ ಇಲ್ಲ – ಮೈಲಿಗೆಯೂ ಇಲ್ಲ. ನನ್ನ ಮಕ್ಕಳು ಮುಟ್ಟಿದರೆ ಮೈಲಿಗೆಯಾಗುತ್ಯೇನೆ ಪುಟ್ಟ?" – ಎನ್ನುತ್ತಾ ವೆಂಕಮ್ಮ ಕಾಫಿಯ ಲೋಟವನ್ನು ತಾನೇ ಕೈಗೆ ತೆಗೆದುಕೊಂಡಳು.

"ತುಂಬ ಬಿಸಿ. ತಾಳಮ್ಮ ಆರಿಸಿಕೊಡುತ್ತೇನೆ"—ಎಂದ ಶಾಮು. ವೆಂಕಮ್ಮ ಲೋಟವನ್ನು ಕೆಳಗಿಟ್ಟಳು. ಅವಳ ಮನಸ್ಸು ಮೂವತ್ತೈದು ವರ್ಷಗಳ ಹಿಂದಕ್ಕೆ ಓಡಿಹೋಗಿತ್ತು. ಆಗ ಪತಿಯ ಕಾಲು ಹಿಡಿದು ಕೊಂಡು—

"ನಿಮ್ಮ ದಮ್ಮಯ್ಯ" ಎಂದಿದ್ದಳು. ಆ ಪಾದಗಳಿಗೆ ಕಣ್ಣೀರಿನ ಅಭಿಷೇಕ ಮಾಡಿದ್ದಳು. ಆದರೆ ಪತಿದೇವರ ಕಲ್ಲುಹೃದಯ ತನ್ನ ಮುಖಕ್ಕೆ ಕಲ್ಲನ್ನೇ ಎಸೆದಿತ್ತು.

"ಬಿಡೇ ಕಾಲು ಅನಿಷ್ಟ" – ಕಾಲು ಝಾಡಿಸಿ ಒದೆದಾಗ, ಚಿಮ್ಮಿದ ಕವಡೆಯಂತೆ ತಾನು ಕೆಳಗುರುಳಿ ಬಿದ್ದಿದ್ದಳು. ಕೈಬಳೆಗಳು ಒಡೆದು ಪುಡಿಯಾಗಿದ್ದವು. ಹಣೆಯ ತುದಿಯಿಂದ ರಕ್ತ ಚಿಮ್ಮಿತ್ತು.

ಅನಂತರ ಅವರು ಆಡಿದ ಮಾತಿನಲ್ಲಿ ಮುಖ್ಯವಾಗಿ ಬಂದ ಅಂಶ 'ವರದಕ್ಷಿಣೆ'.

ಮೂವತ್ತೈದು ವರ್ಷಗಳ ನಂತರ, ಇದೀಗ ಅಂತಹ ಪ್ರಸಂಗದ ಪುನರಾವರ್ತನೆ........ಆಗ ಪತಿದೇವರು ಒದೆದಿದ್ದರು. ಈಗ ಸರಸು ನೂಕಿ ಉರುಳಿಸಿದಳು.

ಆಗ ಹಣೆಯಿಂದ ತನ್ನ ತಾರುಣ್ಯದ ಬಿಸಿರಕ್ತ ಚಿಮ್ಮಿತ್ತು. ಈಗ ಆರಂಭವಾಗಿರುವ ವೃದ್ಧಾಪ್ಯದ ಆರಿಹೋಗಿರುವ ರಕ್ತ ಬುಳು ಬುಳನೆ ಹರಿಯಿತು.

ಆಗ ಕೈಹಿಡಿದವರು ಆಡಿದ ಕೊನೆಯ ಮಾತಿನ ಸಾರಾಂಶ– 'ವರದಕ್ಷಿಣೆ'. ಈಗ ಸರಸು ಆಡಿದ ಕೊನೆಯ ಮಾತಿನ ಸಾರಾಂಶವೂ ಅದೇ–'ವರದಕ್ಷಿಣೆ'

ಸಾವಿರ ಬರಲಿಲ್ಲವೆಂದು, ಕೈಹಿಡಿದಿದ್ದವಳನ್ನು ಕೈಹಿಡಿದವರು ಕೈ ಬಿಟ್ಟಿದ್ದರು.

ಸಾವಿರದಿನ್ನೂರು ಕೊಟ್ಟಿರುವೆನೆಂಬ ಕಟ್ಟಸಿಂದ ಕೈಹಿಡಿದವಳು ಕೈಹಿಡಿದವನ ಮೇಲೆ ಕೈಮಾಡಿ ತನ್ನ ಹಕ್ಕು ಸ್ಥಾಪಿಸಿಕೊಂಡಳು.

ಆಗ ತನ್ನ ಪತಿದೇವರು ಮಾಡಿದ್ದು ತಪ್ಪಲ್ಲವಾದರೆ ಈಗ ಸರಸು ಮಾಡಿದ್ದೂ ತಪ್ಪಲ್ಲ!

ವಿಚಾರ ಸರಣಿಯಲ್ಲಿ ಮಗ್ನಳಾಗಿದ್ದ ವೆಂಕಮ್ಮನಿಗೆ ಕಾಫಿಯ ನೆನಪೂ ಇರಲಿಲ್ಲ.

"ಆರಿದೆ ಕುಡಿಯಮ್ಮ" ಎಂದ ಶಾಮು. ನಿಟ್ಟುಸಿರಿಡುತ್ತಾ ವೆಂಕಮ್ಮ ಕಾಫಿಯ ಲೋಟವನ್ನು ಕೈಗೆ ತೆಗೆದುಕೊಂಡಳು.

"ಒಂಭತ್ತು ಗಂಟೆ ಆಯಿತು. ಶೀನಣ್ಣ ಇನ್ನೂ ಎದ್ದೇ ಇಲ್ಲವಮ್ಮ!"

ಸುಮಿತ್ರೆ ಆಶ್ಚರ್ಯದಿಂದ ನೋಡಿದಾಗ—

"ರಾತ್ರಿಯೆಲ್ಲಾ ಬೆನ್ನುನೋವಿಗೆ ನಿದ್ದೇನೇ ಮಾಡಲಿಲ್ಲ. ಬೆಳಗಿನ ಝಾವದಲ್ಲಿ ಜೋಂಪು ಹತ್ತಿತೇನೋ–ನಿದ್ದೆ ಮಾಡುತ್ತಿದ್ದಾನೆ"

ಎನ್ನುತ್ತಾ ವೆಂಕಮ್ಮ ಎದ್ದುಹೋಗಿ ಒಲೆಯ ಮುಂದೆ ಕುಳಿತಳು.

"ಮೊನ್ನೆ ಮೊನ್ನೆ ಹಾಸಿಗೆಬಿಟ್ಟು ಎದ್ದಿದ್ದೀಯಮ್ಮ. ಮತ್ತೆ ಈಗ ಹಣೇಗೆ ಪೆಟ್ಟುಬೇರೆ ಬಿದ್ದಿದೆ. ಕೆಲಸ ಹೇಗಮ್ಮ ಮಾಡುತ್ತೀಯ?" —ಎಂದ ಶಾಮು.

"ಮಾಡವಿದ್ದರೆ, ಬೇರೆ ಯಾರು ಮಾಡುತ್ತಾರಪ್ಪ ? ಇನ್ನೊಂದು ವರ್ಷ ಹೋದರೆ ಸುಮಿತ್ರಿ ಯದುವಿಕೊಳ್ಳುತ್ತಾಳೆ. ಆಮೇಲೆ ಪರವಾಗಿಲ್ಲ."

"ಅಮುವರೆಗೂ ಹೀಗೇ ದುಡೀತೀಯೇನಮ್ಮ? ನಾಲ್ಕು ದಿನ ಶಾಂತೂನ ಕರೆಸಿಕೊಂಡು ಇಟ್ಟುಕೊಳ್ಳೋಣಮ್ಮ. ಅಷ್ಟುಹೊತ್ತಿಗೆ ನಿನ್ನ ಗಾಯ ಸ್ವಲ್ಪ ವಾಸಿಯಾಗುತ್ತೆ. ಮೈ ಸುಧಾರಿಸಿಕೊಂಡ ಹಾಗಾಗುತ್ತೆ."

ಶಾಮುವಿನ ಸಲಹೆ ನಾಣಿಗೆ ಉತ್ಸಾಹದಾಯಕವಾಗಿತ್ತು !

"ಕಂಡವರ ಮನೆ ಹುಡುಗೀನ ಕರೆಸಿಕೊಂಡು ಎಷ್ಟು ದಿನ ದುಡಿಸಿಕೊಳ್ಳೋದೋ ಶಾಮು ?"

"ಇವತ್ತು ಕಂಡವರ ಮನೆ ಹುಡುಗಿ ಆದರೆ, ಅವಳೇ ನಾಳೆ ನಮ್ಮ ಮನೆ ಹುಡುಗಿ ಆಗುತ್ತಾಳಲ್ಲಮ್ಮ !"

"ಅಂದರೆ .......?"

"ನಾಣಿ ಅವಳ್ನೇ ಮದುವೆ ಆಗ್ತಾನಂತೆ !"

"ಓಹೋ! ಆಗಲೇ ಹೆಂಡತೀನ್ನೂ ಹೊಂಚಿಕೊಂಡಿದ್ದಾನೋ!"

ನೋವಿನ ಕತ್ತಲೆಯಲ್ಲಿ ನಗೆಯ ಮಿಂಚು ಮಿಂಚಿತು.

"ನಾಣೀಗೆ ಶಾಂತೂನ್ನೇ ಮಾಡಿಕೋಬೇಕಮ್ಮ ಅವನಿಗಂತೂ ತುಂಬ ಇಷ್ಟ ಇದೆ. ಆ ಹುಡುಗೀನೂ ತುಂಬ ಒಳ್ಳೇವಳು. ಸೀತಕ್ಕನಿಗೂ ದೊಡ್ಡ ಭಾರ ಕಳೆದ ಹಾಗಾಗುತ್ತೆ !"

'ನನಗೂ ಆಸೆ ಇದೆ ಕಣೋ ಶಾಮು—ಆ ಹುಡುಗೀನ ನಮ್ಮನೇಗೇ ತಂದುಕೋಬೇಕೂಂತ ! ಆದರೆ ನಮ್ಮ ಯತ್ನ ಏನು ನಡೆಯುತ್ತದಪ್ಪ ?"

"ಅಪ್ಪ ಇರೋವರೆಗೂ ಏನು ನಡೆಯುತ್ತೆ—ಏನು ನಡೆಯೋಲ್ಲ ಅಂತ ಹೇಳೋದಕ್ಕೆ ಆಗೋಲ್ಲ ಅಲ್ವೇನಮ್ಮ ?"—ಎಂದ ನಾಣಿ.

ವೆಂಕಮ್ಮ ಮಾತನಾಡಲಿಲ್ಲ.

"ಚುಮ್ಮಿ, ಶಾಂತೂನ ಕರಕೊಂಡು ಬಾ ಹೋಗೆ. ನಾನು ಹೇಳ್ತೀನಿ" ಶಾಮುವಿನ ಬಾಯಿಂದ ಮಾತು ಬಂದೊಡನೆಯೇ ಸುಮಿತ್ರಿ ಓಡಿದಳು—ಸೀತಕ್ಕನ ಮನೆಗೆ.

"ನಾಳೆ ನಿನ್ನ ಪರೀಕ್ಷೆ ರಿಸಲ್ಟ್ಸ್ ಅಲ್ವೇನೋ ?"

ನಾಣಿಯ ಪ್ರಶ್ನೆಗೆ "ಹ್ಞ" ಎಂದ ಶಾಮು.

"ಹಾಗಾದರೆ ನಾಳೆ ಕೋರ್ಟೇಗೆ ಹೋಗ್ತೀಯಾ ?"

"ಹ್ಞ"

ಅಷ್ಟರಲ್ಲಿ ಸುಮಿತ್ರೆಯೊಡನೆ ಶಾಂತು ಬಂದಳು.

"ನೋಡಮ್ಮ, ನಮ್ಮ ಅತ್ತಿಗೆ ಬಂದಳು"

ಶಾಮು ನಗುತ್ತಾ ನುಡಿದ. ವೆಂಕಮ್ಮ ಶಾಂತುವಿನ ಕಡೆಗೆ ನೋಡಿದಳು. ಶಾಂತುವಿನ ಮುಖ ನಾಚಿಕೆಯಿಂದ ಬಾಗಿತ್ತು.

"ಇವತ್ತಿನಿಂದ ನಿನಗೆ ಟೆಂಪರರಿ ಅತ್ತಿಗೆ ಕೆಲಸ; ಮೈಗೆ ಸರಿಯಾಗಿಲ್ಲ ಅಂತ ಅಮ್ಮನಿಗೆ ರಜ ಸುಮಿತ್ರೆ ನಿನಗೆ ಅಸಿಸ್ಟೆಂಟ್ ಆಗಿರ್ತಾಳೆ ಈ ದೊಡ್ಡ ಸ್ಕೂಲ್‌ನ ಗಲಾಟೆ ಇಲ್ಲದೆ ನಡೆಸಿಕೊಂಡು ಹೋಗಬೇಕು ನೀನು. ಕಾರ್ತೀಕ ಮಾಸದಲ್ಲಿ ನಿನಗೇ ಈ ಕೆಲಸ ಪರ್ಮನೆಂಟ್ ಮಾಡಿಬಿಡ್ತಾರೆ ಅಮ್ಮ !"

ಶಾಮುನ ಮಾತು ಕೇಳಿ ಉಳಿದ ಮೂವರೂ ನಗುತ್ತಿದ್ದರು. ಶಾಂತು ತಲೆ ತಗ್ಗಿಸಿಬಿಟ್ಟಿದ್ದಳು.

"ನಾಣಿ, ನಿನಗಿನ್ನೂ ಗಂಡನ ಕೆಲಸ ಕೊಟ್ಟಿಲ್ಲ. ಅಧಿಕಾರ ವಿಲ್ಲದಿದ್ದಾಗ ಅತಿಕ್ರಮ ಪ್ರವೇಶ ಮಾಡಿಬಿಡಬೇಡ! ಜೋಕೆ !! ಶಿಕ್ಷೆಗೆ ಗುರಿ ಆಗ್ತೀಯೆ. ಹಾಗೇನಾದ್ರು ಮಾಡಿದರೆ ನಿನ್ನ ಹಿಡಿದು ಕೊಡೋಕೆ ಸುಮಿತ್ರೆ ಇದ್ದಾಳೆ. ಜೋಪಾನ !"

ಎನ್ನುತ್ತಾ ಶಾಮು ಅಡಿಗೆಮನೆಯಿಂದ ಹೊರಟ. ನಾಣಿಯೂ ನಗುತ್ತಾ ಅವನನ್ನು ಹಿಂಬಾಲಿಸಿದ. ಅವರು ಹೊರಗೆ ಹೋಗು ವುದನ್ನೇ ಕಾಯುತ್ತಿದ್ದ ಹಾಗೆ, ಮತ್ತೆ ಬಿರಬಿರನೆ ಅಡಿಗೆ ಕೋಣೆಗೆ ಧಾವಿಸಿ, ಅಕ್ಕಿ-ಬೇಳೆ-ಮೊದಲಾದ ಪದಾರ್ಥಗಳನ್ನು ತನಗೆ ಬೇಕಾ ದಷ್ಟು ಮಡಿಲಿಗೂ ಸೆರಗಿಗೂ ಸುರಿದುಕೊಂಡು ತನ್ನ ಕೋಣೆಗೆ ಹಿಂತಿರುಗಿದಳು. ವೆಂಕಮ್ಮ ಯಾವ ಮಾತೂ ಆಡದೆ ಸೊಸೆಯ ನಡೆವಳಿಕೆಯನ್ನೇ ನಿಟ್ಟಿಸುತ್ತಾ ಕುಳಿತುಬಿಟ್ಟಳು. ಅವಳ ಮನಸ್ಸು ಮಾತ್ರ : "ಒಂದು ಮನೆ ಎರಡಾಯಿತು—ಒಡೆದು ಎರಡು ಪಾಲಾ ಯಿತು"—ಎಂದು ಸಂಕಟಪಡುತ್ತಿತ್ತು.

ಸಂಕಟಪಡುತ್ತಿತ್ತು ನಾಗಪ್ಪನವರ ಮನಸ್ಸು. ಕ್ರಿಮಿನಲ್ ಕೇಸಿನ ವಿಚಾರಣೆಯೇ ಇನ್ನೂ ಮುಗಿಯದೆ, ಹಲವಾರು ಬಾರಿ 'ಅಡ್ಜರ್ನ್' ಆಗುತ್ತಾ ನಾಗಪ್ಪನವರ ಹಣವನ್ನು ನುಂಗುತ್ತಿತ್ತು. ಪುಟ್ಟ ಗಂಟು ಮುನ್ನೂರು ರೂಪಾಯಿ ಎಂದೋ ಕರಗಿಹೋಗಿ, ಕಿಟ್ಟುವಿನ ವರದಕ್ಷಿಣೆ ಹಣವಲ್ಲಿಯೂ ಆರು ನೂರು ರೂಪಾಯಿ ಗಳಷ್ಟು ಖರ್ಚಾಗಿದ್ದುದರಿಂದ ನಾಗಪ್ಪನವರು ಪಾತಾಳಕ್ಕೇ ಕುಸಿದು ಹೋಗಿದ್ದರು. ಇನ್ನೂ ಎಷ್ಟುದಿನ ಈ ಕೇಸು ಹೀಗೆಯೇ ಎಳೆಯು ತ್ತದೆಯೋ, ಎಷ್ಟು ಹಣ ತೆರಬೇಕೋ ಎಂದು ಚಿಂತಿಸಿ ಚಿಂತಿಸಿ ಬಳಲಿದರು. ನಾಗಪ್ಪನವರು ಅಗ್ರಹಾರದಿಂದ ನಾಲ್ಕು ಮಂದಿ ಸಾಕ್ಷಿಗಳ ಹೆಸರನ್ನು ಸೂಚಿಸಿದ್ದರು. ವಿಚಾರಣೆಯ ದಿನ ಅವರೆಲ್ಲ ರನ್ನೂ ಕರೆದುಕೊಂಡು ಬೆಂಗಳೂರಿಗೆ ಬಂದು, ಅವರ ಊಟ—ತಿಂಡಿ ಗಳಿಗೆ ಕೊರತೆಯಾಗವಂತೆ ನೋಡಿಕೊಳ್ಳುವಷ್ಟರಲ್ಲಿ ಪ್ರತಿ ಸಾರಿಯೂ ಇಪ್ಪತ್ತು-ಇಪ್ಪತ್ತೈದು ರೂಪಾಯಿ ಕೈಬಿಟ್ಟುಹೋಗುತ್ತಿದ್ದಿತು. ಲಾಯರ್ ಚಂದೂರಾಯರಂತೂ ಕೇಳಿದಷ್ಟು ಫೀಸು ಕಣ್ಣೆದುರಿಗೆ ಇಡದಿದ್ದರೆ, ತನ್ನ ಕಚೇರಿಯ ಕಟ್ಟೆಯನ್ನೇ ಇಳಿಯುತ್ತಿರಲಿಲ್ಲ. ಮಧ್ಯೆ ಮಧ್ಯೆ ಲಾಯರ್ ಗುಮಾಸ್ತೆಯ 'ಗಿಟ್ಟುಪಡಿ' ಒಪ್ಪಿಸ ಬೇಕು. ಕೋರ್ಟಿನ ಪತ್ರಗಳಿಗೆ ಫೀಸು ಕಟ್ಟಬೇಕು ನಾಗಪ್ಪ ನವರಿಗೆ ಖರ್ಚಿನ ಮೇಲೆ ಖರ್ಚು ಹೇರಿಕೊಂಡು ಕೈಯ್ಯಲ್ಲಿ ಕಾಸು ಉಳಿಯದಂತಾಯಿತು. ಸದಾ ಅದೇ ಚಿಂತೆಯಲ್ಲಿಯೇ ಕಾಲಹರಣ ಮಾಡುವಂತಾಯಿತು. ಹಾಗೆಯೇ ಹಣ ಬರುವ ದಾರಿಗಳನ್ನು ಹುಡುಕುವುದೂ ಕೆಲಸವಾಯಿತು. ಇಷ್ಟಾದರೂ ಶಾಮುವನ್ನು ಓದಿಸುವುದಕ್ಕೆ ಹಣ ಖರ್ಚುಮಾಡಲು ಅವರಿಗೆ ಮನಸ್ಸಿರಲಿಲ್ಲ. 'ಅವನು ಓದಿದರೆ ಏನು—ಓದದಿದ್ದರೆ ಏನು? ಹೆಚ್ಚು ಓದಿದಾಕ್ಷಣ ದೊಡ್ಡ ಕೆಲಸ ಸಿಕ್ಕುತ್ತದೆಯೆ? ದೊಡ್ಡ ಕೆಲಸ ಸಿಕ್ಕರೆ ಮಾತ್ರ ತನಗೆ ಸಂಪಾದಿಸಿ ಕೊಡುತ್ತಾನೆಯೆ? ಅದರಿಂದೇನು ಲಾಭ?'

—ಎಂಬುದು ಹಣ ಕೊಡದಿರುವುದಕ್ಕೆ ಅವರ ವಾದ.

ಅದೇ ವಾದವನ್ನು ಸಮರ್ಥಿಸಿದರು ನಾಗಪ್ಪ.

ಆ ದಿನ ಅವರು ಬೆಂಗಳೂರಿನಿಂದ ರೈಲಿಳಿದು ಬಂದಾಗ ಸಂಜೆಯಾಗಿತ್ತು. ಕೋಟು ತೆಗೆದಿಟ್ಟು, ಕೈಕಾಲು ತೊಳೆದುಕೊಂಡು ಅಂಗಳಕ್ಕೆ ಬಂದು ಕುಳಿತರು. ನಾಣಿಯು ಅಲ್ಲೇ ಕುಳಿತು ಕತೆ ಪುಸ್ತಕವೊಂದನ್ನು ಓದುತ್ತಿದ್ದ. ವೆಂಕಮ್ಮ ನೆರೆಮನೆಯ ಸೀತುವಿನ ಜಗುಲಿಯ ಮೇಲೆ ಕುಳಿತು ಎಲೆ ಹಚ್ಚುತ್ತಿದ್ದುದರಿಂದ ನಾಗಪ್ಪನವರು ಬಂದುದನ್ನು ಆಕೆ ನೋಡಲಿಲ್ಲ. ಆ ದಿವವೇ ಶಾಮುವಿನ ಪರೀಕ್ಷೆಯ ಫಲಿತಾಂಶ ಹೊರಬಿದ್ದುದರಿಂದ, ತನ್ನ ಲಲಾಟ ಲಿಪಿಯನ್ನು ನೋಡಿಕೊಂಡು ಬರಲು ಕೋಟೆಗೆ ಹೋಗಿದ್ದ ಶಾಮು ಆಗತಾನೆ ಮನೆಗೆ ಬಂದು, ಅಂಗಳದಲ್ಲಿ ಕುಳಿತಿದ್ದ ತಂದೆಯನ್ನು ಕಂಡು, ತನಗೆ ಫಸ್ಟ್‌ಕ್ಲಾಸಿನಲ್ಲಿ ತೇರ್ಗಡೆಯಾಗಿದೆಯೆಂದು ಹೇಳಿದಾಗ—"ತಾಲ್ಲೋಕು ಕಚೇರಿಗೋ, ಪೋಸ್ಟು ಕೆಲಸಕ್ಕೋ ಅರ್ಜಿ ಹಾಕು—ಸಿ. ಆರ್. ಬಿ. ಫಾರಂ ತಂದು" ಎಂದು ಅಪ್ಪಣೆಮಾಡಿದರು.

ಆಗ ಪ್ರತಿಭಟಿಸಿದವನು ನಾಣಿ. "ಅಣ್ಣಾ, ಅವನನ್ನ ಮುಂದಕ್ಕೆ ಓದಿಸಬೇಕಣ್ಣಾ. ಅವನು ತುಂಬ ಬುದ್ಧಿವಂತ"

"ಓದಿನಲ್ಲಿ ತೋರಿಸಿದ ಬುದ್ಧಿವಂತಿಕೆ ಸಾಕು ಕಣೊ. ಇನ್ನು ಕೆಲಸದಲ್ಲಿ ತೋರಿಸಲಿ. ನೋಡೋಣ ಅವನ ಬುದ್ಧಿವಂತಿಕೆ"

"ಹಾಗಲ್ಲಣ್ಣಾ, ಅವನು ಓದಿದರೆ ನಮ್ಮ ಮನೆಗೇ ಒಳ್ಳೆ ಹೆಸರು ಬರುತ್ತದೆ"

"ಈಗೇನು, ಮನೇಗೆ ಕೆಟ್ಟ ಹೆಸರಿದೆಯೇನೋ ನಾಣಿ. ಮನುಷ್ಯರೇ ಶಾಶ್ವತವಲ್ಲದ ಮೇಲ, ಮನೆ ಏನು ಶಾಶ್ವತ? ಈ ತಲೇಗೋ ಮುಂದಿನ ತಲೇಗೋ ಉರುಳಿ ಹೋಗೋ ಮನೆಗೆ ಕೆಟ್ಟ ಹೆಸರು-ಒಳ್ಳೆ ಹೆಸರು ಬೇರೆ ಬೇರೆ ಇರುತ್ತೇನೊ?"

ನಾಗಪ್ಪನವರು ಲೀಲಾಜಾಲವಾಗಿ ವೇದಾಂತದ ನೀರಿನ ಮೇಲೆ ನಡೆದಾಡಿದರು. ನಿಜಕ್ಕೂ ಆ ಮನೆ ಶಾಶ್ವತವಾಗಿರುವಂತಿರಲಿಲ್ಲ! ಹಸಿ ಇಟ್ಟಿಗೆಯಲ್ಲಿ ಕಟ್ಟಿದ ಮನೆ, ಮಳೆ ಬಂದಾಗ ಹೊರಗಿನ ಗೋಡೆಗೆ ಇರುಚಲು ಹೊಡೆದು, ಅದನ್ನು ಕರಗಿಸುತ್ತಿತ್ತು. ಹಾಗೆಯೇ ಮಳೆ

ಗಾಲ ಬಂದಿತೆಂದರೆ, ಗೋಡೆಗಳು ತೆಳ್ಳಗಾಗುವ ಶುಭಕಾಲ ಬಂದಿತೆಂದೇ ಅರ್ಥ! ಚಾವಣಿಗೆ ಹೊದಿಸಿದ ಮಂಗಳೂರು ಹೆಂಚಿನ ಮೇಲೆ ಎರಡು ಕಡೆಯೂ ಗಾರೆ ದಿಂಡು ಕಟ್ಟದಿದ್ದುದು ಮನೆಯ ಆಪತ್ತಿಗೆ ಇನ್ನೊಂದು ಕಾರಣ. ಕಾಗೆಗಳು ಹೆಂಚಿನ ಅಂಚಿನಲ್ಲಿ ಕುಳಿತು ಎಷ್ಟೋ ಹೆಂಚುಗಳನ್ನು ಕೆಳಗುರುಳಿಸಿತ್ತು. ಅಕ್ಕಪಕ್ಕದ ಮನೆಯವರು ಎಷ್ಟೋ ಬಾರಿ, "ಮೇಲೆ ದಿಂಡು ಕಟ್ಟಿಸಬೇಕು ಸ್ವಾಮಿ ಇಲ್ಲದಿದ್ದರೆ ಹೆಂಚುಗಳು ನಿಲ್ಲುವುದಿಲ್ಲ. ಜೋರಾಗಿ ಗಾಳಿ ಬಂದರೆ ಚಾವಣಿಯನ್ನೇ ಹಾರಿಸಿಕೊಂಡು ಹೋಗುತ್ತದೆ" – ಎಂದು ಎಚ್ಚರಿಸಿದ್ದರು. ಆದರೂ ನಾಗಪ್ಪನವರು ಅತ್ತ ಗಮನವಿತ್ತಿರಲಿಲ್ಲ. ಈ ಮನೆ ಮುಂದಿನ ತಲೆಮಾರಿನವರೆಗೂ ಕಾಯದೆ ಈ ತಲೆಮಾರಿಗೇ ಉರುಳುತ್ತದೆಂಬುದು ಅವರಿಗೆ ತಿಳಿದಿತ್ತೋ–ಇಲ್ಲವೋ! ಅಂತೂ ಶಾಮುವಿನ ಓದಿಗೆ ಮನಸ್ಸಿಲ್ಲದೆ ನಾಣಿಯೊಡನೆ ಆ ಮಾತು ಆಡಿ ಬಿಟ್ಟರು.

"ಅವನನ್ನ ಓದಿಸೋದರಿಂದ ಏನು ಕಷ್ಟವಣ್ಣ ?"

"ದುಡ್ಡು ಒದಗಿಸೋದು ಕಷ್ಟ ಕಣೋ."

"ನಾನೂ—ಕಿಟ್ಟಣ್ಣ ಸ್ವಲ್ಪ ಸ್ವಲ್ಪ ಹಾಕಿಕೊಂಡು ಅವನಿಗೆ ಕಳಿಸುತ್ತೇವೆ"

"ಮನೆ ಸಂಸಾರ ನಡೆಯೋದೇ ಕಷ್ಟ. ಅವನಿಗೆ ಎಲ್ಲಿ ಕಳಿಸೋದು ?"

"ನಾವು ಹೇಗಾದರೂ ಮಾಡಿ ಕಳಿಸುತ್ತೇವಣ್ಣ"

ಉಪಾಯಗಾಣದೆ ನಾಗಪ್ಪನವರು—

"ಏನಾದರೂ ಮಾಡಿಕೊಳ್ಳಿ" ಎಂದು ಬಿಟ್ಟರು. ಆ ಮಾತಿನಿಂದ ಶಾಮು—ನಾಣಿಯರ ಉತ್ಸಾಹ ಕ್ಷಣಕಾಲ ಕುಗ್ಗಿತಾದರೂ 'ಹೇಗಾದರೂ ಪ್ರಯತ್ನಿಸಬೇಕು' ಎಂದುಕೊಂಡು ಇಬ್ಬರೂ ತಂದೆಯ ಕಣ್ಣಿಗೆ ಮರೆಯಾದರು. ಅಷ್ಟರಲ್ಲಿ ವೆಂಕಮ್ಮ, ಶಾಂತು—ಸುಮಿತ್ರೆಯರೊಡನೆ ಒಳಗೆ ಬಂದಳು. ನಾಗಪ್ಪನವರು ಹೆಂಡತಿಯ ಕಡೆಗೆ ದೃಷ್ಟಿ ಹರಿಸಿದಾಗ, ವೆಂಕಮ್ಮನ ಹಣೆಗೆ ಕಟ್ಟಿದ ಪಟ್ಟಿ ಕಾಣಿಸದಿರಲಿಲ್ಲ.

"ಏನೇ ಅದು ? ಹಣೇಗೆ ಪಟ್ಟಿ ಕಟ್ಟಿದ್ದೀ ?"

ವೆಂಕಮ್ಮ ಉತ್ತರಿಸದೆ, ತುಟಿಯಲ್ಲಿಯೇ ನಗುತ್ತಾ ಅಡಿಗೆ

ಮನೆಯ ಕಡೆಗೆ ನಡೆದಳು.

"ಏ ಚುಮ್ಮಿ, ಏನಾಯ್ತೇ ನಿಮ್ಮಮ್ಮನಿಗೆ ?"

"ಅದೇನಾಯ್ತೋ ಅಮ್ಮನ್ನೇ ಕೇಳಣ್ಣ" ಎನ್ನುತ್ತಾ ಸುವಿತ್ರಿಯೂ, ಶಾಂತುವಿನೊಡನೆ ತಾಯಿಯನ್ನು ಹಿಂಬಾಲಿಸಿದಳು

"ದೀಪ ಹಚ್ಚೆ ಚುಮ್ಮಿ; ಶಾಂತೂ, ಒಂದೇ ಒಂದು ಬಿಂದಿಗೆ ನೀರು ಸೇದಿಕೊಂಡು ಬಾ ತಾಯಿ."

ಎನ್ನುತ್ತಾ ವೆಂಕಮ್ಮ ಅಂಗಳಕ್ಕೆ ಬಂದ.—

"ಊಟಕ್ಕೆ ಬನ್ನೀಂದ್ರೆ. ಬೆಳಗ್ಗೆಯಿಂದ ಹೊಟ್ಟೆಗೆ ಏನೂ ಇಲ್ಲಾಂತ ಕಾಣುತ್ತೆ !" ಎಂದು ನಾಗಪ್ಪನವರನ್ನು ಕರೆದಳು.

ಮಕ್ಕಳೊಡನೆ ಕುಳಿತು ಊಟಮಾಡುವ ಪದ್ಧತಿ ನಾಗಪ್ಪನವರಿಗಿರಲಿಲ್ಲ ಅವರೊಬ್ಬರೇ ಪ್ರಾಂಗಿತವಾಗಿ ಕುಳಿತು, ತುಂಬ ನಿಧಾನವಾಗಿ ಎಲೆಯ ಮೇಲಿನ ಒಂದೊಂದೇ ಪದಾರ್ಥಗಳನ್ನು ಕಬಳಿಸುವುದು ಸ್ವಭಾವಜನ್ಯವಾಗಿ ಬಂದ ಗುಣವಾಗಿತ್ತು. ಎಂತಲೇ ಅವರೊಡನೆ ಊಟಕ್ಕೆ ಕುಳಿತುಕೊಳ್ಳಲು ಅವರ ಮಕ್ಕಳಿಗೇ ಬೇಸರ. ಹೀಗಾಗಿ ನಾಗಪ್ಪನವರಿಗೆ ಮಕ್ಕಳಾಗಲಿ–ಮಕ್ಕಳಿಗೆ ನಾಗಪ್ಪನವರಾಗಲಿ ಕಾಯುವಂತಿರಲಿಲ್ಲ.

ವೆಂಕಮ್ಮ ಕರೆದೊಡನೆ, ಅಂಗಳ ಬಿಟ್ಟೆದ್ದು ಅಡಿಗೆ ಕೋಣೆಗೆ ನಡೆದರು ನಾಗಪ್ಪ. ವೆಂಕಮ್ಮ ಅವರ ಊಟಕ್ಕೆ ತಕ್ಕಹಾಗೆಯೇ ನಿಧಾನವಾಗಿ ಬಡಿಸತೊಡಗಿದಳು. ಸಾವಕಾಶವಾಗಿ ಊಟ ಸಾಗಿರುವಾಗ, ಹಣೆಯ ಗಾಯದ ವಿಷಯ'ಬಂದಿತು. ಕಿಟ್ಟು-ಶರಮ ಬೇರೆಹೋದ ಸಂಗತಿಯೂ ಹೊರಬಿತ್ತು. ನಾಗಪ್ಪನವರು ಕೈಗೆ ತೆಗೆದುಕೊಂಡಿದ್ದ ತುತ್ತನ್ನು ಕೆಳಕ್ಕೇ ಬಿಟ್ಟು, ಸಹಸ್ರನಾಮಕ್ಕೆ ಆರಂಭಿಸಿದರು.

"ಅಯೋಗ್ಯ, ಹೆಂಡತಿ ಮಾತು ಕೇಳಿಕೊಂಡು, ಇಷ್ಟೆಲ್ಲಾ ಮಾಡಿದನೊ ?"

"ಆಗಿದ್ದಾಯಿತು, ಆ ಮಾತು ಇನ್ನು ಯಾಕೆ ಬಿಡೀಂದ್ರೆ "

"ಆಗಿದ್ದಾಯಿತು ಅಂದರೆ-ಹೇಗಾಯಿತು ಅಂತ ?"

"ಮಿಂಚಿದ ಕೆಲಸಕ್ಕೆ ಮರುಗಿದರೇನು ?"

"ಮಿಂಚಲೂ ಇಲ್ಲ, ಗುಡುಗಲೂ ಇಲ್ಲ. ಇವತ್ತು ಆ 'ಮ್ಯಾಣದ

ಮಿಂಜರಿ' ಆವನಿಗೆ ಹೆಚ್ಚಾದಳು. ಆವನನ್ನು ಹೆತ್ತವರು ನಾವು ಹುಚ್ಚರಾದೆವು !"

ನಾಗಪ್ಪನವರು ಅರ್ಧ ಊಟಕ್ಕೇ ಅಸಮಾಧಾನದಿಂದ ಎದ್ದು, ಕೈತೊಳೆದು, ಹೊರಗಿನ ಕೋಣೆಯ ಬಳಿಗೆ ಬಂದರು. ಒಳಗೆ ಚಿಲಕ ವಿಟ್ಟುಕೊಂಡಿದ್ದ ಬಾಗಿಲನ್ನು ಟಪಟಪನೆ ನಾಲ್ಕಾರು ಬಾರಿ ಬಡಿದರು.

"ಕಿಟ್ಟೂ-ಕಿಟ್ಟೂ"

ಯಾರೂ ಬಾಗಿಲು ತೆಗೆಯಲಿಲ್ಲ.

"ಅಮ್ಮ, ತಾಯಿ, ಮುದ್ದಿರಮ್ಮ, ಬಾಗಿಲು ತೆಗಿ ಸ್ವಲ್ಪ"

ಅಣಕದ ಧ್ವನಿಯಲ್ಲಿ, ಮುದ್ದೂರಿನ ಹುಡುಗಿಯಾದ ಸರಸು ವನ್ನು ಕೂಗಿದರು ನಾಗಪ್ಪ. ಬಾಗಿಲು ತೆರೆಯದಿದ್ದುದರಿಂದ ಅವರ ಸಿಟ್ಟು ಏರಿತು.

"ತೆಗೆಯೋ ಬಾಗಿಲನ್ನ, ಅಯೋಗ್ಯ. ಹುಲಿಹೊಟ್ಟೇಲಿ ಇಲಿ ಹಾಗೆ ಹುಟ್ಟಿದೆಯಲ್ಲೋ ಹೇಡಿ" – ಎನ್ನುತ್ತಾ ನಾಗಪ್ಪನವರು ಬಾಗಿ ಲನ್ನು ಗಟ್ಟಿಯಾಗಿ ಒದೆದರು. ಹಾಗೆ ನಾಲ್ಕು ಬಾರಿ ಒದೆದಿದ್ದರೆ ಆ ಬಾಗಿಲು ಮುರಿಯುತ್ತಿತ್ತೇನೋ !

ಆದರೆ ಹಾಗಾಗಲಿಲ್ಲ. ಕಿಟ್ಟು ಸಿಟ್ಟಾದ ಉಪಾಧ್ಯಾಯರನ್ನು ಕಂಡು ಹೆದರುವ – ಕಣ್ಣುಮುಚ್ಚಾಲೆಯಾಡುವ ವಯಸ್ಸಿನ ಚಿಕ್ಕ ಹುಡುಗನಂತೆ ಕಿಟ್ಟು ಶಬ್ದಮಾಡದೆ ಚಿಲಕವನ್ನು ತೆಗೆದು, ಬಾಗಿಲನ್ನು ತೆರೆದ. ನಾಗಪ್ಪನವರು ಒಳಗೆ ನೋಡಿದರು. ಸರಸು ಉರಿಯುತ್ತಿದ್ದ ಕಬ್ಬಿಣದ ಒಲೆಯ ಮುಂದೆ ಕುಳಿತು, ಕುದಿಯುತ್ತಿದ್ದ ಅನ್ನದ ತಪ್ಪಲೆ ಯನ್ನೇ ನೋಡುತ್ತಿದ್ದಳು.

"ಓಹೋ ! ರೆಕ್ಕೆ ಬಂತು ಅಂತ ಹಾರಿಬಿಟ್ಟೆಯೋ ಆಗಲೇ ? ಅಯೋಗ್ಯ !"

ಕಿಟ್ಟುವಾಗಲಿ, ಸರಸುವಾಗಲಿ ಮಾತನಾಡಲಿಲ್ಲ.

"ಹೀಗೆ ಬೇರೆ ಆಗೋದಿಕ್ಕೆ, ನಾನು ಮನೇಲ್ಲಿ ಇಲ್ಲದೆ ಇರೋ ಹೊತ್ತಿಗೇ ಕಾಯ್ತಾ ಇದ್ದೆಯೇನೋ ಬೇಕೂಫ !"

ನಾಗಪ್ಪನವರ ಭರ್ತ್ಸನೆ ಕಿಟ್ಟುವನ್ನು ಉಡುಗಿಸಿತು. ಸರಸುವಿನ ಸಹನೆಯಂತೂ ಮೀರುತ್ತಾ ಬಂದಿತ್ತು. ಧಗಧಗನೆ ಉರಿಯುತ್ತಿದ್ದ

ಒಲೆಯ ಹಾಗೆಯೇ ಅವಳ ಹೊಟ್ಟೆಯಲ್ಲಿ ಕಿಚ್ಚು ಉರಿಯುತ್ತಿತ್ತು. ಅನ್ನದ ಗಂಜಿ ಕೊತಕೊತನೆ ಕುದಿಯುತ್ತಿದ್ದಂತೆಯೇ ಅವಳ ಮನಸ್ಸೂ ಕುದಿಯುತ್ತಿತ್ತು.

"ಐವತ್ತೋ—ಅರವತ್ತೋ ಸಂಬಳ ಬರೋ ಚಾಕರಿ ಖಾಯಂ ಆಯಿತು. ಹೆಂಡತಿ ಅನ್ನೋಳು ಪಕ್ಕಕ್ಕೆ ಬಂದಳು. ಇನ್ನೇನಾಗ ಬೇಕಾಗಿದೆ ಪಂಗರಾಯನಿಗೆ?"

"ಇಷ್ಟಕ್ಕೇ ಎಲ್ಲಿ ಮುಗೀತು? ಇನ್ನೂ ಆಗಬೇಕಾಗಿದೆ—ಮನೆ ತುಂಬ ಮಕ್ಕಳು. ಅದರಲ್ಲೂ ಗಂಡು ಮಕ್ಕಳು! ಅವರ ತಾತನ ಕೈ ತುಂಬ ವರದಕ್ಷಿಣೆ ತುಂಬಿಸೋಕೆ!!"

ನಾಚಿಕೆ ಬಿಟ್ಟು, ಕೆರಳಿದ ಸರಸು ಮುಂದಿನ ಮಾರಣ ಹೋಮಕ್ಕೆ ಕಡ್ಡಿ ಕೊರೆದಿಟ್ಟಳು.

'ಕಂಡವರ ಮನೆ ಹುಡುಗೀಂತ ನಾನೂ ಸುಮ್ಮನೇನೇ ಇದ್ದೆ. ನೀನೂ ಇಷ್ಟು ಹೇಳ್ಕೊಂಡು ಬಿಟ್ಟೆಯಾ?"

"ಪೆಚಿಕ್ಕೊಂಡಿದ್ದರೆ ಬೆಚ್ಚಗೆ ಹೊದ್ದುಕೊಂಡು ಹಾಯಾಗಿ ಇರ್ತಿದ್ದೆ. ಹುಚ್ಚುಚ್ಚಾಗಿ ಮಾತಾಡೋರ ಹತ್ತಿರ ಯಾಕಿಷ್ಟು ಪಂಚಾಯ್ತಿ ಮಾಡಬೇಕಾಗಿತ್ತು?"

"ಶನಿ ಹಾಗೆ ಗಂಟು ಬಿದ್ದೆಯಲ್ಲೆ ನನ್ನ ಮಗನಿಗೆ."

"ಶನಿ ಹಾಗೆ ಬಂದು ಗಂಟು ಹಾಕಿದರಲ್ಲ ನನ್ನ ಕುತ್ತಿಗೇಗೆ—ರಘಣ ದಕ್ಷಿಣಾಂತ ನಮ್ಮಪ್ಪ ಎಣಿಸಿದ ದುಡ್ಡಿನಾಸೇಗೆ"

"ಮುಚ್ಚು ಬಾಯಿ, ಹೆಚ್ಚು ಮಾತಾಡಬೇಡ"

ನಾಗಪ್ಪನವರು ಕೂಗಿಕೊಂಡರು.

"ಇಂಥ ಪೆದರಿಕೇಗೆಲ್ಲಾ ಬೆಚ್ಚಿ ಬೀಳೋಲ್ಲ. ಜ್ಞಾನ ಇಟ್ಕೊಂಡು ಮಾತನಾಡಿ"

ನಾಗಪ್ಪನವರು ತನ್ನ ಮಾವನೆಂಬುದನ್ನು ಸರಸು ಮರೆತು ಎಷ್ಟೋ ಹೊತ್ತಾಗಿತ್ತು!

"ಕೊಟ್ಟರೆ ನೋಡು ಕಪಾಳಕ್ಕೆ....ದವಡೆ ಹಲ್ಲೆಲ್ಲಾ ಉದುರಿ ಹೋಗಬೇಕು." ಎನ್ನುತ್ತಾ ನಾಗಪ್ಪನವರು ಹೊಡೆಯಲು ಕೈ ಎತ್ತಿದ್ದರು. ಸರಸು ಹೆದರದೆ, ಇನ್ನಷ್ಟು ಮುಂದಕ್ಕೆ ಬಂದು:

"ಎಲ್ಲಿ ಹೊಡೀರಿ ನೋಡೋಣ. ಬಿಟ್ರೆ ಸಿಕ್ಕಿದ್ದೀನಿ ಅಂತ ತಿಳುಕೊಂಡ್ರಾ?"--ಎಂದಳು. ನಾಗಪ್ಪನವರಿಗೆ ಅವಳ ಕೆಚ್ಚೆದೆಯನ್ನು ಕಂಡು ದಿಕ್ಕುತೋಚದಾಯಿತು ಎರಡು ನಿಮಿಷಗಳ ನಂತರ ಕಿಟ್ಟುವಿನ ಕಡೆ ತಿರುಗಿ—

"ಎದ್ದು ಬಾರೋ, ಇವಳ ಮುದ್ದು ಮುಖ ನೋಡಿಕೊಂಡು, ಮಂಕನಹಾಗೆ ಕೂತ್ಕೋಬೇಡ" ಎಂದರು.

"ಎದ್ದು ಹೋಗೋದಿಕ್ಕೆ ಬಿಟ್ಟುಬಿಡೋಷ್ಟು ಪೆದ್ದಲ್ಲ ನಾನು. ಸಾವಿರದಿನ್ನೂರು ನಿಮ್ದ್ದೇ ಮೇಲೆ ಸುರಿದು. ಇವರ ಕೈಲಿ ಈ ಬಿಕರೇ ಅಗಲದ ಬಿಲ್ಲೇ ಕಟ್ಟಿಸಿಕೊಂಡಿರೋದು ಬಿಟ್ಟೇ ಅಲ್ಲ!" ಎನ್ನುತ್ತಾ ಸರಸು ತನ್ನ ಮಾಂಗಲ್ಯವನ್ನು ತೋರಿಸಿದಳು. ಉಪಾಯಗಾಣದೆ ಮೆಲ್ಲಮೆಲ್ಲನೆ ಹಿಂದಕ್ಕೆ ಸರಿಯುತ್ತ ನಾಗಪ್ಪನವರು—"ಈ ಮುದ್ಸೂರು ಮಾರಿ ನೆಗೆದುಬಿದ್ದ ದಿನ ಹಾಲು ಕುಡಿದು ಹಾಯಾಗಿರ್ತೀನಿ" ಎನ್ನುತ್ತಾ ಕೋಣೆಯ ಹೊಸಲು ದಾಟಿದೊಡನೆ, ಸರಸು—"ಹಾಗಂದೋರೇ ಮೊದಲು ನೆಗೆದುಬಿದ್ದುಹೋಗಲಿ"-ಎಂದು ಪಟಾರನೆ ಬಾಗಿಲು ಮುಚ್ಚಿಕೊಂಡಳು.

## ೧೫

ಜುಲೈ ತಿಂಗಳು ಪ್ರಾರಂಭವಾಗಿ ಒಂದು ವಾರ ಕಳೆದಿತ್ತು. ಕಾಲೇಜು ಬಾಗಿಲು ತೆಗೆಯುವ ದಿನಗಳು ಬೇಗ ಬೇಗ ಬರುತ್ತಿದ್ದವು. ಶಾಮು ತನ್ನ ಹೈಸ್ಕೂಲು ಗೆಳೆಯರೊಡನೆ ಬೆಂಗಳೂರಿಗೆ ಹೋಗಿ, ಶ್ರೀರಾಮಪುರದಲ್ಲಿ ಒಂದು ಸಣ್ಣ ಕೋಣೆಯನ್ನು ಮೂರು ರೂಪಾಯಿ ಬಾಡಿಗೆಗೆ ಗೊತ್ತುಮಾಡಿಕೊಂಡು ಬಂದಿದ್ದ. ತಾನೇ ಅಡಿಗೆ ಮಾಡಿಕೊಂಡು, ಕಾಲೇಜಿಗೆ ಹೋಗುವುದೆಂದು ನಿರ್ಧರಿಸಿದ್ದುದರಿಂದ, ಅಕ್ಕಿ-ಬೇಳೆ ಮೊದಲಾದ ಅಡಿಗೆ ಪದಾರ್ಥಗಳನ್ನು ಅಗ್ರಹಾರದಿಂದಲೇ ಒದಗಿಸಿಕೊಳ್ಳಬೇಕಾದುದು ಅನಿವಾರ್ಯವಾಗಿತ್ತು. ಕಿಟ್ಟುವಿನೊಡನೆಯೂ ಏಕಾಂತದಲ್ಲಿ ಮಾತನಾಡಿ,

ಪ್ರತಿತಿಂಗಳೂ ಕೊನೆಯಪಕ್ಷ ಹತ್ತು ರೂಪಾಯಿಗಳನ್ನಾದರೂ ಕಳುಹಿಸಬೇಕೆಂದು ಅವನನ್ನು ಒಪ್ಪಿಸಿದ್ದ. ನಾಣಿಯಂತೂ ಸ್ವಯಂ ಮುಂದೆ ಬಂದು, ತನ್ನ ಕೈಲಾದಷ್ಟು ಹಣವನ್ನು ಕಳುಹಿಸುವೆನೆಂದು ಹೇಳಿದ್ದರಿಂದ ರಾಮುವಿಗೆ ಕಾಲೇಜಿನಲ್ಲಿ ಓದುವ ಧೈರ್ಯ ಬಂದಿತ್ತು.

ವೆಂಕಮ್ಮ ಮಗನಿಗೆ ಬೇಕಾದ ಸಣ್ಣ ಪುಟ್ಟ ಪಾತ್ರೆಗಳನ್ನೂ ಅಡಿಗೆ ಸಾಮಗ್ರಿಗಳನ್ನೂ ಚೀಲದಲ್ಲಿ ತುಂಬಿಸಿದಳು. ರಾಮುವಿಗೆ ತುಂಬ ಇಷ್ಟವಾದ ಅವಲಕ್ಕಿ, ಹೇರಳೆಕಾಯಿಯ ಉಪ್ಪಿನಕಾಯಿಗಳನ್ನು ಹೆಚ್ಚುಹೆಚ್ಚಾಗಿ ಕಟ್ಟಿ ಬುಟ್ಟಿಗೆ ಇಟ್ಟಳು.

ನಾಗಪ್ಪನವರಂತೂ ಅವನ ಓದಿನ ವಿಷಯದಲ್ಲಾಗಲಿ, ಬೆಂಗಳೂರಿಗೆ ಹೋಗುವ ವಿಷಯದಲ್ಲಾಗಲಿ ಯಾವ ಆಸಕ್ತಿಯನ್ನೂ ತೋರದೆ ಸುಮ್ಮನಿದ್ದರು.

"ಅಣ್ಣ, ನಾನು ಹೋಗಿಬರುತ್ತೇನೆ" ಎಂದು ರಾಮು ತಂದೆಯ ಮುಂದೆ ವಿನಯದ ಮೂರ್ತಿಯಾಗಿ ನಿಂತು ನುಡಿದಾಗ—

"ಹ್ಞಂ" ಎಂದಷ್ಟೇ ಹೇಳಿ ನಾಗಪ್ಪನವರು ಮುಖ ತಿರುಗಿಸಿಕೊಂಡರು. ತಾನು ಓದುವುದು ತಂದೆಗೆ ಸ್ವಲ್ಪವೂ ಇಷ್ಟವಿಲ್ಲವೆಂಬುದು ರಾಮುವಿಗೆ ತಿಳಿದ ವಿಷಯವೇ ಆಗಿತ್ತು.

ಬಾಗಿಲಿನವರೆಗೂ ಬಂದ ತಾಯಿ—"ಅಡಿಗೆ ಮಾಡಿಕೊಳ್ಳುವುದಕ್ಕೆ ಬೇಜಾರು ಅಂತ ಉಪವಾಸವಿರಬೇಡಪ್ಪ. ರಾತ್ರಿಯೆಲ್ಲಾ ಓದುತ್ತಾ ಕೂತು ನಿದ್ದೆ ಕೆಡಬೇಡ ಎಲ್ಲದರಲ್ಲೂ ಮಿತವಾಗಿರು"

"ಆಗಲಮ್ಮ"

"ಸಾಮಾನು ಏನಾದರೂ ಬೇಕಾದರೆ, ಶನಿವಾರ-ಭಾನುವಾರ ಬಂದು ತೆಗೆದುಕೊಂಡು ಹೋಗು. ಅಥವಾ ಯಾರ ಕೈಯ್ಯಲ್ಲಾದರೂ ಹೇಳಿ ಕಳುಹಿಸು"

"ಹ್ಞು"

"ಬಿಡುವಾದಾಗ ಮಲ್ಲೇಶ್ವರದ ಕಡೆಗೆ ಹೋಗಿ, ಸುಂದರುವನ್ನು ನೋಡಿಕೊಂಡು ಬಾ"

"ಆಗಲಮ್ಮ. ಹೊತ್ತಾಗುತ್ತಾ ಬಂತು ರೈಲಿಗೆ, ನಾನು ಹೋಗಿ ಬರುತ್ತೇನಮ್ಮ"

"ಒಳ್ಳೆಯದಪ್ಪ, ಹೋಗಿ ಬಾ. ದೇವರು ನಿನ್ನ ಜೊತೆಯಲ್ಲಿಯೇ ಇರುತ್ತಾನೆ." ಎನ್ನುತ್ತಾ ಬೀಳ್ಕೊಟ್ಟರು. ನಾಣಿಯೇ ರೈಲ್ವೆ ಸ್ಟೇಷನ್ನಿಗೆ ಹೋಗಿ, ಶಾಮುವನ್ನು ರೈಲು ಹತ್ತಿಸಿ, ತಾನು ಆಗಾಗ ಮಿಗಿಸಿಕೊಂಡಿದ್ದ ಹತ್ತು ರೂಪಾಯಿಗಳನ್ನು ಅವನ ಕೈಗಿತ್ತು ಹಿಂತಿರುಗಿದ.

ಅದೇ ಸಂಜೆ ನಾಲ್ಕು ಗಂಟೆಯ ವೇಳೆಗೆ ನಾಗಪ್ಪನವರ ಮನೆಯ ಮುಂದೆ ಒಂದು ಕುದುರೆಗಾಡಿ ಬಂದು ನಿಂತಿತು. ಯಾರು ಬಂದರೋ ಈ ಬಡವನ ಮನೆಗೆ ಎಂದುಕೊಳ್ಳುತ್ತಾ ನಾಗಪ್ಪನವರು ಹೊರಗೆ ಬಂದು ನೋಡುವಷ್ಟರಲ್ಲಿ ಅಮಲ್ದಾರರೂ, ಶ್ರೀಕಂಠಯ್ಯನವರೂ ಮತ್ತು ಅವರ ಪತ್ನಿಯೂ ಕೆಳಗಿಳಿದರು. ನಾಗಪ್ಪನವರಿಗೆ ಅವರನ್ನೆಲ್ಲಾ ಕಂಡು ತುಂಬ ಆಶ್ಚರ್ಯವಾಗಿತ್ತು. ಮುಗುಳುನಗೆ ನಗುತ್ತಾ ಕೈಮುಗಿದು, ಅಮಲ್ದಾರರ ಕಡೆಗೆ ತಿರುಗಿ—

"ಸ್ವಾಮಿಯವರು ದಯಮಾಡಿಸುತ್ತಿರುವುದು ಈ ಬಡವನ ಮನೆಗೆ ಭಾಗ್ಯ ಬಂದ ಹಾಗಾಯಿತು." ಎಂದರು ನಾಗಪ್ಪ. ಮೂವರೂ ಅಂಗಳಕ್ಕೆ ಬಂದು ಚಾಪೆಯಮೇಲೆ ಕುಳಿತರು.

"ನಿಮ್ಮ ಕುಟುಂಬ ಎಲ್ಲಿ?"—ಶ್ರೀಕಂಠಯ್ಯನವರು ಕೇಳಿದರು.

"ಒಳಗಿದ್ದಾಳೆ" ಎನ್ನುತ್ತಾ ನಾಗಪ್ಪನವರು ಎದ್ದು ಹೋಗಿ, ವೆಂಕಮ್ಮನಿಗೆ ಸುದ್ದಿ ತಿಳಿಸಿದರು. ಆಕೆಗೆ ಸಂತೋಷ ಹೊಳೆದು, ಅಂಗಳಕ್ಕೆ ಬಂದು, ಶ್ರೀಕಂಠಯ್ಯನವರ ಕುಟುಂಬ ಅಲಮೇಲಮ್ಮನನ್ನು ಒಳಗೆ ಕರೆದುಕೊಂಡು ಹೋದರು.

"ಮುಖ್ಯಸ್ಥರೇ ಎದ್ದುಹೋದರೆ, ನಾವು ಬಂದ ಉದ್ದೇಶ ಮಾತನಾಡುವುದು ಹೇಗೆ?" ಎಂದರು ಅಮಲ್ದಾರರು. ವೆಂಕಮ್ಮನೂ ಅಲಮೇಲಮ್ಮನೂ ಬಾಗಿಲ ಬಳಿಯೇ ನಿಂತು ನಾಚಿಕೆ ಬೆರೆತ ನಸುನಗೆಯನ್ನು ಬೀರಿದರು. ಮೆಲ್ಲನಿಯಲ್ಲಿ ಶಾಂತುವನ್ನು ಕರೆದು ವೆಂಕಮ್ಮ, ಕಾಫಿ ಮಾಡಿಕೊಂಡು ಬರಲು, ಅಲಮೇಲಮ್ಮನಿಗೂ ಕೇಳಿಸದಂತೆ ಅವಳ ಕಿವಿಯಲ್ಲಿ ಹೇಳಿದಳು.

"ನಾವು ನೆನಸುವುದೊಂದಾದರೆ ನಡೆಯುವುದೇ ಒಂದು........" ಮುಂದಿನ ಮಾತಿಗೆ ಪೀಠಿಕೆ ಹಾಕಿದರು ಶ್ರೀಕಂಠಯ್ಯ.

"ಯಾವಾಗಲೂ ಹಾಗೆಯೇ!" ನಾಗಪ್ಪನವರು ನಗುತ್ತಾ ನುಡಿದರು.

"ನಮ್ಮ ಹುಡುಗಿ ನಿಮ್ಮ ಮನೆ ಸೇರುವ ಪುಣ್ಯ ಒಂದುಸಾರಿ ಕಳೆದುಕೊಂಡಳು. ಅದು ನಮ್ಮ ತಪ್ಪೇ-ಒಪ್ಪಿಕೊಳ್ಳುತ್ತೇನೆ. ಅನಾನುಕೂಲದಿಂದ ಸಮಯಕ್ಕೆ ಸರಿಯಾಗಿ ಕಾಗದ ಬರೆಯದೆ ಸಂದರ್ಭ ಕಳೆದುಕೊಂಡೆವು. ಇನ್ನೂ ಒಂದು ಅವಕಾಶ ಇದೆಯೆಂದುಕೊಂಡು ಈಗ ಬಂದಿದ್ದೇವೆ."

ನಮ್ರತೆಯೇ ಮೂರ್ತಿವೆತ್ತಂತೆ ಶ್ರೀಕಂಠಯ್ಯನವರು ನುಡಿದರು.

"ನಾವು ಬಂದ ಕೆಲಸ ಮಾಡಿಕೊಂಡೇ ಹೋಗಬೇಕು ಅಂತ ದೃಢಮಾಡಿಕೊಂಡು ಬಂದಿದ್ದೇವೆ ನಾಗಪ್ಪನವರೆ"

ಮಂದಹಾಸದ ಮಾಧುರ್ಯಕ್ಕೆ ಅಧಿಕಾರದ ಧ್ವನಿ ಬೆರಸಿ ಅಮಲ್ದಾರರು ನುಡಿದರು.

"ಕಿಟ್ಟುವಿಗೆ ಮದುವೆಯಾದ ಸಂಗತಿ ತಮಗೆ ತಿಳಿದೇ ಇದೆ. ಯುಗಾದಿಗೆ ಮುಂಚೆಯೇ ಮಾಡಬೇಕೆಂಬುದು ನಮ್ಮ ಸಂಕಲ್ಪವಾಗಿತ್ತು. ಹೇಗೋ ಮಾಡಿ ಮುಗಿಸಿಬಿಟ್ಟೆವು."

"ಇನ್ನೂ ಒಬ್ಬ ಇದ್ದಾನಲ್ಲವೆ? ಲಕ್ಷ್ಮೀನಾರಾಯಣ ಅಂತ?"

"ಹೌದು, ಇದ್ದಾನೆ. ನಾವು 'ನಾಣಿ' ಎಂತಲೇ ಅವನನ್ನ ಕರೆಯೋದು ಇಲ್ಲೇ ಜಡಿಗೇನಹಳ್ಳಿ ಎನ್.ಟಿ.ಎಂ ಸ್ಕೂಲಿನಲ್ಲಿ ಇಂಗ್ಲಿಷ್ ಮೇಷ್ಟ್ರಾಗಿದ್ದಾನೆ. ಖಾಯಂ ಕೆಲಸ. ಈಗ ನಲವತ್ತೆಂಟು ಪ್ಲಸ್ ಹದಿನೆಂಟು ಬರುತ್ತಿದೆ. ಅವನಿಗೂ ಎಸ್.ಎಸ್.ಎಲ್.ಸಿ ಆಗಿದೆ. ವಯಸ್ಸು ಇಪ್ಪತ್ತುಮೂರಾಯಿತು. ಎಲ್ಲಾ ನಮ್ಮ ಕಿಟ್ಟುವಿನ ಹಾಗೆಯೇ ಇದ್ದಾನೆ. ಆದರೆ ಇವನ ಹಾಗೆ ಕುಳ್ಳಲ್ಲ. ಉದ್ದಕ್ಕೆ-ಬೆಳ್ಳಗೆ ಇದ್ದಾನೆ."

ನಾಗಪ್ಪನವರು ತಮ್ಮ ಮಗನನ್ನು ವರ್ಣಿಸಿದರು.

"ಇದೇ ಅಂಗಳದಲ್ಲಿ ಕುಳಿತು ಮಾತಾಡಿದ ಮೊದಲ ಸಂಬಂಧವಂತೂ ಆಗಲಿಲ್ಲ. ಈಗ ಈ ಹುಡುಗನಿಗಾದರೂ ನಮ್ಮ ಲಲಿತುವನ್ನು ನೀವು ತಂದುಕೊಳ್ಳಬೇಕು."

"ಹೌದು ನಾಗಪ್ಪನವರೆ, ನೀವು ಒಪ್ಪಿಕೊಳ್ಳಲೇಬೇಕು ಈ

ಸಂಬಂಧಕ್ಕೆ "

ಅಮಲ್ದಾರರ ಮಾತಿಗೆ ಶ್ರೀಕಂಠಯ್ಯನವರು ದನಿ ಗೂಡಿಸಿದರು.

"ಆಗಲಿ ಸ್ವಾಮಿ, ಮಾಡಿಕೊಳ್ಳುವ ಹುಡುಗ–ಒಪ್ಪಿದರೆ ಯಾಕಾಗಬಾರದು?"

ನಾಗಪ್ಪನವರ ಮಾತು ಅನಾಯಾಸವಾಗಿಯೇ ಇತ್ತು

"ನಾವು ಈ ದಿನವೇ ಲಗ್ನಪತ್ರಿಕೆ ಮಾಡಿಸಿಕೊಂಡು ಹೋಗುವುದಕ್ಕೆ ಸಿದ್ಧವಾಗಿ ಬಂದಿದ್ದೇವೆ. ಜಾತಕ ಇಲ್ಲೇ ಯಾರಿಗಾದರೂ ತೋರಿಸೋಣ. ಕೊಡುವುದನ್ನೆಲ್ಲಾ ಕೊಟ್ಟು, ಯಾರಿಗೂ ಮನಸ್ತಾಪ ಬಾರದಹಾಗೆ ಮದುವೆ ಮಾಡಿಕೊಡುತ್ತೇವೆ." ಎಂದರು ಶ್ರೀಕಂಠಯ್ಯ.

ಅಷ್ಟರಲ್ಲಿ ಸುಮಿತ್ರೆ ಕಾಫಿ ಸಮಾರಾಧನೆ ಮಾಡಿದಳು.

ಅಮಲ್ದಾರರು ತಮ್ಮ ಕಿಸೆ ಗಡಿಯಾರವನ್ನು ನೋಡಿಕೊಂಡು

"ಐದು ಗಂಟೆಯಾಯಿತಲ್ಲ, ಹುಡುಗ ಬರುವ ಹೊತ್ತಾಗಲಿಲ್ಲವೆ?"

"ಇನ್ನೂ ಅರ್ಧ ಗಂಟೆಯಾಗುತ್ತದೆ. ಎರಡು ಮೈಲಿ ದೂರದಿಂದ ನಡೆದುಕೊಂಡು ಬರಬೇಕಲ್ಲ?"

"ದಿನಾ ಹೀಗೆ ನಡೆದರೆ ಕಾಲು ಬಾಳುತ್ತದೆಯೆ? ಕಿಟ್ಟು ದಿನವಹಿ ಐದು ಮೈಲಿ ನಡೆದು ಕೋರ್ಟಿಗೆ ಬಂದು ಹೋಗುತ್ತಾನೆ ಈ ಹುಡುಗನೂ ಎರಡೆರಡು ಮೈಲಿ ಹೋಗಿ ಬರಬೇಕಾಗುತ್ತದೆ. ಇಬ್ಬರಿಗೂ ಒಂದೊಂದು ಬೈಸಿಕಲ್ಲು ತೆಗೆದುಕೊಡೀ ನಾಗಪ್ಪನವರೆ— ಅನುಕೂಲವಾಗುತ್ತದೆ."

ಅಮಲ್ದಾರರ ಸಲಹೆಗೆ ನಾಗಪ್ಪನವರು ಉತ್ತರಿಸದೆ ಸುಮ್ಮನಾದರು. ಅದು ಹಣ ಖರ್ಚಾಗುವ ಸಂಗತಿಯಲ್ಲವೆ?

ಮಾತು ಮೇರೆಯಿಲ್ಲದೆ ನಾಗಿರುವಾಗ ನಾಣಿ ಒಳಗೆ ಬಂದ. ಅಂಗಳದಲ್ಲಿಯೇ ಕೋಟು ಬಿಚ್ಚಿಟ್ಟು, ಕೈ ಕಾಲು ತೊಳೆದು ಬರಲು ಹೋದ.

"ಹುಡುಗ ಲಕ್ಷಣವಾಗಿದ್ದಾನೆ?" ಎಂದರು ಅಮಲ್ದಾರರು.

ಕಾಫಿ ಕುಡಿದು ನಾಣಿ ಹೊರಗೆ ಹೊರಡಲನುವಾಗುತ್ತಿರುವಾಗ

"ಇಲ್ಲಿ ಬಾ ನಾಣಿ" ಎಂದು ನಾಗಪ್ಪನವರು ತಮ್ಮ ಅಪರೂಪದ ಮೃದುವಾಣಿಯಲ್ಲಿ ಕರೆದರು.

"ಇಲ್ಲೇ ಬಾಪ್ಪ ಕೂತುಕೊ"

ಅಮಲ್ದಾರರು ಅಮೃತದಷ್ಟು ನವಿಯಾಗಿ ಉಪಚಾರ ಹೇಳಿದರು.

ನಾಗಪ್ಪನವರು ನಾಲ್ಕೇ ಮಾತಿನಲ್ಲಿ ನಾಣಿಗೆ ಸಂಗತಿಯನ್ನು ವಿವರಿಸಿದರು.

"ಆವತ್ತಿನ ದಿನ ಹುಡುಗಿಯನ್ನು ತೋರಿಸುವುದಕ್ಕೆ ಬಂದಿದ್ದಾಗ, ನೀನೂ ಇದ್ದೆಯಲ್ಲವೇನಪ್ಪ ?"

ಶ್ರೀಕಂಠಯ್ಯನವರ ಮಾತಿಗೆ 'ಹ್ಞೂ' ಎಂದ ನಾಣಿ.

"ಒಪ್ಪಿತು ತಾನೆ ?"

"ನಮ್ಮ ಕಿಟ್ಟಣ್ಣನಿಗೆ ಒಪ್ಪಿತ್ತು"

ನಾಣಿಯ ಮಾತು ಖಾರವಾಗಿತ್ತು.

"ಅವನಿಗಲ್ಲ ನಾಣಿ, ನಿನಗೆ....?" ಎಂದರು ನಾಗಪ್ಪ.

"ನನಗೇಕಣ್ಣಾ ?"

"ಈಗ ಆ ಹುಡುಗಿಯನ್ನ ನಿನಗೆ ಕೊಡಬೇಕೂಂತ ಬಂದಿದ್ದಾರೆ."

"ನನಗೆ ಇಷ್ಟವಿಲ್ಲಣ್ಣಾ." ಒಂದೇ ಮಾತಿನಲ್ಲಿ ತಿಳಿಸಿಬಿಟ್ಟ ನಾಣಿ.

"ಹಾಗಂದರೆ ಹೇಗೋ? ತಕ್ಕವಯಸ್ಸಿನಲ್ಲಿ ಮದುವೆ ಆಗಬೇಕು"

"ಆಗಲಿ, ಮಾಡಿಕೊಳ್ಳೋಣ."

"ಈ ಹುಡುಗಿಯನ್ನೇ ಮಾಡಿಕೊಳ್ಳುತ್ತೀ ತಾನೆ ?"

ನಾಣಿ ಎರಡು ನಿಮಿಷ ಯೋಚಿಸಿದ. ಬಳಸಿ ಮಾತನಾಡುವುದು ಪ್ರಯೋಜನವಿಲ್ಲವೆಂದುಕೊಂಡು "ಇಲ್ಲಣ್ಣ. ನನಗೆ ಈ ಹುಡುಗಿ ಬೇಡ." ಎಂದು ನಿಷ್ಠುರವಾಗಿ ನುಡಿದು ಎದ್ದುಬಿಟ್ಟ.

ಎಲ್ಲರೂ ಅವನ ಕಡೆಯೇ ನೋಡುತ್ತಿದ್ದರು

"ಹುಡುಗನನ್ನು ನೀವು ಹೇಗಾದರೂ ಒಪ್ಪಿಸಬೇಕು ನಾಗಪ್ಪನವರೆ !"

ಅಮಲ್ದಾರರ ಮಾತಿಗೆ ಪ್ರತಿ ಹೇಳುವಂತಿರಲಿಲ್ಲ. ನಾಗಪ್ಪನವರು ನಾಣಿಯನ್ನು ಹಿಂಬಾಲಿಸಿದರು. ಜಗುಲಿಯ ಬಳಿಯೇ ಅವನನ್ನು ನಿಲ್ಲಿಸಿಕೊಂಡು ಪರಿಪರಿಯಾಗಿ ಬೇಡಿಕೊಂಡರು.

"ನನಗೆ ಆ ಹುಡುಗಿ ಇಷ್ಟವಿಲ್ಲಣ್ಣ. ನಾನು ಸೀತಕ್ಕನ ಮಗಳು ಶಾಂತುವನ್ನೇ ಮಾಡಿಕೊಳ್ಳುತ್ತೇನೆ."

"ಆ ಹುಡುಗೀಗಿಂತ ಚೆನ್ನಾಗಿದ್ದಾಳೇನೋ ಈ ಶಾಂತು ರತೀದೇವಿ ಇದ್ದಹಾಗೆ ಇದ್ದಾಳಲ್ಲೋ ಶ್ರೀಕಂಠಯ್ಯನವರ ಮಗಳು"

"ಅವಳು ಹೇಗಾದರೂ ಇರಲಣ್ಣ. ನಾನು ಶಾಂತುವನ್ನೇ ಮಾಡಿಕೊಳ್ಳುತ್ತೇನೆ."

"ಸೀತಕ್ಕ ಗಂಟಿಟ್ಟುಕೊಂಡಿದ್ದಾಳೇನೋ-ನಾವು ಕೇಳಿದಷ್ಟು ವರದಕ್ಷಿಣೆ ಕೊಡೋದಿಕ್ಕೆ ?"

"ನನಗೇನೂ ವರದಕ್ಷಿಣೆ ಬೇಡ."

"ನಿನಗೆ ಬೇಡ. ನಮಗೆ ಬೇಕು."

"ಮದುವೆ ಮಾಡಿಕೊಳ್ಳೋನು ನಾನು ನಿಮಗ್ಯಾಕೆ ಕೊಡಬೇಕು ವರದಕ್ಷಿಣೆ ?"

"'ನೀನು' ಅನ್ನೋನು ಎಲ್ಲಿಂದ ಬಂದೆಯೊ ? ನಾವು ಹೆತ್ತು ಬೆಳಸಿದ್ದಕ್ಕೆ ತಾನೆ 'ನೀನು" ಅಂತ ಇರೋದು. ಅನ್ನಕೊಟ್ಟು, ಬಟ್ಟೆ ಕೊಟ್ಟು, ವಿದ್ಯೆ ಕಲಿಸಿ, ಬುದ್ಧಿ ಬರಿಸಿ, ಚಿಕ್ಕವನನ್ನ ದೊಡ್ಡವನನ್ನಾಗಿ ಮಾಡಿದೆವಲ್ಲ. ಅದೆಲ್ಲ ಮರೆತುಹೋಯಿತೋ ?"

"ತಂದೆ ಎನ್ನಿಸಿಕೊಂಡಮೇಲೆ ಅಷ್ಟಾದರೂ ಮಾಡಬೇಡವೆ. ಅದು ನಿನ್ನ ಕರ್ತವ್ಯ; ಮಾಡಿದೆ."

"ಅದಕ್ಕೋಸ್ಕರವೇ ನಾನು ವರದಕ್ಷಿಣೆ, ಕೇಳುತ್ತೇನೆ"

"ನನಗೆ ವರದಕ್ಷಿಣೆಯೂ ಬೇಡ; ಆ ಹುಡುಗಿಯೂ ಬೇಡ."

"ವರದಕ್ಷಿಣೆ ಬೇಡ ಅನ್ನೋದಿಕ್ಕೆ ನೀನು ಯಾರೋ ?"

"ನಾನೇ-ಮದುವೆಮಾಡಿಕೊಳ್ಳೋ ಗಂಡು ?"

ಸಿಡಿದು ನುಡಿದ ನಾಣಿ. ನಾಗಪ್ಪನವರು ಮಾತಿನಧಾಟಿ ಬದಲಿಸಿದರು.

"ಹಾಗಾದರೆ ಆ ಹುಡುಗೀನ ಮದುವೆ ಆಗ್ತೀಯೆ ತಾನೆ ?"

"ಇಲ್ಲ........ಇಲ್ಲ........ಇಲ್ಲ !"

"ಹಾಗನ್ನಬಾರದಪ್ಪ ನಾಣಿ."

"ಇಷ್ಟವಿಲ್ಲಣ್ಣ ಆ ಹುಡುಗಿ ನನಗೆ. ಪ್ರೀತಿ ಇಲ್ಲದ ಹುಡುಗೀನ ನಾನು ಹ್ಯಾಗಣ್ಣ ಒಪ್ಪಲಿ ?"

"ಮದುವೆ ಆದಮೇಲೆ ಇಷ್ಟ ತಾನಾಗೆ ಬರುತ್ತದಪ್ಪ. ಪ್ರೀತಿ

ಹುಟ್ಟುತ್ತೆ ಕಣೊ, ಒಪ್ಪಿಕೊಳ್ಳೊ."

"ನಾನು ಶಾಂತೂನ ಬಿಟ್ಟು ಬೇರೆ ಯಾರನ್ನೂ ಮದುವೆ ಆಗೋಲ್ಲಣ್ಣ."

ನಾಣಿಯ ನಿರ್ಧಾರ ನಾಗಪ್ಪನವರನ್ನು ತಟ್ಟನೆ ಬಿಸಿಮಾಡಿತು.

"ಅಯೋಗ್ಯ ನೀನು ಹಿಡಿದಿದ್ದೇ ಹಟವೇನೋ. ನೋಡು, ನಿನಗೆ ಇದೇ ಹುಡುಗೀನ್ನೇ ಕಟ್ಟದಿದ್ದರೆ ನಿನಗೆ ಅಪ್ಪನೇ ಅಲ್ಲ ನಾನು. ಒಳ್ಳೆ ಮಾತಿಗೆ ಈ ಕೆಟ್ಟಕಾಲದಲ್ಲಿ ಬೆಲೆ ಇದೆಯೇನು? ಹಟಮಾರಿ!"

ಒಡಮಿಡಿಗುಟ್ಟಿ, ಚಟಪಟನೆ ನುಡಿದು, ಕಟಕಟನೆ ಹಲ್ಲು ಕಡಿದು ಅಂಗಳಕ್ಕೆ ಬಂದರು ನಾಗಪ್ಪ.

"ಒಪ್ಪಿದನೆ ನಾಗಪ್ಪನವರೆ?"

"ಒಪ್ಪದೆ ಏನು ಮಾಡುತ್ತಾನೆ ಸ್ವಾಮಿ. ಆದರೆ ತಕರಾರು ಬಂದಿದ್ದು ವರದಕ್ಷಿಣೆಯಲ್ಲಿ!" ಎಂದರು ನಾಗಪ್ಪ. ಆ ಮಾತು ಒಳಗಿದ್ದ ವೆಂಕಮ್ಮನಿಗೂ ಕೇಳಿಸಿತು. ಅವಳು ಖಂಡಿತವಾಗಿಯೂ ಇದನ್ನು ನಂಬಲಿಲ್ಲ ನಾಣಿ ಒಪ್ಪಲಿಲ್ಲವೆಂಬುದು ಅವಳಿಗೆ ಖಚಿತವಾಗಿ ತಿಳಿದಿತ್ತು. ತನ್ನ ಗಂಡ ಎಲ್ಲರ ಕಣ್ಣಿಗೂ ಮಣ್ಣೆರಚುತ್ತಿದ್ದಾರೆಂದು ಅವಳ ಹೃದಯ ರೋದಿಸಿತು. ವಿಷಯ ತಿಳಿದ ಶಾಂತು ವಂತೂ ಕಣ್ಣೀರು ಕರೆಯುತ್ತಲೇ ತನ್ನ ಮನೆಗೆ ಓಡಿಹೋಗಿ, ಬಿಕ್ಕಿ ಬಿಕ್ಕಿ ಅತ್ತು ಮೂಕಸಂಕಟವನ್ನು ಅನುಭವಿಸಿದಳು. ಸುಮಿತ್ರೆಯೂ ಅಂಗಳದಲ್ಲಿ ಕುಳಿತಿದ್ದವರೆಡೆಗೆ ತಿರಸ್ಕಾರದ ದೃಷ್ಟಿ ಬೀರಿ ಸೀತಕ್ಕನ ಮನೆಗೆ ಹೋದಳು.

"ವರದಕ್ಷಿಣೆ ವಿಚಾರ ಮೊದಲೇ ಹೇಳಿದ್ದೆವಲ್ಲ—ಎಂಟು ನೂರು ಕೊಡುತ್ತೇವೆ ಅಂತ"—ಶ್ರೀಕಂಠಯ್ಯನವರು ಹೇಳಿದರು.

"ಸಾವಿರಕ್ಕೆ ಕಾಸು ಕಡಿಮೆಯಾದರೂ, ಒಪ್ಪುವುದಿಲ್ಲ ಅನ್ನುತ್ತಾನೆ ಸ್ವಾಮಿ ಹುಡುಗ"

"ಆಗಲಿ, ಲಗ್ನಪತ್ರಿಕೆಗೆ ಏರ್ಪಾಟು ಮಾಡಿಬಿಡಿ" ಎಂದರು ಅಮಲ್ದಾರರು. ಶ್ರೀಕಂಠಯ್ಯನವರು—

"ಈಗ ಎಂಟುನೂರು ಕೊಟ್ಟುಬಿಡುತ್ತೇವೆ"

"ಮಿಕ್ಕ ಇನ್ನೂರನ್ನು ನಾನು ನಾಳೆಯೇ ಕಿಟ್ಟುವಿನ ಕೈಯಲ್ಲಿ ಕೊಟ್ಟು ಕಳುಹಿಸುತ್ತೇನೆ" ಎಂದರು ಅಮಲ್ದಾರರು.

ಅದೇ ರಾತ್ರಿಯೇ ಸುಮಾರು ಎಂಟು ಗಂಟೆಯ ವೇಳೆಗೆ— "ಹಾರೋಹಳ್ಳಿಯ ಶ್ರೀಕಂಠಯ್ಯನವರ ಪುತ್ರಿ ಚಿ|| ಸೌ|| ಲಲಿತ ಎಂಬ ಕನ್ಯಾರತ್ನವನ್ನು ಅಗ್ರಹಾರದಲ್ಲಿರುವ ರಿಟೈರ್ಡ್ ಸ್ಕೂಲ್ ಮಾಸ್ಟರ್ ಶ್ರೀ ನಾಗಪ್ಪನವರ ಪುತ್ರ ಚಿ|| ರಾ|| ಲಕ್ಷ್ಮೀನಾರಾಯಣ ನಿಗೆ ಕೊಟ್ಟು ವಿವಾಹ ಮಹೋತ್ಸವವನ್ನು ಹಾರೋಹಳ್ಳಿಯಲ್ಲಿರುವ ಶ್ರೀಕಂಠಯ್ಯನವರ ಸ್ವಗೃಹದಲ್ಲಿ ನಡೆಯುವಂತೆ" ಲಗ್ನಪತ್ರಿಕೆ ಬರೆಯಲ್ಪಟ್ಟಿತು ಅಗ್ರಹಾರದ ಶ್ಯಾನುಭೋಗ-ತಳವಾರರ ದೀವಟಿಗೆಯ ಬೆಳಕಿನಲ್ಲಿ ಅಮಲ್ದಾರರ ಕುದುರೆಗಾಡಿ ಕೋಟೆ ಸೇರಿತು

ನಾಗಪ್ಪನವರಂತೂ ಆ ರಾತ್ರಿ ಸವಿಗನಸು ಕಾಣುತ್ತಾ ಸುಖಪಟ್ಟರು ಆ ಸುಖಕ್ಕೆ ನಾಣಿ-ಶಾಂತು ಅನುಭವಿಸುತ್ತಿದ್ದ ದುಃಖ ಸಮವೆ ?

೧೬

ಅಂದಿನಿಂದ ಶಾಂತು ತನ್ನ ಮನೆ ಬಿಟ್ಟು ಹೊರಗೆ ಬರಲಿಲ್ಲ. ನಾಣಿಯ ಲಗ್ನಪತ್ರಿಕೆಯಾದ ದಿನ ಅವನ ಮುಖ ನೋಡಿದ್ದಳೇ ಹೊರತು, ಆ ನಂತರ ಎಂಟು ದಿನಗಳವರೆಗೆ ಮನೆಯಲ್ಲೇ ಕುಳಿತು ಮನಸಾರೆ ಅತ್ತಿದ್ದಳು. ಮಗಳು ಕಟ್ಟಿಕೊಂಡಿದ್ದ ಕನಸು ಮಣ್ಣು ಗೂಡಿತೆಂದು ಸೀತಕ್ಕನೂ ಸಂಕಟಪಡುತ್ತಿದ್ದಳು. ವೆಂಕಮ್ಮನ ತಪ್ಪೇನೂ ಇಲ್ಲವೆಂಬುದು ಆಕೆಗೆ ತಿಳಿದ ಸಂಗತಿಯಾಗಿದ್ದಿತು. ನಾಣಿಯ ಬಗ್ಗೆಯಂತೂ ಆಕೆಗೆ ತುಂಬ ಕನಿಕರ ಮೂಡಿತ್ತು. ತಂದೆಯ ಮುಂದೆ ಅವನೇನೂ ಮಾಡಲಾರನೆಂಬ ಅಸಹಾಯ ಪರಿಸ್ಥಿತಿಯ ಅರಿವೂ ಆಕೆಗಿತ್ತಾದ್ದರಿಂದ ಸೀತಕ್ಕ ತನ್ನ ದುರ್ವಿಧಿಯನ್ನೇ ದೂರಿ ದಳು. ಸಾವಿರ ವರದಕ್ಷಿಣೆ ಕೊಟ್ಟು, ಸಾವಿರ ಮದುವೆಗೆ ಖರ್ಚು ಮಾಡುವ ಶಕ್ತಿ ತನಗಿಲ್ಲವೆಂಬುದು ಅವಳ ಕೊರಗು. ಹಾಗೆ ಆ ಶಕ್ತಿ ಇದ್ದಿದ್ದರೆ, ಅಷ್ಟು ಹಣ ತನ್ನ ಬಳಿ ಇದ್ದಿದ್ದರೆ ಶಾಂತುವಿನ ಕಣ್ಣ

ನಿಂದ ಒಂದು ಹನಿಯೂ ಉದರದಂತೆ ನೋಡಿಕೊಳ್ಳುತ್ತಿದ್ದೆ—ಎಂದು ಕೊಂಡಳು. ಅವಳ ಕಣ್ಣುಗಳೇ ಹನಿಗೂಡಿ ಹೊಳೆಯಾಗಿ ಹರಿಯುತ್ತಿತ್ತು. ಬಡವರ ಹೊಟ್ಟೆಯಲ್ಲಿ ಹೆಣ್ಣುಮಕ್ಕಳು ಹುಟ್ಟ ಬಾರದೆಂದು ಹಲುಬಿದಳು ಸೀತಕ್ಕ.

"ನನ್ನ ಆಸೆ, ನನ್ನ ಮಗನ ಆಸೆ ಸುಟ್ಟುಹೋಯಿತು ಸೀತು" ಒಂದು ಮಧ್ಯಾಹ್ನ ಸೀತಕ್ಕನ ಮನೆಗೆ ಬಂದ ವೆಂಕಮ್ಮ ಹೇಳಿದಳು.

"ಅಕ್ಕ, ಅದು ನನ್ನ ಹೀನ ಅದೃಷ್ಟ?"

"ನಿನಗೆ ಜ್ಞಾಪಕವಿದೆಯೋ ಸೀತು. ನನ್ನ ಮದುವೆಯಾದ ಹೊಸದರಲ್ಲಿ, ವರದಕ್ಷಿಣೆ ಕೊಡಲಿಲ್ಲವೆಂದು 'ಇವರು, ನನ್ನನ್ನು ಗೋಳು ಹುಯ್ದುಕೊಂಡು ನನ್ನ ತವರಿಗೆ ಕಳಿಸಿದ್ದು; ನಮ್ಮ ಅಣ್ಣ ಚಂದ್ರು ಬಂದು ನಿಮ್ಮ ಮನೆಯಲ್ಲೇ ಇಳಿದುಕೊಂಡು, ಎಂಟುನೂರು ರೂಪಾಯಿ 'ಇವರಿಗೆ' ಕೊಟ್ಟು. ಎರಡು ದಿನದ ಮೇಲೆ ನನ್ನನ್ನು ತೌರಿನಿಂದ ಕರೆದು ತಂದು ಬಿಟ್ಟದ್ದು—ಎಲ್ಲಾ ನೆನಪಿಲ್ಲವೆ ನಿನಗೆ!"

"ಹೌದಕ್ಕ, ಎಲ್ಲಾ ಜ್ಞಾಪಕವಿದೆ ನನಗೆ. ನಿನ್ನ ಹಣೆಯ ಮೇಲೆ ಗಾಯವಾಗಿದ್ದು ಮೊದಲ್ಗೊಂಡು ಎಲ್ಲಾ ಜ್ಞಾಪಕವಿದೆ. ಆಗ ನೀನು ಪಟ್ಟ ಕಷ್ಟ ನೆನಸಿಕೊಂಡರೆ ಮೈ ಜುಮ್ಮೆನ್ನುತ್ತದೆ."

"ಹೆಣ್ಣಾಗಿ ಹುಟ್ಟಿದ ಮೇಲೆ ಎಲ್ಲಾ ಅನುಭವಿಸಬೇಕು ಸೀತು."

"ಆದರೆ ನನ್ನ ಮದುವೆಯಲ್ಲಿ ಇಂಥ ವರದಕ್ಷಿಣೆ ತಕರಾರು ಬರಲಿಲ್ಲ ಅಕ್ಕ. ನಮ್ಮ ಯಜಮಾನರು ನನ್ನನ್ನ ನೋಡುವುದಕ್ಕೆ ಮೊದಲೇ ಇನ್ನೊಂದು ಹುಡುಗಿಯನ್ನು ನೋಡಿದ್ದರಂತೆ. ಮನಸ್ಸೊಪ್ಪಲಿಲ್ಲ. ಬೇಡ ಅಂದುಬಿಟ್ಟರಂತೆ ಅವರ ತಂದೆ — ತಾಯಿಯೂ ಬಲವಂತ ಮಾಡಲಿಲ್ಲವಂತೆ. 'ನಿನಗಿಷ್ಟ ಬಂದವಳನ್ನು ಮಾಡಿಕೋ. ಗಂಡ—ಹೆಂಡತಿ ಸುಖವಾಗಿದ್ದರೆ ಸಾಕು. ನೋಡಿ ಸಂತೋಷಪಡುತ್ತೇವೆ' ಎಂದರಂತೆ. ಆಮೇಲೆ ನನ್ನನ್ನ ನೋಡಿ ಒಪ್ಪಿಕೊಂಡರು. ವರದಕ್ಷಿಣೆಯೂ ಕೇಳಲಿಲ್ಲ, ಗಡಿಯಾರ—ಸೂಟು ಏನೂ ಕೇಳಲಿಲ್ಲ. ಅವರ ತಂದೆ—ತಾಯಿಯೂ ಆ ಪ್ರಸ್ತಾಪ ಮಾಡಲಿಲ್ಲ. ಕೊನೆಗೆ ನಮ್ಮ ತಂದೆಯೇ ಅವರೆಲ್ಲರ ಗುಣಕ್ಕೂ ಸೋತು, ಮೆಚ್ಚಿಕೊಂಡು, ನಮ್ಮ ಯಜಮಾನರು ದೀಪಾವಳಿಗೆ ಬಂದಾಗ, ಒಂದು ಕೈಗಡಿಯಾರ,

ಒಂದು ಸವರನ್ನಿನಲ್ಲಿ ಎರಡು ಉಂಗರ ತಂದುಕೊಟ್ಟರು......."

"ಅಂಥವರು ಎಷ್ಟು ಜನ ಇದ್ದಾರಮ್ಮ ಈಗ?"

"ವರದಕ್ಷಿಣೆ ಅಂತ ಹೆಣ್ಣಿನ ಕಡೆಯಿಂದ ಹಣ ತೆಗೆದುಕೊಂಡು ಉದ್ಧಾರವಾಗಿರೋರು ಯಾರಿದ್ದಾರಕ್ಕ?"

"ಎಷ್ಟು ಉದ್ಧಾರವಾದರೂ ಕೊನೆಗಾಲಕ್ಕೆ ಕೆಟ್ಟದ್ದೇ ಕಟ್ಟಿಟ್ಟ ಬುತ್ತಿ ಸೀತು......." ವೆಂಕಮ್ಮ ನಿಟ್ಟುಸಿರಿಟ್ಟು ನುಡಿದಳು.

"ನಾನು ಶಾಂತು ಮುಖನೋಡಿ ಎಂಟು ದಿನ ಆಯಿತು ಕಣೆ. ಹುಡುಗಿ ಎಷ್ಟು ಅತ್ತಳೋ-ಎಷ್ಟು ಸಂಕಟ ಪಟ್ಟಳೋ?"

"ಅವಳು ಸರಿಯಾಗಿ ಊಟಮಾಡಿ ಎಂಟು ದಿನ ಆಯಿತು ಅಕ್ಕ. ಅತ್ತು ಅತ್ತು ಕಣ್ಣೆಲ್ಲ ಕೆಂಪಗಾಗಿ ಒಳಕ್ಕಿಳಿದು ಹೋಗಿವೆ."

"ಆ ಹುಡುಗಿಯ ಸಂಕಟ ನಾನು ಕಾಣೆನೆ ಸೀತು? ನಾನೂ ಆ ಸಂಕಟ ಅನುಭವಿಸುತ್ತಿದ್ದೇನಮ್ಮ ನಾಣಿಯುಂತೂ ಮಾತನಾಡಿ ಎಷ್ಟೋ ದಿನಗಳಾಗಿ ಹೋಯಿತು ಊಟವೂ ಕಡಿಮೆ ಆಗಿದೆ ಅವನ ಮುಖವಂತೂ ನೋಡುವುದಕ್ಕೇ ಆಗೋಲ್ಲ?" ಎಂದು ವೆಂಕಮ್ಮ ನುಡಿಯುವ ವೇಳೆಗೆ, ಸುಮಿತ್ರೆ ಬಂದು-

"ಅಮ್ಮ, ಅಣ್ಣ ಕರೀತಾರೆ" ಎಂದಳು.

ವೆಂಕಮ್ಮ ಸೀತಕ್ಕನ ಮನೆಯಿಂದ ಹೊರಟು, ಎರಡು ನಿಮಿಷಗಳ ನಂತರ ನಾಗಪ್ಪನವರ ಮುಂದೆ ಪ್ರತ್ಯಕ್ಷಳಾದಳು

"ಒಂದಿಷ್ಟು ಕಾಫಿ ಮಾಡೆ ಬೇಗ. ಮೂರುಗಂಟೆಯಾಯಿತು. ನಾನು ಕೋಟಿಗೆ ಹೋಗಬೇಕು. ಇವತ್ತು ಕಿಟ್ಟೂಗೆ ಸಂಬಳ"

ಎಂದರು ನಾಗಪ್ಪ ಆ ಮಾತು ಕೇಳಿ, ಮುಂದೊದಗುವ ಸಣ್ಣ ಯುದ್ಧವನ್ನು ಊಹಿಸಿಕೊಂಡು ಮೆಲ್ಲನೆ ನಕ್ಕಳು ವೆಂಕಮ್ಮ

ಸ್ವಲ್ಪಹೊತ್ತಿನ ನಂತರ ಕಾಫಿ ಸಿದ್ಧವಾಯಿತು

ಕೋಟು, ರುಮಾಲು ಧರಿಸಿದ ನಾಗಪ್ಪನವರು, ಕಾಫಿ ಕುಡಿದು ಮುಗಿಸಿ ಹೊರಗೆ ಹೊರಟರು. ಬಾರು ಹೆಜ್ಜೆಯಿಡುತ್ತಾ ಕೋಟೆ ಸೇರುವ ವೇಳೆಗೆ ನಾಲ್ಕೂವರೆಯಾಗಿದ್ದಿತು. ಉದ್ದೇಶದಂತೆ ತಾಲ್ಲೂಕು ಕಚೇರಿಗೆ ಹೋಗಿ, ಕಿಟ್ಟುವನ್ನು ಕಂಡು—

"ಪೇ ರೋಲಿಗೆ ರುಜು ಮಾಡಿದೆಯೋನೋ?" ಎಂದು ಕೇಳಿದರು.

"ಇನ್ನೂ ಇಲ್ಲಣ್ಣ. ಈಗ ಹೋಗಿ ತೆಗೆದುಕೊಳ್ಳಬೇಕು."

"ಟ್ರೆಜರಿ ಶಿರಸ್ತೆದಾರರಿಗೆ ಹೇಳಿಬಿಡು ನಾನೇ ತೆಗೆದುಕೊಳ್ಳುತ್ತೇನೆ" ಎಂದರು ನಾಗಪ್ಪ.

ಕಿಟ್ಟುವಿಗೆ ಸರಸುವಿನ ಚಿತ್ರ ಕಣ್ಮುಂದೆ ಸುಳಿಯಿತು. ಆದರೆ ತಂದೆ ಎದುರಿಗೇ ನಿಂತಿದ್ದರು.

"ಒಂದು ಹೇಳಿಬಿಡು ಬಾರೋ" ಎಂದು ಇನ್ನೊಮ್ಮೆ ಹೇಳಿದರು ನಾಗಪ್ಪ. ಉಪಾಯಗಾಣದೆ ಕಿಟ್ಟು ಶಿರಸ್ತೆದಾರರಿಗೆ ಹೇಳಿಬಂದ.

ನಾಗಪ್ಪನವರು ಅವನ ಸಂಬಳ ಅರುವತ್ತಾರು ರೂಪಾಯಿಗಳನ್ನು ಎಣಿಸಿಕೊಂಡು ಹೊರ ಹೊರಟರು. ಕಿಟ್ಟುವೂ ಅವರನ್ನು ಹಿಂಬಾಲಿಸಿದ.

"ನನಗೆ ಅದರಲ್ಲಿ ಹನ್ನೆರಡು ರೂಪಾಯಿ ಬೇಕಾಗಿದೆಯಣ್ಣ."

"ಯಾಕೋ—ಅಷ್ಟೊಂದು ದುಡ್ಡು ?"

"ನನಗೆ ಬೇಕಾಗಿದೆಯಣ್ಣ."

ಮನಸ್ಸಿಲ್ಲದ ಮನಸ್ಸಿನಿಂದ ನಾಗಪ್ಪನವರು ಹನ್ನೆರಡು ರೂಪಾಯಿಗಳನ್ನು ತೆಗೆದುಕೊಟ್ಟರು.

"ಇನ್ನೇನು, ಐದು ಗಂಟೆಯಾಯಿತಲ್ಲ. ನಡಿ, ಹೋಗೋಣ"

"ನೀನು ನಡಿಯಣ್ಣ. ನಾನು ಬರುತ್ತೇನೆ" ಎನ್ನುತ್ತಾ ಕಿಟ್ಟು ತಾಲ್ಲೂಕು ಕಚೇರಿಗೆ ಹಿಂತಿರುಗಿದ. ಅವನಿಗೆ ತುಂಬ ಸಂತೋಷವಾಗಿದ್ದಿತು. ತಂದೆಯಿಂದ ತೆಗೆದುಕೊಂಡಿದ್ದ ಹನ್ನೆರಡು ರೂಪಾಯಿಗಳಲ್ಲಿ ಶಾಮುವಿಗೆ ಹತ್ತು ರೂಪಾಯಿ ಮಣಿಯಾರ್ಡರು ಮಾಡಲು ತನ್ನ ಗೆಳೆಯನ ಕೈಗಿತ್ತು, ಉಳಿದ ಎರಡು ರೂಪಾಯಿಯಲ್ಲಿ—ಒಂದು ಕುಚ್ಚು ಹೂ, ನಾಲ್ಕು ಲಡಿ ಬಣ್ಣದ ಎಂಬ್ರಾಯ್ಡರಿ ದಾರ, ಒಂದು ಸ್ನೋ ಡಬ್ಬಿ ಕೊಂಡುಕೊಂಡ. ಉಳಿದ ಚಿಲ್ಲರೆಗೆ ಅಯ್ಯರ್ ಹೋಟೆಲಿನಲ್ಲಿ ಚೌಚೌ ಕಟ್ಟಿಸಿಕೊಂಡು ಮನೆ ಸೇರಿದ

ನಗುತ್ತಲೇ ಬಂದ ಕಿಟ್ಟು, ಕೊಡಕೋಣೆಯ ಬಳಿ ನಿಂತಿದ್ದ ಸರಸುವನ್ನು ಕಂಡಾಗ, ಹೆದರಿ ಗಾಬರಿಗೊಂಡ. 'ನೀವು ಮಾಡಿದ್ದೆಲ್ಲಾ ನನಗೆ ಗೊತ್ತು!' ಎನ್ನುವಂತಿತ್ತು ಅವಳ ನೋಟ. ಅಪರಾಧಿಯಂತೆ ನುಸುಳಿಕೊಂಡು ಕೋಣೆಯ ಒಳಹೊಕ್ಕ ಕಿಟ್ಟು. ಸರಸುವೂ ಒಳಗೆ ಬಂದು ಬಾಗಿಲು ಹಾಕಿ ಚಿಲಕವಿಟ್ಟಳು. ಮುಂದೆ

ಇನ್ನೇನು ಕಾದಿದೆಯೋ ಎಂದು ಕಂಗಾಲಾದ ಕಿಟ್ಟು, ತನ್ನ ಕೈಚೀಲದಿಂದ ಸ್ನೋ, ಹೂ. ಎಂಬ್ರಾಯ್ಡರಿ ದಾರ, ಚೌಚೌ ಪೊಟ್ಟಣಗಳನ್ನು ಒಂದೊಂದಾಗಿ ತೆಗೆದು ಕೆಳಗಿಟ್ಟ

"ಹ್ಞು, ಆಮೇಲೆ ?" ಅಣಕಿಸುವಂತೆ ಘರ್ಜಿಸಿದಳು ಸರಸು. ಕಿಟ್ಟು ತನ್ನ ಕೋಟಿನ ಜೇಬಿಗೆ ಕೈಹಾಕಿದಾಗ—

"ಹ್ಞುಂ. ತೆಗೆಯಿರಿ—ನಿಮ್ಮ ಬಂಡವಾಳಾನ!" ಎಂದಳು ಸರಸು. ಕಿಟ್ಟುವಿನ ಜಂಘಾಬಲವೇ ಉಡುಗಿ ಹೋಯಿತು. ಅವನು ಜೇಬಿನ ಮೂಲೆಯಲ್ಲಿ ಉಳಿದಿದ್ದ ಒಂದಾಣೆಯನ್ನು ತೆಗೆದು ಕೈಯ್ಯಲ್ಲಿ ಹಿಡಿದುಕೊಂಡ.

"ಇಷ್ಟೇನೋ ?"

"ಹ್ಞುಂ" ಎಂದು ತಲೆಗವುಕು ಹಾಕಿದ ಕಿಟ್ಟು.

"ಮಿಕ್ಕಿದ್ದು ?"

"ಅಣ್ಣ ತೆಗೆದುಕೊಂಡರು."

"ಓಹೋ !" ಸರಸುವಿನ ಕಣ್ಣು, ಹುಬ್ಬು, ಕೆನ್ನೆ, ತುಟಿ—ಎಲ್ಲಾ ಅದೇ ಮಾತನ್ನೇ ಆಡಿದಂತಾಯಿತು—ಕಿಟ್ಟುವಿಗೆ.

ಚಿಲಕವನ್ನು ತೆಗೆದು, ಬಾಗಿಲನ್ನು ದೂಡಿ, ಸೆರಗು ಸುತ್ತಿ ನಡುವಿಗೆ ಬಿಗಿದು, ದಬಡಬನೆ ಹೆಜ್ಜೆಯಿಡುತ್ತಾ ಅಂಗಳಕ್ಕೆ ಬಂದಳು. ಸ್ವಲ್ಪ ಹೊತ್ತಿಗೆ ಮುಂಚೆ ಬಂದಿದ್ದ ನಾಗಪ್ಪನವರು ಚಾಪೆಯ ಮೇಲೆ ಕುಳಿತು, ತಾಳೆ ಬೀಸಣಿಗೆಯಿಂದ ಬೀಸಿಕೊಳ್ಳುತ್ತಿದ್ದರು ಸುಮಿತ್ರೆಯೂ ವೆಂಕಮ್ಮನೂ ಅವರಿಗೆ ಸ್ವಲ್ಪ ದೂರದಲ್ಲಿ ಕುಳಿತಿದ್ದರು

ಸರಸು ಬಂದ ರಭಸವನ್ನು ಕಂಡು, ಮೊದಲು ಬೆಚ್ಚಿದವಳ ಸುಮಿತ್ರೆ. ವೆಂಕಮ್ಮನಿಗಂತೂ, ಮುಂದೇನಾಗುವುದೆಂಬುದು ತಿ ದಿತ್ತು. ವೃಥಾ ಆ ಜಗಳದಲ್ಲಿ ತಲೆ ಹಾಕಿ ತಾನೇಕೆ ಕೆಟ್ಟವಳೆನ್ನಿ ಕೊಳ್ಳಬೇಕೆಂದು ಸುಮ್ಮನಿದ್ದಳು.

ಬಳೆಗಳ ಸದ್ದುಮಾಡಿ, ಕೆಮ್ಮಿ, ಹುಬ್ಬುಗಂಟಿಕ್ಕಿ, ತನ್ನ ಅಗಲವಾದ ಕಣ್ಣುಗಳನ್ನು ಇನ್ನಷ್ಟು ಅಗಲವಾಗಿ ತೆರೆದು, ಸುಟ್ಟು ಬಿಡುವಷ್ಟು ತೀಕ್ಷ್ಣವಾಗಿ ನಾಗಪ್ಪನವರನ್ನು ನೋಡಿದಳು ಸರಸು

"ಹ್ಞುಂ, ನಿಮ್ಮ ದುರಾಸೆಗಿಷ್ಟು ಬೆಂಕಿ ಹಾಕ! ನಾವೇನ

ಅನ್ನ ತಿನ್ನಬೇಕೋ-ಮಣ್ಣು ತಿನ್ನಬೇಕೋ ಹೊಟ್ಟೆಗೆ?"

ನಾಗಪ್ಪನವರು ಮಾತನಾಡದೆ, ಸಮಾಧಾನದಿಂದಲೇ ಅವಳ ಕಡೆಗೆ ನೋಡಿದರು. ಅನಂತರ ವೆಂಕಮ್ಮನ ಕಡೆಗೆ ತಿರುಗಿ—

"ಅವರ ಸಂಸಾರಕ್ಕೆ ಬೇಕಾದ ಅಕ್ಕಿ-ಬೇಳೆ ಎಲ್ಲಾ ಕೊಡಲಿಲ್ಲವೇನೆ?" ವೆಂಕಮ್ಮ ಉತ್ತರಿಸುವ ಮುನ್ನ ಸರಸುವೇ ಮಾತಿನ ಮಳೆಗರೆದಳು :

"ಯಾರಿಗೆ ಬೇಕು ನಿಮ್ಮ ಅಕ್ಕಿ-ಬೇಳೆ? ನಾವೇನು ನಿಮ್ಮ ಗುಲಾಮರು ಅಂತ ತಿಳಕೊಂಡಿದ್ದೀರಾ ನಿಮ್ಮ ಪಡಿಭತ್ಯಕ್ಕೆ ಕಾಯ್ಕೊಂಡಿರೋಕೆ? ನನ್ನ ಗಂಡ ತಿಂಗಳೆಲ್ಲಾ ದುಡಿದು ಬರೋದು ನೀವು ದುಡ್ಡು ಎಣಿಸಿಕೊಂಡು ಹೋಗೋದು! ಯಾವ ನ್ಯಾಯ ಇದು?"

"ಈಗೇನು ಕಮ್ಮಿಯಾಗಿದೇಂತ ಇಷ್ಟು ಮಾತು?"

"ಕಮ್ಮಿನೋ-ಜಾಸ್ತಿನೋ... ... ಆ ಮಾತೇ ಎತ್ತಬೇಡಿ ಈಗ. ನನ್ನ ಗಂಡ ದುಡಿದ ಸಂಬಳಾನ ಬಿಸಾಕಿ ಇತ್ತಲಾಗೆ"

"ಕಾಯ್ಕೊಂಡಿರು-ಬಿಸಾಕ್ತಾರೇಂತ! ಇವಳೇ ಗಂಡನ್ನ ಸಂಪಾದಿಸಿರೋಳು- ಅವನೇನು ನಮಗೆ ಮಗನಾಗಿ ಹುಟ್ಟಿದನೆ?"

"ಮಗನಾಗಿ ಹುಟ್ಟಿದವನನ್ನು ಮಾರಿಕೊಂಡ್ರಲ್ಲ ಸಾವಿರ ದಿನ್ನೂರಕ್ಕೆ ಇನ್ನೆಲ್ಲಿದೆ ಆ ಹಕ್ಕು? ನಮ್ಮಪ್ಪ ಎಂದೋ ಕೊಂಡು ಕೊಂಡುಬಿಟ್ರು!"

"ಮುಚ್ಚು ಬಾಯಿ. ಮಾತಿಗೆ ಮುಂಚೆ ಸಾವಿರದಿನ್ನೂರು ಅಂತಾಳೆ! ಮಾರಿ.......ಮಾರಿ.......ಮದ್ದೂರು ಮಾರಿ!"

"ಮಾರಿ ಮನೇಗೆ ಬಂದಮೇಲೆ ಸುಮ್ನೆ ಹೋಗ್ತಾಳೆ ಅಂತ ತಿಳಕೊಂಡ್ರೇನು?" ಎನ್ನುತ್ತಾ ಸರಸು ಗೋಡೆಯ ಮೊಳೆಗೆ ತಗುಲಿಹಾಕಿದ್ದ ನಾಗಪ್ಪನವರ ಕೋಟನ್ನು ಎಳೆದುಕೊಂಡು, ಜೇಬುಗಳನ್ನೆಲ್ಲಾ ಹುಡುಕಿ, ಕೈಗೆ ಸಿಕ್ಕಿದಷ್ಟು ನೋಟುಗಳನ್ನು ತೆಗೆದುಕೊಂಡು, ನಾಗಪ್ಪನವರ ಮುಖದ ಮೇಲೆ ಕೋಟು ಎಸೆದು ಹೊರಟು ಹೋದಳು.

ನಾಗಪ್ಪನವರು ಕಕ್ಕಾಬಿಕ್ಕಿಯಾಗಿದ್ದರು. ವೆಂಕಮ್ಮನೂ ಸುಮಿತ್ರೆಯೂ ಮನಸ್ಸಿನಲ್ಲಿಯೇ ನಗುತ್ತಿದ್ದರು.

# ೧೭

ನಾಣಿಯ ಮದುವೆಗೆ ಹೊರಟ ನಾಗಪ್ಪನವರ ಚಿಕ್ಕ ಪರಿವಾರ ಹಾರೋಹಳ್ಳಿಯನ್ನು ತಲಪಿತು ತಾನು ಮದುವೆಗೆ ಬರುವುದಿಲ್ಲ ವೆಂದು ಹಟಹಿಡಿದ ಸರಸು ಬೆಂಗಳೂರಿನಿಂದ ನೇರವಾಗಿ ಮದ್ದೂರಿಗೇ ಹೋದಳು. ವೆಂಕಮ್ಮ, ನಾಗಪ್ಪ, ಸಾವಿತ್ರಿ, ಕಿಟ್ಟಿ, ನಾಣಿ— ಈ ಐದೇ ಮಂದಿ ಗಂಡಿನ ಕಡೆಯವರಾಗಿ ಬಂದಿದ್ದುದು ಶ್ರೀಕಂಠಯ್ಯ ನವರಿಗೆ ತುಂಬ ಆಶ್ಚರ್ಯವೇ ಆಯಿತು.

"ನಿಮ್ಮ ಸೊಸೆ ಎಲ್ಲಿ ನಾಗಪ್ಪನವರೇ ?"

"ಅವರ ತಂದೆಗೆ ಮೈ ಸರಿಯಿಲ್ಲವಂತೆ. ತೌರಿಗೆ ಹೋಗಿದ್ದಾಳೆ. ನಾಳೆ ಬಂದುಬಿಡುತ್ತಾಳೆ ಇಲ್ಲಿಗೆ."

"ದೊಡ್ಡ ಮಗ ?"

"ನೀವೇ ನೋಡಿದಿರಲ್ಲ—ಹಾಸಿಗೆ ಬಿಟ್ಟು ಏಳುವುದಕ್ಕೂ ಅವ ನಿಂದಾಗುವುದಿಲ್ಲ!"

"ನಿಜ, ನಿಜ ಇನ್ನೂ ಇಬ್ಬರು ಗಂಡುಮಕ್ಕಳು ಇರಬೇಕಲ್ಲವೆ?"

"ಕಾಲೇಜಿನಲ್ಲಿ ಓದುತ್ತಿದ್ದವನು ಊರಿಗೆ ಹೋಗಿದ್ದಾನೆ. ದೊಡ್ಡವನನ್ನು ನೋಡಿಕೊಳ್ಳುವುದಕ್ಕೆ ಅಲ್ಲಿ ಯಾರೂ ಇಲ್ಲವಲ್ಲ! ಎರಡನೆಯವನು ನಾಳೆ ಮುಹೂರ್ತದ ಹೊತ್ತಿಗೆ ಕಾರಿನಲ್ಲಿ ಬರುತ್ತಾನೆ"

ಎಂದರು ನಾಗಪ್ಪ ಎಲ್ಲರೂ ಗಂಡಿನ ಬಿಡಾರ ಸೇರಿದರು. ಉಪಚಾರದ ನಂತರ ವರಪೂಜೆಯಾಯಿತು. ನಾಣಿಗೆ ಮಾತ್ರ ಸ್ವಲ್ಪವೂ ಸಂತೋಷವಿರಲಿಲ್ಲ. ಹಿರಿಯರು ಹೇಳಿದುದನ್ನು ಯಂತ್ರ ದಂತೆ ಮಾಡುತ್ತಿದ್ದ ಮಗನ ಸ್ಥಿತಿಯನ್ನರಿತ ವೆಂಕಮ್ಮ ಮನಸ್ಸಿ ನಲ್ಲಿಯೇ ಕೊರಗುತ್ತಿದ್ದಳು.

ಮರುದಿನ ಮುಹೂರ್ತದ ವೇಳೆಗೆ ಸುಂದರು-ಸ್ವರ್ಣ ಕಾರಿನಲ್ಲಿ ಬಂದಿಳಿದರು. ಮದ್ದೂರಿನಿಂದ ಸರಸು ಬರಲಿಲ್ಲ

ವೆಂಕಮ್ಮ ನಾಣಿಗೆ ಮದುವೆ ಗೊತ್ತಾದ ಸಂಗತಿಯೊಂದನ್ನೂ ಸುಂದರುವಿನ ಕಿವಿಗೆ ಹಾಕಲಿಲ್ಲ. ಅವನ ಕೊರಗೇ ಅವನಿಗೇ ಸಾಕಾಗುವಷ್ಟು ಇರುವಾಗ ಈ 'ಇಷ್ಟವಿಲ್ಲದ ಮದುವೆ'ಯ ಚರಿತ್ರೆ

ಯನ್ನು ಹೇಳಿ, ಅವನನ್ನೇಕೆ ಸಂಕಟಪಡಿಸಬೇಕು ಎಂದು ಸುಮ್ಮನಿದ್ದಳು. ಆದರೆ ಸುಂದರು

“ಕಿಟ್ಟಿ—ಅವನ ಹೆಂಡತಿ ಇಬ್ಬರೂ ಹೊಂದಿಕೊಂಡಿದ್ದಾರೇನಮ್ಮ?” ಎಂದು ಕೇಳಿದ.

ಆ ಪ್ರಶ್ನೆಗೆ ಕೊಡಬೇಕಾದ ಉತ್ತರವೂ ಶೋಚನೀಯವಾಗಿದ್ದರಿಂದ, ವೆಂಕಮ್ಮನ ಮನಸ್ಸು ಎರಡುಕ್ಷಣ ಹಿಂಜರಿಯಿತು.

“ಒಬ್ಬರಿಗೊಬ್ಬರಿಗೆ ನಾಯಿ—ಬೆಕ್ಕುಗಳ ಹಾಗಿದ್ದಾರೋ ಅಥವಾ ಪ್ರೀತಿಯಿಂದ ಇದ್ದಾರೊ?”

“ಇಬ್ಬರೂ ತುಂಬ ಪ್ರೀತಿಯಿಂದ ಇದ್ದಾರೆ ಸುಂದರು. ಅವನ ಹೆಂಡತಿ ಒಳ್ಳೆಯವಳು.”

“ನಾಣಿ ಯಾಕಮ್ಮ ಒಂದು ಥರಾ ಇದ್ದಾನೆ? ಮುಖದಲ್ಲಿ ಗೆಲುವೇ ಇಲ್ಲ!”

“ಅವನಿಗೆ ಎಂಟು ದಿನದಿಂದ ಮೈಗೇ ಸ್ವಸ್ಥವಿಲ್ಲ. ಲಗ್ನ ಇಡಿಸಿಬಿಟ್ಟಿದರಲ್ಲ, ಅಂತೆ ಬರಬೇಕಾಯಿತಪ್ಪ!”

“ಅವನೇ ಹುಡುಗೀನ ಒಪ್ಪಿದನೋ, ಅಥವಾ ‘ವರದಕ್ಷಿಣೆ’ ಆಸೆಗೆ ಅಪ್ಪ ಹೇಳಿದ್ದನ್ನ ಮಾಡಿದನೋ?”

“ಎರಡೂ ಆಯಿತು ಅನ್ನು!”

ವೆಂಕಮ್ಮ ನಗುತ್ತಾ ನುಡಿದಳು.

“ನಮ್ಮ ನಾಲ್ಕು ಜನರ ಮದುವೆ ಮಾಡಿದರಲ್ಲಾ ಅಣ್ಣ-ಎಲ್ಲರಿಗೂ ವರದಕ್ಷಿಣೆ ವಸೂಲುಮಾಡಿ ಏನು ಮಾಡಿದರಮ್ಮ!”

“ಏನು ಮಾಡಿದರೋಪ್ಪ—ನಾ ಕಾಣೆ!”

“ಶೀನಣ್ಣನಿಗೆ ಸಾವಿರ, ನನಗೆ ಹತ್ತು ಸಾವಿರ, ಕಿಟ್ಟುವಿಗೆ ಸಾವಿರ ದಿನ್ನೂರು, ಈಗ ನಾಣಿಗೆ ಸಾವಿರ—ಒಟ್ಟು ಹದಿಮೂರು ಸಾವಿರದ ಇನ್ನೂರು ರೂಪಾಯಿ! ಗಂಡುಮಕ್ಕಳು ಹುಟ್ಟಿ ಸಾರ್ಥಕವಾಯಿತಮ್ಮ!!”

“ಯಾಕೊ ಸುಂದರು ಹಾಗಂತೀಯಾ?”

“ರಿಟೈರ್ಡ್ ಸ್ಕೂಲ್ ಮೇಷ್ಟ್ರು ಹದಿಮೂರು ಸಾವಿರ ರೂಪಾಯಿ ಆಸ್ತಿ ಮಾಡಿಕೊಂಡರು ಅಂದರೆ ಆಶ್ಚರ್ಯವಲ್ಲವೇನಮ್ಮ?”

"ಹೋಗಲಿ ಸುಮ್ಮನೆ ಇರಪ್ಪ. 'ಅವರು' ಬಂದು ಬಿಟ್ಟರು !" ಎಂದಳು ವೆಂಕಮ್ಮ.

ನಾಗಪ್ಪನವರು ಬಂದೇ ಬಂದರು. ಸುಂದರುವಿನ ಕ್ಷೇಮ ಸಮಾಚಾರವನ್ನು ಕ್ಷಣಮಾತ್ರದಲ್ಲಿ ವಿಚಾರಿಸಿ, ಶ್ರೀಕಂಠಯ್ಯನವರಿಗೂ ಅವನ ಪರಿಚಯ ಮಾಡಿಸಿದರು.

ಸಂಜೆ ನಡೆದ ಆರತಕ್ಷತೆಯಲ್ಲಿ ಸುಂದರು, ಲಲಿತು–ನಾಣಿಯರಿಗೆ ಎರಡು ಬೆಳ್ಳಿಯ ಬಾದಾಮಿ ತಟ್ಟೆಗಳನ್ನು ಓದಿಸಿ, ಸ್ವರ್ಣಳೊಡನೆ ಬೆಂಗಳೂರಿಗೆ ತೆರಳಿದ.

ನಾಲ್ಕು ದಿನಗಳ ನಂತರ ಪ್ರಸ್ತದ ಶಾಸ್ತ್ರ ಮುಗಿಸಿಕೊಂಡು, ಸೊಸೆಯನ್ನೂ ಕರೆದುಕೊಂಡು ನಾಗಪ್ಪನವರ ಪರಿವಾರ ಅಗ್ರಹಾರ ಸೇರಿತು.

ಲಲಿತೆಯನ್ನು ನೋಡಿದ ಶಾಂತು ತಾನಿನ್ನು ಬದುಕಿರಬಾರದು ಎಂದುಕೊಂಡಳು.

## ೧೮

ಶ್ರೀನಿವಾಸನ ಗಾಯಗಳು ಮಾತ್ರ ವಾಸಿಯಾದುವೇ ವಿನಃ, ಸೋತ ಕೈ ಚೇತರಿಸಿಕೊಳ್ಳಲಿಲ್ಲ. ಎಡಗಾಲಿನ ಮೂಳೆ ಮುರಿದು ಹೋಗಿದ್ದುದರಿಂದ ನಿಲ್ಲಲೂ ಸಾಧ್ಯವಾಗುತ್ತಿರಲಿಲ್ಲ. ಮರದ ಕಂಕಳು ಗೋಲು ಮಾಡಿಸಿ ಕೊಟ್ಟಮೇಲೆ, ಅದರ ಸಹಾಯದಿಂದ ಮನೆಯ ಸುತ್ತಮುತ್ತ ನಿಧಾನವಾಗಿ ತಿರುಗಾಡಲು ಸಾಧ್ಯವಾಗುತ್ತಿತ್ತು. ಕೆನ್ನೆಯ ಮೇಲೆ ಕಣ್ಣಿನ ಬಳಿ ಗಾಯದ ಗುರುತು ಶಾಶ್ವತವಾಗಿ ನಿಂತು ಬಿಟ್ಟಿದ್ದಿತು.

ಮಗನ ಸ್ಥಿತಿಯನ್ನು ನೋಡಿದಾಗಲೆಲ್ಲಾ ವೆಂಕಮ್ಮನಿಗೆ ಕರುಳೇ ಕಿತ್ತು ಬರುತ್ತಿದ್ದಿತು. ಅವಳ ತಲೆಯಲ್ಲಿ ಅವನ ವಿಚಾರದ ಆಲೋಚನೆಗಳು ಧಾಳಿಮಾಡಿದಾಗ, ಮನಸ್ಸು ಹಿಂದಿನಗಳತ್ತ ಹರಿದು, ಶ್ರೀನಿವಾಸನಿಗೆ ಈ ಗತಿ ಬರದಂತೆ ಮಾಡುವುದು ಸಾಧ್ಯವಿತ್ತು ಎಂದನಿಸುತ್ತಿತ್ತು. ತಾಯ್ ಹೃದಯದ ಆ ಆಶಾಭಾವನೆ ಇನ್ನೂ ಅಳಿದಿರಲಿಲ್ಲ.

ಚಿಕ್ಕಂದಿನಲ್ಲಿಯೇ ಅವನನ್ನು ಶಿಕ್ಷೆಯಲ್ಲಿ ಬೆಳೆಸಿದ್ದರೆ ಚೆನ್ನಾಗಿರುರುತ್ತಿತ್ತು ಎಂದುಕೊಂಡಳು ವೆಂಕಮ್ಮ. ಆದರೆ ಆಗ ನಾಗಪ್ಪನವರು 'ಗಂಡು ಹುಡುಗ—ಹೇಗಿದ್ದರೇನು? ಅವನ ಪಾಡು ಅವನು ನೋಡಿಕೊಳ್ಳುತ್ತಾನೆ — ದೊಡ್ಡವನಾದಮೇಲೆ' ಎಂದು ಉದಾಸೀನಭಾವ ತಾಳಿದ್ದರೆ, ಮಿಕ್ಕ ಹುಡುಗರಂತೆಯೇ ಅವನೂ ತಕ್ಕಷ್ಟು ವಿದ್ಯೆ ಕಲಿತು ಮುಂದಕ್ಕೆ ಬರುತ್ತಿದ್ದನೆಂದೇ ಅವಳ ವಾದ.

ಎರಡನೆಯ ಬಾರಿ ಶ್ರೀನಿವಾಸನ ಬಾಳು ಹಾಳಾದುದು 'ವರದಕ್ಷಿಣೆ'ಯಿಂದ—ಎಂಬುದೂ ಆಕೆಯ ನೆನಪಿನಲ್ಲಿ ಉಳಿದಿದ್ದ ಸಂಗತಿಯಾಗಿತ್ತು.

ಆಗ ಶ್ರೀನಿವಾಸನಿಗೆ ಹೆಣ್ಣು ಕೊಡುತ್ತೇವೆಂದು ಬಂದಿದ್ದ ಅಷ್ಟಗ್ರಾಮದ ಅವಧಾನಿಗಳು ಒಳ್ಳೆಯ ಮನೆತನಕ್ಕೆ ಸೇರಿದ್ದವರು. ಕಾಲವಶಾತ್ ಸಂಪತ್ ನಾಶವಾಗಿದ್ದುದರಿಂದ ಅವರು ಬಡವರಾಗಿದ್ದರಷ್ಟೆ. ಆದರೂ ಗುಣ ಶೀಲಗಳಲ್ಲಿ, ಆತ್ಮಾಭಿಮಾನದಲ್ಲಿ ಅಂದಿಗೂ ಅವರು ತಗ್ಗದೆ, ಒಳ್ಳೆಯತನವನ್ನೇ ಉಳಿಸಿಕೊಂಡು ಬಂದಿದ್ದರು.

ಅವಧಾನಿಗಳು. ತಮ್ಮ ಮಗಳನ್ನು ಮದುವೆಯಾಗಬೇಕೆಂಬ ಕೋರಿಕೆಯನ್ನು ಮಂಡಿಸಿದಾಗ, ವರದಕ್ಷಿಣೆ ಗಿಟ್ಟಿಸುವ ಆಸೆಯಲ್ಲಿ ಹಾರಾಡುತ್ತಿದ್ದ ನಾಗಪ್ಪನವರು, ಒಂದು ಸಾವಿರ ಕೊಡಬೇಕೆಂದು ಷರತ್ತು ಹಾಕಿದರು. ಹುಡುಗಿಯ ಸದ್ಗುಣ, ವಿನಯ ಸಂಪನ್ನತೆಗಳಿಗೆ ಬೆಲೆಯಿಲ್ಲದೆ, ಅವಧಾನಿಗಳ ಬಳಿ ಇಲ್ಲದ ಹಣಕ್ಕೆ ಬೆಲೆ ಬಂದಿತ್ತು. ನಾಗಪ್ಪನವರ ವರದಕ್ಷಿಣೆ ಕೋರಿಕೆಯನ್ನು ಈಡೇರಿಸಲಾಗದೆ, ಅವಧಾನಿಗಳು ನಿರಾಸೆಯಿಂದ ಹಿಂತಿರುಗಿದ್ದರು. ಅದೇ ಹುಡುಗಿಯನ್ನೇ ಶ್ರೀನಿವಾಸನಿಗೆ ಪಾಣಿಗ್ರಹಣ ಮಾಡಿಸಿದ್ದರೆ, ಅವನು ಹಳ್ಳಿಯ ಹೆಣ್ಣು ಮಕ್ಕಳ ಮೇಲೆಲ್ಲಾ ಕಣ್ಣು ಹಾಕುತ್ತಿರಲಿಲ್ಲವೆಂದೇ ವೆಂಕಮ್ಮನ ಅಭಿಪ್ರಾಯ. ವಯಸ್ಸಿನಲ್ಲಿ ಅಂತಹ ಕಾಮ ಪ್ರಚೋದನೆಯಾಗುವುದನ್ನು ಮದುವೆಯಿಂದ, ಸುಲಭವಾಗಿ ತಪ್ಪಿಸಬಹುದಾಗಿತ್ತೆಂಬುದು ಆಕೆಯ ಭಾವನೆ.

ಆದರೆ, ಹಾಗೆ ತಪ್ಪಿಸಿ, ಮದುವೆಮಾಡಲು ಅಡ್ಡಿಬಂದ ವಿಷಯವೆಂದರೆ 'ವರದಕ್ಷಿಣೆ'ಯ ಆಸೆ. ಈಗಲೂ ನಾಗಪ್ಪನವರು 'ಗಂಡಸು—

ಅವನು ಏನು ಬೇಕಾದರೂ ಮಾಡಬಹುದು, ತಪ್ಪಿಲ್ಲ. ಹತ್ತು ಹೆಣ್ಣಿನ ರುಚಿನೋಡಿ ತೃಪ್ತಿಪಟ್ಟುಕೊಂಡಿರಲಿ. ಸರಿಯಾದ ಕಡೆ ಹೆಣ್ಣು ಬಂದು, ಹೆಚ್ಚು ವರದಕ್ಷಿಣೆ ಕೊಡುವ ಕಾಲಕ್ಕೆ ಅವನಿಗೂ ಒಂದು ಮದುವೆ ಮಾಡೋಣ' ಎಂದು ಉದಾಸೀನ ಮಾಡಿದರು.

ಹುಡುಗನ ವಯಸ್ಸು ಏರಿದಂತೆ, ದುಸ್ಸ್ವಭಾವಗಳು ಬೆಳೆದು, ಬೀದಿಯ ಹೆಣ್ಣು ಮಕ್ಕಳ ಮೇಲೆ ಕಣ್ಣುಹಾಕಿ ಕೆಟ್ಟ ಹೆಸರು ಪಡೆದು ಕೊಂಡಾಗ 'ಶ್ರೀನಿವಾಸ ಪೋಲಿ' ಎಂದು ಎಲ್ಲೆಡೆ ಕೂಗಾಯಿತು. ಕನ್ಯಾಪಿತೃಗಳು ಹೆಣ್ಣು ಕೊಡಲು ಹಿಂಜರಿದರು. ಹುಡುಗ ಮದುವೆ ಯಿಲ್ಲದೆ ನಿಂತ. ಕೊನೆಗೆ ಬಂದ ರಂಗಯ್ಯನವರ ಮೊಮ್ಮಗಳನ್ನು, ಅವಳ ಗುಣ-ನಡವಳಿಕೆಗಳನ್ನು ವಿಚಾರಿಸದೆ, ವರದಕ್ಷಿಣೆಯ ಆಸೆಗೆ ಶ್ರೀನಿವಾಸನಿಗೆ ಕಟ್ಟಬೇಕಾಯಿತು. ಆದರೆ ಅದಾದರೂ ಯಶಸ್ವಿ ಯಾಯಿತೆ? ಹುಡುಗನಂತೆಯೇ ಹುಡುಗಿಯೂ! ಇನ್ನೂ ಒಂದು ಕೈ ಮೀರಿಯೇ ಇದ್ದಳು ಹುಡುಗನಿಗೇ ಮೋಸಮಾಡಿ ರಾತ್ರಾ ರಾತ್ರಿಯೇ ಓಡಿಹೋದಳು! ಅದರಿಂದ ಸಾವಿರ ರೂಪಾಯಿ ಲಾಭ ವಾಯಿತೇ ಹೊರತು ಶ್ರೀನಿವಾಸನ ನಡತೆ ಬದಲಾಗಲಿಲ್ಲ

ಹೆಂಡತಿಯ ಸುಖವನ್ನು ಕಾಣದ ಶ್ರೀನಿವಾಸ, ಗೌಡರ ಮಗಳ ಮೇಲೆ ಕಣ್ಣಿಟ್ಟ. ಅದರ ಫಲಿತಾಂಶ ಕೈಕಾಲು ಮುರಿಸಿಕೊಂಡುದಷ್ಟೇ ಅಲ್ಲ, ನಾಗಪ್ಪನವರ ನೊಕ್ಕು ಮುರಿಸುಲು ಕ್ರಿಮಿನಲ್ ಕೇಸಾಯಿತು. ಬೆಂಕಿ ಹೊತ್ತಿಸಿದವರನ್ನೇ ಆಹುತಿ ತೆಗೆದುಕೊಳ್ಳತೊಡಗಿ, ಸಂಪಾದಿಸಿದ ಹಣ-ಅನ್ಯಾಯವಾಗಿ, ಹಿಂಸೆ ಮಾಡಿ ತಗೆದುಕೊಂಡ ಹಣ-ಕೋರ್ಟು ಖರ್ಚಿಗೆ ಹೋಯಿತು! ಅನ್ಯಾಯವಾಗಿ ಬಂದದ್ದು ಅನ್ಯಾಯವಾಗಿಯೇ ಹೋಗಬೇಕಲ್ಲವೆ?

ಬಾಳ್ವೆಯನ್ನೇ ಬಲಿಕೊಟ್ಟು ಗಳಿಸಿದ ಹಣ ಹೊಳೆಯ ನೀರಿನಂತೆ ಹರಿದು ಹೋಯಿತು. ವರದಕ್ಷಿಣೆ ಕೊಟ್ಟ ಕನ್ಯಾಪಿತೃಗಳ ಶಾಪ, ಬದುಕಿನಲ್ಲಿ ಸುಖ ಕಾಣದ ಮಕ್ಕಳ ಕೊರಗು ಯಜಮಾನನಿಗೆ ತಟ್ಟಿತು. ವಿನಾಶ ಕಾಲ ಬಂದರೂ ವಿಪರೀತ ಬುದ್ಧಿಯಿಂದ ನಡೆದುಕೊಳ್ಳತೊಡ ಗಿದರು ನಾಗಪ್ಪ. ಒಂದು ವ್ಯಕ್ತಿಯ ಸರ್ವಾಧಿಕಾರ ತುಂಬಿದ ಸಂಸಾರ ವನ್ನೇ ಬಲಿ ತೆಗೆದುಕೊಂಡಿತು.

"ಇದಕ್ಕೆಲ್ಲಾ ಪರಿಹಾರವಿಲ್ಲವೇ ಸ್ವಾಮಿ? ನನ್ನ ಸಂಸಾರ ನಗುನಗುತ್ತಾ ಪ್ರಭಾತ ಸೂರ್ಯನಂತೆ ಬೆಳಗುವುದನ್ನು ಎಂದು ಕಾಣು ತ್ತೇನೆ ದೇವಾ? ಬೇಗನೆ ದಯಮಾಡು ತಂದೆ....... "

ಎಂದು ಪರಿಪರಿಯಾಗಿ ಪ್ರಾರ್ಥನೆ ಸಲ್ಲಿಸುವುದೇ ವೆಂಕಮ್ಮನಿಗೆ ಕೆಲಸವಾಯಿತು. ದಿನ ನಿತ್ಯವೂ ಹಾಳಾಗುತ್ತಿರುವ ತನ್ನ ಸಂಸಾರ ವನ್ನು ಆದ್ಯಂತವಾಗಿ ನೆನಪು ಮಾಡಿಕೊಂಡು. ಕಣ್ಣೀರು ಕರೆದು, ಕೊರಗುವುದೇ ವೆಂಕಮ್ಮನ ಪಾಲಿಗೆ ಬಂದ ಭಾಗ್ಯವಾಯಿತು.

ಮನೆಯ ಕೆಲಸವನ್ನೆಲ್ಲಾ ಲಲಿತೆಯೇ ಮಾಡುತ್ತಿದ್ದಳು. ದಿನ ದಿನಕ್ಕೆ ದೊಡ್ಡವಳಾಗುತ್ತಿದ್ದ ಸುಪುತ್ರಿಯೂ ಪ್ರೌಢೆಯಾಗಿ, ಮದುವೆಗೆ ನಿಂತಳು ನಾಣಿಯಂತೂ ಬೇಡದ ಹೆಂಡತಿಯ ಕಡೆಗೆ ಕಣ್ಣೆತ್ತಿಯೂ ನೋಡದೆ, ಮೂಕ ಸಂಕಟವನ್ನನುಭವಿಸುತ್ತ, ನಿರಸನ ಜೀವಿಯಾಗಿ ದಿನ ದೂಡುತ್ತಿದ್ದ. ಕಿಟ್ಟು–ನರಸುವಿನ ಸಂಸಾರ ಸದ್ದು ಹೊರಗೆ ಬರದಂತೆ ಹೊರಗಿನ ಕೋಣೆಯಲ್ಲಿ ನಡೆದೇ ಇತ್ತು. ಹಾಗೆಯೇ ಬೆಂಗಳೂರಿನಲ್ಲಿ ಶಾನುವಿನ ವ್ಯಾಸಂಗವೂ ನಾಗಪ್ಪನವರ ಕ್ರಿಮಿನಲ್ ಕೇಸಿನ ಕೋರ್ಟು ವ್ಯವಹಾರವೂ ಸಾಗಿತ್ತು.

ಎತ್ತ ನೋಡಿದರೂ ಪರಿಸ್ಥಿತಿ ಆಶಾದಾಯಕವಾಗಿ ಕಾಣುತ್ತಿರಲಿಲ್ಲ ವೆಂಕಮ್ಮನಿಗೆ. ನಾಣಿ-ಲಲಿತೆಯು ಬಾಳು ಕೂಡಿ ಬಾರದಿದ್ದುದನ್ನು ಕಂಡಂತೂ ಆಕೆಯ ಹಲುಬಾಟ ಹೆಚ್ಚಿತ್ತು.

ಲಲಿತೆ ಮನೆಗೆ ಬಂದ ಸೊಸೆಯರಲ್ಲೆಲ್ಲ ತುಂಬ ಒಳ್ಳೆಯವಳೆಂದು ವೆಂಕಮ್ಮ ಮೆಚ್ಚಿಕೊಂಡಿದ್ದಳು ಮನೆಗೆಲಸಗಳನ್ನೆಲ್ಲ ಯಾರ ಸಹಾ ಯವೂ ಇಲ್ಲದೆ ಮುಚ್ಚಟೆಯಾಗಿ ಮಾಡಿ, ಅಡಿಗೆ ಕೆಲಸದಲ್ಲಿಯೂ ವೆಂಕಮ್ಮನಿಗೆ ನೆರವಾಗುತ್ತಿದ್ದಳು. ಲಲಿತ ಬೆಳಗಿನ ವೇಳೆ ಸುಮಿತ್ರೆಗೆ ಹಾಡು ಹೇಳಿಕೊಡುವುದು, ಮಧ್ಯಾಹ್ನದ ಹೊತ್ತು ಕಸೂತಿ ಕಲಿಸುವುದು ಸಂಜೆಯ ಮುನ್ನ ಅವಳಿಗೆ ಹೆರಳು ಹಾಕಿ–ಮುಡಿಯ ತುಂಬ ಹೂ ಮುಡಿಸಿ, ಅವಳ ಅಂದ ಚೆಂದ ನೋಡಿ ಆನಂದಿಸುವುದರಲ್ಲೇ ಲಲಿತೆಗೆ ಸಂತೋಷ.

ಶಾಲೆಯಿಂದ ಬಂದ ಗಂಡನಿಗೆ ನಗುನಗುತ್ತಲೇ ಕಾಫಿ ತಂದು ಕೊಡುತ್ತಿದ್ದರೂ, ನಾಣಿ ತಲೆಯೆತ್ತಿ ಲಲಿತೆಯನ್ನು ನೋಡುತ್ತಿರಲಿಲ್ಲ.

ಆ ಸಮಯದಲ್ಲಿ ಅವಳಿಗೆ ಅತೀವ ದುಃಖವಾಗುತ್ತಿತ್ತು.

ಇನ್ನು ರಾತ್ರಿಯ ವೇಳೆ ಅಡಿಗೆ ಕೆಲಸವನ್ನೂ ಲಲಿತೆಯೇ ವಹಿಸಿಕೊಂಡಿದ್ದರಿಂದ, ಎಲ್ಲರಿಗೂ ಬಡಿಸಿ, ಕೊನೆಗೆ ತಾನು ಊಟ ಮಾಡಬೇಕಾಗುತ್ತಿತ್ತು. ಅನ್ನ ಸಾಲದೆ ಬಂದಾಗ, ಅದನ್ನು ದೊಡ್ಡದು ಮಾಡದೆ, ಮೌನವಾಗಿ ಉಪವಾಸವನ್ನೇ ಮಾಡಿಬಿಡುತ್ತಿದ್ದಳು. ಲಲಿತ ಹಾಗೆ ಉಪವಾಸವಿದ್ದುದನ್ನು ವೆಂಕಮ್ಮನೇ ಎಷ್ಟೋ ಬಾರಿ ನೋಡಿ ಮರುಗಿದ್ದಳು. ಆದರೆ ಇತರರು ತೃಪ್ತಿಪಟ್ಟು ಸುಖವಾಗಿರುವುದನ್ನು ನೋಡುವುದರಲ್ಲೇ ಸಂತೋಷವಿದೆ ಎನ್ನುತ್ತಿದ್ದಳು ಲಲಿತ

ಮಲಗುವ ವೇಳೆಗೆ ಎಲ್ಲರಿಗೂ ಆಕೆಯೇ ಹಾಸಿಗೆ ಹಾಸುತ್ತಿದ್ದಳು. ನಾಣಿಗೂ-ಅವಳಿಗೂ ಹೊರಗಡೆ ಇದ್ದ, ಕಟ್ಟುವಿನ ಕೋಣೆಯ ಎದುರಿಗಿನ ಕೋಣೆಯನ್ನು ತೆರವು ಮಾಡಿಸಿದ್ದಳು ವೆಂಕಮ್ಮ. ಅಲ್ಲಿ ನಾಣಿಯೊಂದು ಕಡೆ ಮಲಗಿದರೆ ಲಲಿತೆಯೊಂದು ಕಡೆ ಮಲಗಬೇಕಾಗಿತ್ತು.

ಒಂದು ರಾತ್ರಿ ಎರಡು ಹಾಸಿಗೆಯನ್ನೂ ಒಟ್ಟಿಗೆ-ಅಕ್ಕಪಕ್ಕದಲ್ಲಿ ಹಾಸಿದ್ದಳು ಲಲಿತ. ಆದರೆ ನಾಣಿ, ತನ್ನ ಹಾಸಿಗೆಯನ್ನು ತೆಗೆದುಕೊಂಡು, ಕೋಣೆಯ ಬೇರೊಂದು ಕಡೆ ಹಾಕಿಕೊಂಡು ಮಲಗಿದ. ಅಂದಿನಿಂದ ಲಲಿತೆ ಬಂದು ಹಾಸುವ ಮುನ್ನವೇ, ಅವನೇ ತನ್ನ ಹಾಸಿಗೆಯನ್ನು ಹಾಸಿಕೊಂಡು ಮಲಗುತ್ತಿದ್ದ. ಗಂಡನಿಗೆ ತನ್ನ ಮೇಲೆ ತುಸುವಾದರೂ ಇಷ್ಟವಿಲ್ಲವೆಂದು ಕಣ್ಣೀರಿಡುತ್ತಿದ್ದಳು ಲಲಿತ. ಆದರೂ ತೃಪ್ತ ಸ್ವಭಾವದವಳಾದ ಆಕೆ 'ಗಂಡನ ಪಾದಸೇವೆ ಮಾಡಿಕೊಂಡು, ದಾಸಿಯಾಗಿಯೇ ಬಿದ್ದಿರುತ್ತೇನೆ. ಆ ಭಾಗ್ಯವೇ ಸಾಕು' ಎಂದುಕೊಂಡಿದ್ದಳು.

ವೆಂಕಮ್ಮನೂ ನಾಣಿಯನ್ನು ಹತ್ತಿರ ಕೂಡಿಸಿಕೊಂಡು ಲಲಿತೆಯ ವಿಷಯವನ್ನು ತಿಳಿಯ ಹೇಳುತ್ತಿದ್ದಳು. ಅವಳ ಗುಣ-ಶೀಲಗಳನ್ನು ವರ್ಣಿಸಿ, ಅಂತಹ ಸೊಸೆ ದೊರಕಿದುದು ನಿಜವಾಗಿಯೂ ತಮ್ಮ ಪುಣ್ಯವೆಂದು ಹೇಳುತ್ತಿದ್ದರು. ಆದರೂ ನಾಣಿಯ ಮನಸ್ಸು ಶಾಂತಳ ಹೃದಯದಲ್ಲಿ ಅಡಗಿಕೊಂಡು, ಹೊರಬರದೆ, ಮೂಕಸಂಕಟವನ್ನು ಅನುಭವಿಸುತ್ತಿತ್ತು.

ಗಂಡನ ಈ ರೀತಿಯ ನಡವಳಿಕೆಗೆ ಕಾರಣವೇನಿರಬಹುದೆಂದು ಲಲಿತ ಹಲವಾರು ಬಾರಿ ಯೋಚಿಸಿದ್ದಳು. ತನ್ನಲ್ಲಿ ಏನಾದರೂ ತಪ್ಪಿರಬಹುದೆ?–ಎಂದು ತನ್ನನ್ನು ತಾನೇ ಹುಡುಕಾಡಿಕೊಂಡಳು. ತನ್ನನ್ನು ಮೊದಲು ಕಿಟ್ಟುವಿಗೆ ಕೊಡಬೇಕೆಂದು ಮಾತನಾಡಿ, ಕೊನೆಗೆ 'ಇವರಿಗೆ' ಕೊಟ್ಟುದಕ್ಕೆ ಅಸಮಾಧಾನವಾಗಿರಬಹುದೇ ಎಂದು ವಿಚಾರಿಸಿ ನೋಡಿದಳು. ಹೇಗೂ ಉತ್ತರ ದೊರೆಯದೆ ಚಿಂತಿಸುವುದರಲ್ಲಿಯೇ ದಿನ ಕಳೆದಳು

ಕೊರಗಿ ಕೊರಗಿ ನಾಣಿ ಹಾಸಿಗೆ ಹಿಡಿಯುವಂತಾದಾಗ, ವೆಂಕಮ್ಮನಿಗೂ–ಲಲಿತೆಗೂ ಜೀವವೇ ಹೋದಂತಾಗಿತ್ತು. 'ನನ್ನ ಮಗನನ್ನು ನಾನು ಕೊಲ್ಲುತ್ತಿದ್ದೇನೆ' ಎಂದುಕೊಳ್ಳುತ್ತಿದ್ದಳು ವೆಂಕಮ್ಮ. 'ನನ್ನ ಗಂಡನನ್ನು ನಾನು ಕೊಲ್ಲುತ್ತಿದ್ದೇನೆ' ಎಂದು ಶಪಿಸಿಕೊಳ್ಳುತ್ತಿದ್ದಳು ಲಲಿತ.

ಅಗ್ರಹಾರದ ಪಂಡಿತರು ಬಂದು, ನಾಣಿಯನ್ನು ಪರೀಕ್ಷಿಸಿ ವಿಷಮಶೀತಜ್ವರ' ಎಂದರು. ಆಗ ಲಲಿತೆಗೆ ವಿಷವನ್ನೇ ಕುಡಿದಷ್ಟು ಸಂಕಟವಾಯಿತು. ಅದು ತನಗಾದರೂ ಬರಬಾರದಾಗಿತ್ತೆ ಎಂದುಕೊಂಡಳು.

"ಅದೇನು ಮಾಡುತ್ತದೆ? ಕಿಟ್ಟುವಿಗೆ ಹೇಳಿ ಆಸ್ಪತ್ರೆಯಿಂದ ಔಷಧಿ ತರಿಸಿಕೊಡುತ್ತೇನೆ. ರೋಗ ಮೂರು ದಿನಕ್ಕೆ ಓಡಿಹೋಗುತ್ತದೆ."

ಎಂದರು ನಾಗಪ್ಪ ಮರುದಿನದಿಂದಲೇ ಆಸ್ಪತ್ರೆಯ ಬಣ್ಣದ ನೀರು ನಾಣಿಗೆ ಔಷಧಿಯಾಯಿತು. ಲಲಿತೆಯಂತೂ ಮನೆಗೆಲಸಗಳನ್ನು ಸುಮಿತ್ರೆಗೆ ವಹಿಸಿ, ಸದಾ ಗಂಡನ ಪಕ್ಕದಲ್ಲಿಯೇ ಕುಳಿತು ಆರೈಕೆ ಮಾಡಿದಳು. ವೆಂಕಮ್ಮನ ಕೊರಗು ಹೆಚ್ಚಿತು.

ನಾಗಪ್ಪನವರ ಔದಾಸೀನ್ಯ ರೋಗವನ್ನು ಉಲ್ಬಣಾವಸ್ಥೆಗೇರಿಸಿತು. ಅವರಂತೂ ಕ್ರಿಮಿನಲ್ ಕೇಸಿನ ನೆಪ ಹೂಡಿ ಬೆಂಗಳೂರು ಸೇರಿದರು. ಅವರು ಹೋದ ಎರಡನೆಯ ದಿನವೇ ನಾಣಿಯ ಸ್ಥಿತಿ ಚಿಂತಾಜನಕವಾಯಿತು.

ವೆಂಕಮ್ಮ ಪಂಡಿತರಿಗೆ ಹೇಳಿ ಕಳುಹಿಸಿದಳು. ತಡಮಾಡದೆ ಬಂದ ಪಂಡಿತರು ನಾಡೀ ಪರೀಕ್ಷಿಸಿ–

"ಕೈಮೀರಿದೆ ವೆಂಕಮ್ಮನೋರೆ, ನನ್ನ ನಾಟಿ ಔಷಧಿ ಈಗ ಏನೂ ಪ್ರಯೋಜನವಾಗುವುದಿಲ್ಲ–ಗಡುವು ಮೀರಿದೆ"

"ಹಾಗಾದರೆ ಏನುಗತಿ ಸ್ವಾಮಿ ?"

"ಕೊನೆಯ ಪ್ರಯತ್ನವೆಂದುಕೊಂಡು ಎರಡು ಇಂಜಕ್ಷನ್ ಕೊಡಿಸಿ, ಆಮೇಲೆ ಅದೃಷ್ಟವಿದ್ದ ಹಾಗೆ ಆಗಲಿ"

ವೆಂಕಮ್ಮನಿಗೆ ಮತ್ತೆ ಚಿಂತೆಗಿಟ್ಟುಕೊಂಡಿತು. ಇಂಜಕ್ಷನ್ ಕೊಡಿಸಲು ತನ್ನ ಬಳಿ ಹಣವೆಲ್ಲಿದೆ? ನಾಗಪ್ಪನವರಾದರೂ ಇದ್ದಿದ್ದರೆ ಏನಾದರೂ ಮಾಡುತ್ತಿದ್ದರೇನೊ? ಕೊನೆಗೆ ಕಿಟ್ಟುವನ್ನೇ ಹಣ ಕೇಳುವುದೆಂದುಕೊಂಡರು. ಆದರೆ ಸರಸುವಿನ ನೆನಪು ಬಂದಾಗ 'ಕೈ ತೋರಿಸಿ ಅವಲಕ್ಷಣ' ಎನ್ನಿಸಿ ಕೊಂಡಂತಾಗುತ್ತದೆ ಎಂದು ಹೊಳೆಯಿತು.

"ಅತ್ತೆ ಡಾಕ್ಟರನ್ನು ಕರೆಸದಿದ್ದರೆ ಆಗುವುದಿಲ್ಲ ನನ್ನ ಮಾಂಗಲ್ಯ ಉಳಿಸುವವರು ನೀವೇ ಅತ್ತೆ"

ಗದ್ಗದ ಕಂಠದಿಂದ ನುಡಿದಳು ಲಲಿತೆ. ಆದರೆ ವೆಂಕಮ್ಮ ಮೌನವಾಗಿ ಚಿಂತಿಸುತ್ತಿದ್ದುದನ್ನು ಕಂಡು–

"ಯಾತಕ್ಕೆ ಯೋಚಿಸುತ್ತೀರಿ ಅತ್ತೆ !"

"ಏನೂ ಇಲ್ಲವ್ಮ ಕಿಟ್ಟುವಿಗೆ ಹೇಳಿ ಬರುತ್ತೇನೆ. ಯಾರದ್ದಾದರೂ ಬೈಸಿಕಲ್ ತೆಗೆದುಕೊಂಡು ಹೋಗಿ ಡಾಕ್ಟರನ್ನು ಕರೆದುಕೊಂಡು ಬರಲಿ"

ಎನ್ನುತ್ತಾ ವೆಂಕಮ್ಮ ಎದ್ದು ಹೋದಳು. ಅವಳ ಮನಸ್ಸಿನಲ್ಲಿ 'ಡಾಕ್ಟರ ಫೀಸಿನ ಹಣ–ನಾಣಿಯ ಪ್ರಾಣ' ಒಂದಕ್ಕೊಂದು ಪೈಪೋಟಿ ನಡೆಸುವಂತಿತ್ತು.

ಮಧ್ಯಾಹ್ನ ಮೂರುಗಂಟೆಯ ವೇಳೆಗೆ ಕಿಟ್ಟು ಡಾಕ್ಟರನ್ನು ಕರೆತಂದ. ನಾಣಿಯನ್ನು ಪರೀಕ್ಷಿಸಿ, ಮುಖದಲ್ಲಿಯೇ ಅವರು ನಿರಾಶೆಯನ್ನು ಸೂಚಿಸಿದರು,

"ಡಾಕ್ಟರೇ, ಹೇಗಿದೆ ?"

ಎಲ್ಲರೆದುರೂ ಕಿಟ್ಟು ಕೇಳಿದ ಪ್ರಶ್ನೆ ಅದು. ಡಾಕ್ಟರು ತಮ್ಮ ಕೈ ಚೀಲವನ್ನು ತೆಗೆದುಕೊಂಡು ಹೊರ ಹೊರಟರು. ಕಿಟ್ಟುವೂ ಹಿಂಬಾಲಿಸಿದ.

"ಮಿಂಚಿ ಹೋಗಿದೆ ಮಿಸ್ಟರ್ ಕೃಷ್ಣರಾವ್. ಐ ಆಮ್ ಸಾರಿ"

ಎಂದರು. ಆ ಮಾತು ಲಲಿತೆಗೂ ಕೇಳಿಸಿತು.

"ಡಾಕ್ಟರೇ, ಡಾಕ್ಟರೇ, ಹೇಗಾದರೂ ಮಾಡಿ ಅವರ ಪ್ರಾಣ ಉಳಿಸಿ ಡಾಕ್ಟರೆ"

ಲಲಿತೆಯ ಆರ್ತನಾದ ಡಾಕ್ಟರನ್ನು ಕ್ಷಣಕಾಲ ಹಿಡಿದು ನಿಲ್ಲಿಸಿತು. ಅವಳ ಕಾಂತಿ ವಿಹೀನವಾದ ಮುಖ, ಚಿಂತೆಯಿಂದ ಬಳಲಿದ್ದ ಕಣ್ಣುಗಳು, ಮುಂಗೂದಲು ಕೆದರಿದ ತಲೆಯನ್ನು ನೋಡಲಾರದೆ ಡಾಕ್ಟರೂ ಸಂಕಟದಿಂದ ಮುಖ ತಗ್ಗಿಸಿದರು,

"ಡಾಕ್ಟರೇ, ಒಂದು ಇಂಜಕ್ಷನ್ ಕೊಟ್ಟು ನೋಡಿ ಡಾಕ್ಟರೇ. ನನ್ನ ಮಾಂಗಲ್ಯ ಭಾಗ್ಯ ಹೇಗಿವೆಯೋ–ದೇವರದಯೆ !"

ಲಲಿತೆಯ ಕಣ್ಣುಗಳಿಂದ ಹನಿಯುದುರಿತು. ಡಾಕ್ಟರು ಇನ್ನೂ ಎರಡು ನಿಮಿಷ ಯೋಚಿಸಿದರು.

"ಆಗಲಿಯಮ್ಮ, ನಿಮ್ಮ ಮಾತು ತೆಗೆದು ಹಾಕುವುದಿಲ್ಲ; ಒಂದು ಇಂಜಕ್ಷನ್ ಕೊಟ್ಟು ಪ್ರಯತ್ನಿಸುತ್ತೇನೆ."

ಎನ್ನುತ್ತಾ ನಾಣಿಯು ಬಳಿಗೆ ಬಂದರು. ತಮ್ಮ ಕೈ ಚೀಲದಿಂದ ಸಲಕರಣೆಗಳನ್ನು ಹೊರಗೆ ತೆಗೆದುಕೊಂಡರು.

ಲಲಿತೆ ಅಲ್ಲಿ ನಿಲ್ಲದೆ ದೇವರ ಕೋಣೆಗೆ ಓಡಿದಳು. ದೀರ್ಘದಂಡ ನಮಸ್ಕಾರಮಾಡಿ ಬಿಕ್ಕಿ ಬಿಕ್ಕಿ ಅಳುತ್ತಾ–

"ಸ್ವಾಮೀ, ನನ್ನ ಮಾಂಗಲ್ಯ ಉಳಿಸು ತಂದೆ. ಅವರ ಪ್ರಾಣಕ್ಕೆ ಬದಲು ನನ್ನ ಪ್ರಾಣ ತೆಗೆದುಕೊ. ನನ್ನಿಂದ ಅವರಿಗೆ ಎಳ್ಳಷ್ಟೂ ಸುಖವಿಲ್ಲ. ನಾನಿದ್ದರೆ ಅವರ ಕೊರಗು ನಿಲ್ಲುವುದಿಲ್ಲ. ಮೊದಲು ನನ್ನನ್ನು ನಿನ್ನ ಪಾದಕ್ಕೆ ಸೇರಿಸಿಕೊಳ್ಳಪ್ಪಾ. ನನ್ನ ಪತಿಯ ಪ್ರಾಣ ಉಳಿಸಿ ನೂರು ವರ್ಷ ಸುಖವಾಗಿ ಬಾಳುವಂತೆ ದಯಮಾಡಪ್ಪಾ. ನನ್ನ ಪ್ರಾರ್ಥನೆಯನ್ನು ಕಡೆಗಣಿಸಬೇಡ ಸ್ವಾಮೀ, ದೇವದೇವ" ಎಂದು ಹತ್ತಾರುಬಾರಿ ಮೊರೆಯಿಟ್ಟಳು. ಅದು ದೇವರ ಕಿವಿಗೂ ಕೇಳಿಸಿರಬೇಕು !

"ಅತ್ತಿಗೆ, ಅಣ್ಣಯ್ಯನಿಗೆ ಜ್ಞಾನ ಬಂದಿದೆ. ನೋಡು ಬಾ ಅತ್ತಿಗೆ"

ಸುಮಿತ್ರೆಯ ಸಂತೋಷದ ಮಾತು ಲಲಿತೆಯ ಕಿವಿ ಮುಟ್ಟಿತು.

ದುಃಖದ ಕಣ್ಣೀರು ಆನಂದಾಶ್ರುವಾಗಿ ಪರಿವರ್ತಿತವಾಯಿತು. ಅಂಗಳಕ್ಕೆ ಓಡಿ ಬಂದಳು ಲಲಿತೆ.

"ನಿನ್ನ ಮಾಂಗಲ್ಯದ ಪುಣ್ಯ ಚೆನ್ನಾಗಿದೆಯಮ್ಮ ಲಲಿತು. ನನ್ನ ನಾಣಿಯ ಪ್ರಾಣ ಉಳಿಯಿತು."

ವೆಂಕಮ್ಮ ಲಲಿತೆಯ ಬಳಿಗೆ ಬಂದು ನುಡಿದರು. ಅಷ್ಟರಲ್ಲಾಗಲೇ ಒಂದೇ ಸಮನೆ ಮೂರು ಇಂಜಕ್ಷನ್ ಕೊಟ್ಟಿದ್ದರು ಡಾಕ್ಟರು.

"ಈ ಔಷಧಿ ತರಿಸಿಕೊಡಿ." ಎನ್ನುತ್ತಾ ಡಾಕ್ಟರು ಸಣ್ಣ ಚೀಟಿ ಯಲ್ಲಿ ಬರೆದು ಕೊಟ್ಟರು.

"ಎಷ್ಟಾಗುತ್ತದೆ ಡಾಕ್ಟರೇ? ಎಲ್ಲಿ ಸಿಗುತ್ತದೆ?"

ಆತುರದಿಂದ ಪ್ರಶ್ನಿಸಿದಳು ಲಲಿತ.

"ನಾಲ್ಕು ಔನ್ಸಿನ ಸೀಸೆ ತರಿಸಬೇಕಮ್ಮ. ಹದಿನಾರು ರೂಪಾಯಿ ಆಗುತ್ತದೆ."

"ನಿಮ್ಮ ಹತ್ತಿರ ಆ ಔಷಧಿ ಇದೆಯೋ ಡಾಕ್ಟರೇ?"

"ಇಲ್ಲಮ್ಮ ಬೆಂಗಳೂರಿನಿಂದಲೆ ತರಿಸಬೇಕು."

ಲಲಿತೆ ಚಿಂತಾಮಗ್ನಳಾದಳು.

"ನಿಮಗೆ ಬೇಕಾದರೆ ನಾನೇ ತರಿಸಿ ಕೊಡುತ್ತೇನೆ. ನಾಳೆ ಬರುವಾಗ ತೆಗೆದುಕೊಂಡೇ ಬರುತ್ತೇನೆ."

"ಹಾಗೇ ಮಾಡಿ ಡಾಕ್ಟರೆ. ಅಷ್ಟು ಮಾಡಿದರೆ ತುಂಬ ಉಪ ಕಾರ. ಇನ್ನೇನು ಭಯವಿಲ್ಲತಾನೆ ಡಾಕ್ಟರೆ?"

"ಈಗ ಧೈರ್ಯವಾಗಿರಬಹುದಮ್ಮ. ಮೊದಲು ನೋಡಿದಾಗ ನನಗೇ ನಿರಾಸೆಯಾಗಿತ್ತು. ಇನ್ನು ಪರವಾಗಿಲ್ಲ." ಎಂದರು ಡಾಕ್ಟರು.

ಲಲಿತೆ ಒಳಗೆ ಹೋಗಿ, ತನ್ನ ಪೆಟ್ಟಿಗೆ ತೆರದು ಇಪ್ಪತ್ತು ರೂಪಾಯಿಗಳನ್ನು ತಂದು ಡಾಕ್ಟರ ಕೈಗಿತ್ತಳು.

"ಅವರನ್ನು ಸಂಪೂರ್ಣ ಗುಣಪಡಿಸುವುದು ನಿಮ್ಮಭಾರ ಡಾಕ್ಟರೆ"

"ಆಗಲಮ್ಮ"

ಎನ್ನುತ್ತಾ ಡಾಕ್ಟರು ಹೊರಟರು. ಕಿಟ್ಟು ಅವರ ಔಷಧಿ ಚೀಟಿ ವನ್ನು ತೆಗೆದುಕೊಂಡು ಹಿಂಬಾಲಿಸಿದ.

"ಅವರು ಯಾರು ಮಿಸ್ಟರ್ ಕೃಷ್ಣರಾವ್"

"ನನ್ನ ತಮ್ಮನ ಹೆಂಡತಿ ಡಾಕ್ಟರ್. ಮದುವೆಯಾಗಿ ಇನ್ನೂ ಮೂರು ತಿಂಗಳೂ ಆಗಿಲ್ಲ."

"ಅವರು ತುಂಬಾ ಅದೃಷ್ಟವಂತರು !"

"ಯಾಕೆ ಡಾಕ್ಟರ್ ?"

"ನನಗೇ ರೋಗಿಯ ವಿಷಯದಲ್ಲಿ ನಂಬಿಕೆಯಿರಲಿಲ್ಲ. ನಾನು ಹಾಗೆಯೇ ಹೊರಟುಹೋಗುತ್ತಿದ್ದೆ. ನಿಮ್ಮ ತಮ್ಮನ ಪ್ರಾಣಕ್ಕೆ ಅನ್ಯಾಯವಾಗಿ ಆಪತ್ತು ಬರುತ್ತಿತ್ತು. ಆದರೆ ಆಕೆ ಕೊನೆಯ ಸಾರಿ ಪ್ರಯತ್ನಿಸಿ.ಎಂದಾಗ-ನೋಡಿದಿರಾ ಹೇಗಾಯಿತು ?"

"ಹೌದು ಡಾಕ್ಟರ್. ಆಕೆ ನಮ್ಮ ಮನೆಗೆ ಬಂದ ಸೊಸೆಯರಲ್ಲೆಲ್ಲಾ ತುಂಬ ಒಳ್ಳೆಯವಳು. ನಮ್ಮ ತಾಯಿಯಂತೂ ಆಕೆಯನ್ನು ತುಂಬ ಕೊಂಡಾಡುತ್ತಾರೆ "

"ಅಂತಹವರು ಹತ್ತಕ್ಕೆ ಒಬ್ಬರೂ ಈಗಿನ ಕಾಲದಲ್ಲಿ ಸಿಕ್ಕುವುದಿಲ್ಲ ಕೃಷ್ಣರಾವ್. ಪುಣ್ಯಮಾಡಿರಬೇಕು "

ಎನ್ನುತ್ತಾ ಡಾಕ್ಟರು ಬೈಸಿಕಲ್ ಹತ್ತಿದರು.

ಅಂಗಳದಲ್ಲಿದ್ದ ವೆಂಕಮ್ಮನೂ ಅದೇ ಮಾತನ್ನೇ ಹೇಳಿದರು—

"ನಿನ್ನಂಥ ಸೊಸೆ ಸಿಕ್ಕ ಬೇಕಾದರೆ ಪುಣ್ಯಮಾಡಿರಬೇಕು ಲಲಿತು. ಆದರೆ, ನನ್ನಂಥ ಅತ್ತೆ ಹತ್ತಿರ ಏಗೋದು ತುಂಬ ಕಷ್ಟ !"

"ಹಾಗನ್ನ ಬೇಡಿ ಅತ್ತೆ. ನಿಮ್ಮ ಪಾದಸೇವೆ ಸಿಕ್ಕಿದರೆ ಸಾಕು ಅಂತ ಎಷ್ಟೋ ಜನ ಕಾದಿದ್ದಾರೆ. ದೇವತೆಯಂಥ ದೊಡ್ಡ ಜೀವ ನಿಮ್ಮದು."

"ನೀನು ಹುಚ್ಚಿ ಕಣೆ ಲಲಿತು."

"ಆ ಹುಚ್ಚು ಹಿಡಿಸಿದವರು ನೀವೇ ಅತ್ತೆ!" ಎಂದು ಲಲಿತೆಯೂ ಸರಸವಾಗಿ ನುಡಿದಳು.

ಮರುದಿನ ಬಂದ ಡಾಕ್ಟರು ಔಷಧಿ ತಂದುಕೊಟ್ಟು, ನಾಣಿಯನ್ನು ಮತ್ತೊಮ್ಮೆ ಪರೀಕ್ಷಿಸಿ ಮನೆಯವರಿಗೆಲ್ಲ ಧೈರ್ಯಹೇಳಿ ಹೋದರು.

ದಿನದಿನಕ್ಕೂ ಗುಣ ಮುಖನಾಗುತ್ತಿದ್ದ ನಾಣಿ. ಎಲ್ಲರ ಕಣ್ಣೂ ತಪ್ಪಿಸಿ ಶಾಂತುವೂ ಬಂದು ತನ್ನ ಪ್ರಿಯ ತಮ್ಮನನ್ನು ನೋಡಿ ಹೋಗುತ್ತಿದ್ದಳು.

ಒಂದು ದಿನ ಬಂದ ಶಾಂತುವನ್ನು ನಾಣಿ ಕೈಹಿಡಿದು ತನ್ನ ಬಳಿ ಕೂಡಿಸಿಕೊಂಡು—

"ನನ್ನನ್ನು ಮರೆತೇ ಬಿಟ್ಟೆಯಾ ಶಾಂತು ?"—ಎಂದ.

"ಮರೆತಿದ್ದರೆ ಈಗೇಕೆ ಬರುತ್ತಿದ್ದೆ ?"

"ನಾನು ಮೋಸಮಾಡಿದೆ ಅಲ್ಲವೇ ಶಾಂತು ?"

"ಆ ಮಾತು ನಾನು ಯಾವ ಬಾಯಲ್ಲಿ ಆಡಲಿ"

"ಇಲ್ಲ ಚಿನ್ನ, ಖಂಡಿತವಾಗಿಯೂ ನಿನ್ನನ್ನು ವಂಚಿಸಿದೆ"

"ಇನ್ನೊಂದು ಸಾರಿ ಆ ಮಾತು ಆಡಬೇಡಿ"

"ನನ್ನ ದುರದೃಷ್ಟಕ್ಕೆ ಯಾರು ಹೊಣೆ ಶಾಂತು ?"

"ಹಾಗೇಕೆನ್ನುತ್ತೀರಿ ? ನೀವು ನಿಜವಾಗಿಯೂ ಅದೃಷ್ಟವಂತರು. ಲಲಿತುವಂಥ ಹೆಂಡತಿ ಸಿಕ್ಕಬೇಕಾದರೆ ಪುಣ್ಯಮಾಡಿರಬೇಕು "

"ಅವಳನ್ನು ನೋಡುವುದಕ್ಕೆ ಕೂಡ ನನಗೆ ಮನಸ್ಸಿಲ್ಲ ಶಾಂತು"

"ಒಂದು ಸಾರಿ ಅವಳ ಮುಖ ನೋಡಿ. ಅವಳ ಗುಣವನ್ನೆಲ್ಲಾ ಆ ಮುಖವೇ ಹೇಳುತ್ತದೆ."

"ಅದು ಸಾಧ್ಯವಿಲ್ಲ ಶಾಂತು"

ಅಷ್ಟರಲ್ಲಿ ಸುಮಿತ್ರೆ ಒಳಗೆ ಬಂದಳು. ಶಾಂತು ದೂರ ಸರಿದು ನಿಂತಳು.

"ನಾಣಿ ಅಣ್ಣಯ್ಯನ್ನ ಮಾತನಾಡಿಸೋಲ್ವ ಶಾಂತು ?"

"ಮಾತನಾಡಿಸಿದೆ ಕಣೆ.......ಹೋಗ್ತೀನಮ್ಮ" ಎನ್ನುತ್ತಾ ಶಾಂತು ತಲೆ ತಗ್ಗಿಸಿಕೊಂಡು ಹೊರಟು ಬಿಟ್ಟಳು. ಅವಳಿಗೆ ಎದುರಾದ ಲಲಿತೆ—"ಬಾ ಶಾಂತಮ್ಮ, ಬಂದವಳು ಹಾಗೆಯೇ ಹೊರಟು ಹೋಗುತ್ತಿದ್ದೀಯಲ್ಲಾ !"

"ಇಲ್ಲ, ನಮ್ಮ ತಾಯಿ ಕರೆಯುತ್ತಿದ್ದಾರೆ." ಎನ್ನುತ್ತಾ ಶಾಂತು ಓಡಿಹೋದಳು. ತಾನು ನಾಣಿಯ ಬಳಿ ಕುಳಿತಿದ್ದುದನ್ನು ಸುಮಿತ್ರೆ ನೋಡಿದ್ದರಿಂದ, ಆ ವಿಷಯವನ್ನು ತನ್ನ ಅತ್ತಿಗೆಗೂ ಹೇಳಿ, ನಾಣಿಯ ಮೇಲೆ ಅನುಮಾನ ಪಡುವಂತೆ ಮಾಡುತ್ತಾಳೇನೋ ಎಂಬ ಅಂಜಿಕೆ ಶಾಂತುವನ್ನು ಬಾಧಿಸುತ್ತಿತ್ತು. ಆದರೆ ಲಲಿತೆಯ ಗುಣವನ್ನು ತಿಳಿದಿದ್ದ ಆಕೆಗೆ "ಹಾಗಾಗಲಾರದು" ಎಂಬ ಧೈರ್ಯವೂ ಮಿಂಚುತ್ತಿತ್ತು.

"ಶಾಂತಮ್ಮ ಬಂದು ಹಾಗೇ ಹೊರಟು ಹೋದಳಲ್ಲಾ. ಇಲ್ಲೇ ಎರಡುಗಳಿಗೆ ಕೂಡಿಸಿಕೋಬಾರದಾಗಿತ್ತೆ ಸುಮಿತ್ರೆ ?"

ಎಂದು ನಾಣಿಯ ಬಳಿಗೆ ಬಂದ ಲಲಿತ ಹೇಳಿದಳು. ಸುಮಿತ್ರೆ ಉತ್ತರಿಸದೆ ಸುಮ್ಮನೆ ಕುಳಿತಿದ್ದಳು. ನಾಣಿ ನಿದ್ದೆ ಬಂದವನಂತೆ ಕಣ್ಣು ಮುಚ್ಚಿಕೊಂಡಿರುವುದನ್ನು ಕಂಡು—

"ನಿಮ್ಮಣ್ಣಯ್ಯನವರಿಗೆ ನಿದ್ದೆ ಬಂದಹಾಗಿದೆ ಅಲ್ವೆ ಸುಮಿತ್ರೆ ?"

"ಶಾಂತು ಬಂದಾಗ ಕಣ್ಣು ಬಿಟ್ಟುಕೊಂಡೇ ಇದ್ದನಲ್ಲ ಅತ್ತಿಗೆ !"

"ಆಮೇಲೆ ನಿದ್ದೆ ಬಂದಿರಬೇಕು ಪಾಪ. ಹೋಗೋಣ ಬಾ"

ಲಲಿತೆ ಸುಮಿತ್ರೆಯನ್ನು ಕರೆದುಕೊಂಡು ಹಿತ್ತಲಿಗೆ ಬಂದಳು. ಸಂಜೆಯ ಬಿಸಿಲು ಹಿತವಾಗಿದ್ದುದರಿಂದ, ಬಚ್ಚಲು ಒಪ್ಪಾರಿಗೆ ಹತ್ತಿರದಲ್ಲಿದ್ದ ಹಾಸುಗಲ್ಲಿನ ಮೇಲೆ ಇಬ್ಬರೂ ಕುಳಿತರು.

"ಅತ್ತಿಗೆ, ಈಗ ಅವಲಕ್ಕಿ ಇದ್ದರೆ ಚೆನ್ನಾಗಿರುತ್ತೆ–ತಿನ್ನೋದಿಕ್ಕೆ"

"ಅಮ್ಮ ಸೀತಕ್ಕನ ಮನೆಗೆ ಹೋಗಿದ್ದಾರೆ. ಅವರಿದ್ದಿದ್ದರೆ ಒಂದಿಷ್ಟು ಇಸುಕೋಬಹುದಾಗಿತ್ತು"

"ನೀನೇ ತೆಗೆದುಕೊಡಬಹುದು, ಅತ್ತಿಗೆ. ಅಮ್ಮ ಬೈಯ್ಯುವುದಿಲ್ಲ"

"ಬೇಡಮ್ಮ. ನಾನು ಅದನ್ನೆಲ್ಲಾ ಮುಟ್ಟಬಾರದು"

"ಪರವಾಗಿಲ್ಲ ಅತ್ತಿಗೆ"

"ಹಾಗೆಲ್ಲ ಮುಟ್ಟಬಾರದು ಸುಮಿತ್ರ. ನೀನೂ ಅಷ್ಟೆ. ನಾಳೆ ಮದುವೆಯಾಗಿ ಅತ್ತೆ ಮನೆಗೆ ಹೋದ ಮೇಲೂ ಹಾಗೆಲ್ಲಾ ಸ್ವಾತಂತ್ರ್ಯ ವಹಿಸಬಾರದು !"

"ನೀನು ತುಂಬ ಹಳೆಯ ಕಾಲದವಳು ಅತ್ತಿಗೆ. ಈ ಕಾಲದಲ್ಲಿ ಅತ್ತೆಯರನ್ನೆಲ್ಲಾ ಕತ್ತೆಗಳಾಗಿ ಮಾಡಿ, ಸೊಸೆಯರು ಸ್ವಾತಂತ್ರ್ಯ ತೆಗೆದುಕೋ ಬೇಕು. ಗಂಡಂದಿರು ವಹಿಸಿಕೊಂಡು ಬಂದರೆ ಅವರ ಜುಟ್ಟು ಹಿಡಿದು ಜೂಟಾಟ ಆಡಿಸಬೇಕು !"

"ಇದೇನೇ ಸುಮಿತ್ರ, ಇಷ್ಟು ಕಲಿತು ಬಿಟ್ಟಿದ್ದೀ? ಅಬ್ಬಾ ! ನೀನು ಸಾಮಾನ್ಯ ಅಲ್ಲ ಕಣೆ"

"ನಾನೇನೂ ಕಲೀಲಿಲ್ಲ ಅತ್ತಿಗೆ–ನಮ್ಮ ಕಿಟ್ಟಣ್ಣನ ಹೆಂಡತೀನ

ನೋಡಿ_ನಿಜವೋ ಸುಳ್ಳೋ ಗೊತ್ತಾಗುತ್ತೆ !"

"ಅವರವರ ಪಾಡು ಅವರವರಿಗೆ. ಒಬ್ಬರು ಮಾಡುತ್ತಾರೆ ಅಂತ ನಾವೂ ಮಾಡಬಾರದು ಸುಮಿತ್ರ. ಇದ್ದಷ್ಟು ದಿನವೂ ಹತ್ತು ಜನರ ಬಾಯಲ್ಲಿ ಒಳ್ಳೆಯವಳು ಅನ್ನಿಸಿಕೊಳ್ಳಬೇಕಮ್ಮ. ಆಗಲೇ ಹೆಣ್ಣುಮಕ್ಕಳು ಹುಟ್ಟಿದ ಮನೆಗೂ ಹೊಕ್ಕ ಮನೆಗೂ ಗೌರವ ಬರುವುದು"

"ಹೌದು ಅತ್ತಿಗೆ. ನಾನು ತಮಾಷೆಗೆ ಹೇಳಿದೆ ಅಷ್ಟೆ. ನಿನ್ನ ಮಾತು ಮೀರುತ್ತೇನೆಯೇ ನಾನು ?"

ಮುಗ್ಧಳಾಗಿ ಹೇಳಿದ ಸುಮಿತ್ರೆಯನ್ನು ವಾತ್ಸಲ್ಯ ತುಂಬಿದ ನೋಟದಿಂದ ನಿಟ್ಟಿಸಿದಳು ಲಲಿತ.

"ಯಾಕತ್ತಿಗೆ ಹಾಗೇ ನೋಡುತ್ತೀಯ ?"

"ಸುಮ್ಮನೆ ಸುಮಿತ್ರ. ನಿನ್ನನ್ನು ನೋಡಿದರೆ 'ಅವರನ್ನು' ನೋಡಿದ ಹಾಗೆಯೇ ಆಗುತ್ತದೆ! "

"ನಾಣಿ ಅಣ್ಣಯ್ಯನಿದ್ದ ಹಾಗೆಯೇ ಇದ್ದೀನಲ್ಲವೇ ಅತ್ತಿಗೆ"

"ಹೌದಮ್ಮ"

"ಶಾಂತೂನೂ ಎಷ್ಟೋಸಾರಿ ಹಾಗೆ ಹೇಳಿದ್ದಾಳೆ ಅತ್ತಿಗೆ. ಒಂದೊಂದು ನಾರಿನಂತೂ ಗಟ್ಟಿಯಾಗಿ ಹಿಡಿದುಕೊಂಡು........ವುಹ್ನುಮ್ಮ. ನಾ ಹೇಳೋಲ್ಲ!"

ಸುಮಿತ್ರೆ ನಾಚಿಕೊಂಡು ಮಾತು ನಿಲ್ಲಿಸಿದಳು.

"ಹ್ನು. ಹೇಳು....ಪರವಾಗಿಲ್ಲ"

ಎರಡು ಕ್ಷಣ ಯೋಚಿಸಿದ ಸುಮಿತ್ರೆ–"ಇದೋ ಹೀಗೆ ಮಾಡಿಬಿಡುತ್ತಾಳೆ ಅತ್ತಿಗೆ" ಎನ್ನುತ್ತಾ ಲಲಿತೆಯ ಕೆನ್ನೆಗೆ ಮುತ್ತಿಟ್ಟಳು.

"ಇದೇನೇ ಸುಮಿತ್ರೆ ?"

"ನಾನಲ್ಲ ಅತ್ತಿಗೆ. ಶಾಂತು........"

"ನಿನ್ನ ಕಂಡರೆ ಅಷ್ಟು ಪ್ರೀತಿನೇನೆ ಶಾಂತಮ್ಮನಿಗೆ"

"ನನಗಿಂತ ನಾಣಿ ಅಣ್ಣಯ್ಯನ್ನ ಕಂಡರೆ... ಇಲ್ಲ ಅತ್ತಿಗೆ, ಏನೂ ಇಲ್ಲ; ನನ್ನ ಕಂಡರೆ ಅವಳಿಗೆ ತುಂಬ ಪ್ರೀತಿ !"

ಅರ್ಧದಲ್ಲಿಯೇ ಮಾತು ಬದಲಿಸಿದಳು ಸುಮಿತ್ರೆ. ಅವಳು

ಏನೋ ಮುಚ್ಚಿಡುತಿದ್ದಾಳೆಂದು ಲಲಿತೆಗೆ ತಿಳಿಯಿತು. ಆದರೆ ಅದೇನು ?

"ಸುಮಿತ್ರ ನಾನು ಇನ್ಮೇಲೆ ನಿನ್ನ ಹತ್ತಿರ ಮಾತಾಡೋಲ್ಲ."

"ಯಾಕತ್ತಿಗೆ? ನಾನೇನು ಮಾಡಿದೆ?"

"ಶಾಂತು ವಿಷಯ ನನ್ನ ಹತ್ತಿರ ಏನೋ ಮುಚ್ಚಿಡುತ್ತಿದ್ದೀಯಾ ನೀನು. ಅದನ್ನೆಲ್ಲಾ ಸರಿಯಾಗಿ ಹೇಳಿದರೆ ನಿನ್ನ ಹತ್ತಿರ ಮಾತಾಡ್ತೀನಿ"

"ನಂಗೇನೂ ಗೊತ್ತಿಲ್ಲ ಅತ್ತಿಗೆ"

"ಇರಲಿ, ಬಿಡು. ಇನ್ನ್ಯಾಕೆ ನಿನ್ನ ಹತ್ತಿರ ಮಾತು ?"

ಸುಮಿತ್ರೆ ಸ್ವಲ್ಪಹೊತ್ತು ಯೋಚಿಸಿದಳು. ಅತ್ತಿಗೆಯ ಸ್ನೇಹ ಕಳೆದುಕೊಳ್ಳುವ ಮನಸ್ಸಿಲ್ಲ. ಶಾಂತು-ನಾಣಿಯರ ಪ್ರಣಯ ಪ್ರಸಂಗವನ್ನು ಹೇಳುವಂತಿಲ್ಲ. ಹಾಗೆ ಹೇಳಿದರೆ ಅದರಿಂದ ಅತ್ತಿಗೆ ನೊಂದುಕೊಳ್ಳುತ್ತಾಳೆ. ಅಮ್ಮ ತನ್ನನ್ನು ಬೈಯ್ಯುತ್ತಾಳೆ. ಶಾಂತವೂ ತನಗೆ ಅವಮಾನವಾಯಿತೆಂದು ತನ್ನೊಡನೆ ಮಾತು ನಿಲ್ಲಿಸುತ್ತಾಳೆ. ಹೇಳದಿದ್ದರೆ ಅತ್ತಿಗೆಯ ಸ್ನೇಹ ಸುಖವೇ ಕಳೆದು ಹೋಗುತ್ತದೆ.

"ನಾನು ಯಾರಿಗೂ ಹೇಳುವುದಿಲ್ಲ, ಈ ಕಿವಿಯಿಂದ ಕೇಳಿ ಆ ಕಿವಿಯಿಂದ ಬಿಟ್ಟು ಬಿಡುತ್ತೇನೆ; ಹೇಳು ಸುಮಿತ್ರ "

ಉಪಾಯಗಾಣದೆ ಸುಮಿತ್ರೆ ಹೇಳಬೇಕಾಯಿತು. ನಾಣಿ-ಶಾಂತು ಪರಸ್ಪರ ಪ್ರೀತಿಸುತ್ತಿದ್ದುದನ್ನೂ, ವರದಕ್ಷಿಣೆಯ ಆಸೆಗೆ ತನ್ನ ತಂದೆ ಶಾಂತುವನ್ನು ಒಪ್ಪದೆ ಲಲಿತೆಯನ್ನು ನಾಣಿಗೆ ತಂದುಕೊಂಡುದನ್ನು ಸುಮಿತ್ರೆ ವಿವರಿಸಿ ಹೇಳಿದಾಗ—

"ನನಗೆ ಯಾವ ನರಕವನ್ನು ಸೃಷ್ಟಿಸಿದ್ದಾನೋ ಆ ದೇವರು. ನಾನು ತುಂಬ ಪಾಪಿ, ಸುಮಿತ್ರ" ಎಂದು ಗದ್ಗದ ಕಂಠದಲ್ಲಿ ನುಡಿದಳು ಲಲಿತ.

"ಹಾಗನ್ನಬೇಡ ಅತ್ತಿಗೆ. ನಿನ್ನಂತಹ ಒಳ್ಳೆಯವಳಿಗೆ ನರಕ ಸೃಷ್ಟಿಸುವಷ್ಟು ಕೆಟ್ಟವನಲ್ಲ ಆ ದೇವರು!"

"ಸುಮಿತ್ರ ನಾನು ನರಕಕ್ಕೆ ಹೋದರೂ ಚಿಂತೆಯಿಲ್ಲ. ನನ್ನ ದೇವರು ಇಲ್ಲೇ ಸ್ವರ್ಗ ಸುಖವನ್ನು ಅನುಭವಿಸಿದರೆ ಅಷ್ಟೇ ತೃಪ್ತಿ."

"ನಿನ್ನಂಥವಳಿರುವಾಗ ನಾಣಿ ಅಣ್ಣಯ್ಯನಿಗೆ ಬೇರೆ ಸ್ವರ್ಗ ಬೇಕೇ ಅತ್ತಿಗೆ?"

"ಹಾಗಲ್ಲನ್ಮ. ನನ್ನಿಂದ ಅವರಿಗೆ ನಿಜವಾಗಿಯೂ ಸುಖವಿಲ್ಲ, ಮನಸ್ಸಿನಲ್ಲಿಯೇ ಅವರು ಕೊರಗುತ್ತಿರುವುದು ನನಗೆ ಗೊತ್ತಿದೆ, ಶಾಂತಮ್ಮನೇ ಅದಕ್ಕೆ ಔಷಧ ಸುಮಿತ್ರ."

"ಶಾಂತುವಿನ ಆಸೆ ಇನ್ನೇಕೆ ಅತ್ತಿಗೆ?"

"ಅವಳಿಲ್ಲದಿದ್ದರೆ ನನ್ನ ಸ್ವಾಮಿಯ ಕೊರಗು ನಿಲ್ಲುವುದಿಲ್ಲಮ್ಮ"

"ಹಾಗಾದರೆ ಏನು ಮಾಡಬೇಕು ಅತ್ತಿಗೆ?"

ಲಲಿತು ಸ್ವಲ್ಪ ಹೊತ್ತು ಮೌನವಾಗಿ ಯೋಚಿಸಿದಳು ಅವಳಿಗೆ ಪರಿಹಾರ ಹೊಳೆಯುವುದರೊಳಗಾಗಿ—

"ಮುಸ್ಸಂಜೆಯಾಯಿತು. ಇನ್ನೂ ದೀಪ ಹಚ್ಚಲಿಲ್ಲವೇನೇ ಚುಮ್ಮಿ?" ಎನ್ನುತ್ತಾ ವೆಂಕಮ್ಮ ಒಳಗೆ ಬಂದರು.

ಅವರ ಹಿಂದೆಯೇ ಕಳ್ಳಹೆಜ್ಜೆಯಿಡುತ್ತಾ ಬರುತ್ತಿದ್ದ ರಾಮು-ತಾಯಿಗೆ ಗೊತ್ತಾಗದಂತೆ

ಲಲಿತ-ಸುಮಿತ್ರೆಯರು ಹಿತ್ತಲಿನಿಂದ ಒಳಗೆ ಬಂದರು.

"ಚಿಕ್ಕಣ್ಣಯ್ಯ ಬಂದಿದ್ದಾನೆ ನೋಡೆ ಅಮ್ಮ?"

ರಾಮುವನ್ನು ಕಂಡೊಡನೆ ಸುಮಿತ್ರೆ, ಆಶ್ಚರ್ಯದಿಂದ ಕೂಗಿ ಹೇಳಿದಳು.

"ಅವನೆಲ್ಲಿ ಬರುತ್ತಾನೆಯೇ ಈಗ?"

"ನಾನೇನೂ ಸುಳ್ಳು ಹೇಳೋಲ್ಲ. ನೋಡಮ್ಮ"

ವೆಂಕಮ್ಮ ತಿರುಗಿ ನೋಡಿದಳು ರಾಮು ಅವರ ಬೆನ್ನ ಹಿಂದೆಯೇ ಸರಿದು ನಿಂತ.

"ಯಾಕೆ ನನ್ನನ್ನೆ ಗೇಲಿ ಮಾಡ್ತೀಯಾ? ರಜ ಎಲ್ಲಿ ಬಂತೆ ಅವನಿಗೆ ಬರೋದಿಕ್ಕೆ?"

ವೆಂಕಮ್ಮನ ಮಾತು ಕೇಳಿ ಲಲಿತೆಯೂ ನಗುತ್ತಿದ್ದಳು.

"ಏನು ಕಷ್ಟ ಪಡ್ತಾಇದೆಯೋ ಮಗು-ಬೆಂಗಳೂರಲ್ಲಿ. ಕ್ಷೇಮ ಸಮಾಚಾರಕ್ಕೂ ಎರಡು ತಿಂಗಳಿಂದ ಕಾಗದ ಬರೀಲಿಲ್ಲ"-ಎಂದು ಪೇಚಾಡಿಕೊಳ್ಳುತ್ತ ವೆಂಕಮ್ಮ ಅಂಗಳದ ಹೊಸಿಲು ದಾಟುವಷ್ಟರಲ್ಲಿ-

"ಏನೂ ಕಷ್ಟವಿಲ್ಲಮ್ಮ. ಸುಖವಾಗಿದ್ದೀನಿ."

ಎನ್ನುತ್ತ ಶಾಮು ತಾಯಿಯ ಎದುರು ನಿಂತ. ವೆಂಕಮ್ಮ ಬೆರಗಾದಳು.

"ಚುಮ್ಮಾ ಹೇಳಿದ್ದು ಸುಳ್ಳು ಅಂತ ಇದ್ದೆ. ಯಾವಾಗ ಬಂದೆಯೋ ಶಾಮು?"

"ಈಗ ತಾನೆ ಅಮ್ಮ"

"ಹ್ಞ. ಕೈಕಾಲು ತೊಳೆದುಕೊಂಡು ಬಾ ಹೋಗು–ಮೊದಲು ಕೋಟು ಬಿಚ್ಚು!" ಎಂದಳು ವೆಂಕಮ್ಮ. ಸುಮಿತ್ರೆ ಅಂಗಳದ ದೀಪ ಹಚ್ಚಿಟ್ಟು—"ಅಮ್ಮ, ಚಿಕ್ಕಣ್ಣಯ್ಯ ಏನು ತಂದಿದ್ದಾನೆಯೆ?"

"ಏನು ತರುತ್ತಾನೆ ಪಾಪ. ಅವನ ಹತ್ತಿರ ದುಡ್ಡು ಎಲ್ಲಿದೆಯೋ ಏನಾದರೂ ತರುವುದಕ್ಕೆ?"

ವೆಂಕಮ್ಮನ ಮಾತು ಕೇಳುತ್ತ ಕೇಳುತ್ತ ಸುಮಿತ್ರೆ ಶಾಮುವಿನ ಕೈ ಚೀಲವನ್ನು ಹುಡುಕಾಡಿದಳು. ಅಷ್ಟರಲ್ಲಿ ದೇವರ ಮುಂದೆ ದೀಪ ಹಚ್ಚಿಟ್ಟು ಲಲಿತಯೂ ಅಂಗಳಕ್ಕೆ ಬಂದಳು.

ಸುಮಿತ್ರ ಕೈ ಚೀಲದಲ್ಲಿದ್ದ ಒಂದೆರಡು ಬಟ್ಟೆಗಳನ್ನೂ ಪುಸ್ತಕವನ್ನೂ ಹೊರಗೆ ತೆಗೆದಿಟ್ಟಳು. ಅನಂತರ ಕೈಗೆ ಸಿಕ್ಕಿದ ಕಿತ್ತಳೆ ಹಣ್ಣನ್ನು ತೆಗೆದುಕೊಂಡು—

"ಅಮ್ಮಾ, ಚಿಕ್ಕಣ್ಣಯ್ಯ ಏನು ತಂದಿದ್ದಾನೆ ನೋಡು"

ಎನ್ನುತ್ತ ತಾಯಿಯ ಎದುರಿಗೆ ಹಿಡಿದು ತೋರಿಸಿದಳು.

"ಅವನು ಯಾವಾಗಲೂ ಹಾಗೆಯೇ ಕಣೆ–ಬರಿ ಕೈಯ್ಯಲ್ಲಿ ಬರುವುದೇ ಇಲ್ಲ!" ಎಂದಳು ವೆಂಕಮ್ಮ.

"ಸುಮಿತ್ರ, ಅದು ಯಾವ ಪುಸ್ತಕ?"

"ಯಾವುದೋ ನನಗೆ ಗೊತ್ತಿಲ್ಲ ಅತ್ತಿಗೆ–ನೀನೇ ನೋಡು"

ಸುಮಿತ್ರೆ ಕೊಟ್ಟ ಪುಸ್ತಕವನ್ನು ಲಲಿತೆ ತೆಗೆದು ನೋಡಿದಳು.

"ಕತೆ ಪುಸ್ತಕ ಕಣೆ ಸುಮಿತ್ರ"

"ತೊಗೊ ಅತ್ತಿಗೆ, ಓದು ಚಿಕ್ಕಣ್ಣಯ್ಯ ಬೈಯುವುದಿಲ್ಲ. ಕತೆ ಪುಸ್ತಕ ಓದೋರನ್ನ ಕಂಡರೆ ಅವನಿಗೆ ತುಂಬ ಇಷ್ಟ"

ಎಂದಳು ಸುಮಿತ್ರೆ. ಲಲಿತೆಗೂ ಅದೇ ಬೇಕಾಗಿತ್ತು. ತೌರು

ಮನೆಯಲ್ಲಿದ್ದಾಗ. ಓದುವುದಕ್ಕೆ ಅನೇಕ ಪುಸ್ತಕಗಳು ಸಿಕ್ಕುತ್ತಿದ್ದುವು. ತಂದೆ ಶ್ರೀಕಂಠಯ್ಯನವರಿಗೂ ಓದುವ ಹುಚ್ಚು ಇದ್ದುದರಿಂದ, ಹೇಗೋ ಪುಸ್ತಕಗಳನ್ನು ಸಂಪಾದಿಸಿ ಮನೆಗೆ ತರುತ್ತಿದ್ದರು. ಆಗ ಲಲಿತೆಯೂ ಓದುವ ಅವಕಾಶವನ್ನು ಕಲ್ಪಿಸಿ ಕೊಳ್ಳುತ್ತಿದ್ದಳು. ಆದರೆ ಮದುವೆಯಾಗಿ ಅಗ್ರಹಾರಕ್ಕೆ ಬಂದಮೇಲೆ ಪುಸ್ತಕಗಳು ಸಿಕ್ಕದೆ ಓದುವ ಅಭ್ಯಾಸವೇ ತಪ್ಪಿ ಹೋದಂತಾಗಿತ್ತು ಲಲಿತೆಗೆ.

"ಅದು ಯಾವ ಕತೆ ಪುಸ್ತಕ ಅತ್ತಿಗೆ?"

"'ಕಣ್ಣೀರು'"

"ಅಂದರೆ"

"ಪುಸ್ತಕದ ಹೆಸರು'ಕಣ್ಣೀರು' ಅಂತ ಕಣೆ"

"ಹಾಗಾದರೆ ಓದುತ್ತಿದ್ದರೆ ಕಣ್ಣೀರೇ ಬರುತ್ತದೆಯೇನೋ! ಅಲ್ಲವೆ ಅತ್ತಿಗೆ!" ಎಂದಳು ಸುಮಿತ್ರೆ. ಲಲಿತೆಗೆ ನಿಜಕ್ಕೂ ಕಣ್ಣೀರೇ ಬಂದಂತಿತ್ತು–ಓದುವಾಗ!

ಆ ರಾತ್ರಿ ಸುಮಾರು ಹತ್ತುಗಂಟೆಗೆ ತನ್ನ ಕೋಣೆಯಲ್ಲಿ ಕುಳಿತು ಬೆಡ್‌ಲ್ಯಾಂಪಿನ ಬೆಳಕಿನಲ್ಲಿ ಓದುವುದಕ್ಕೆ ಪ್ರಾರಂಭಿಸಿದ ಲಲಿತೆ ಕಥೆಯಲ್ಲಿಯೇ ತಾನೂ ಒಂದು ಪಾತ್ರವಾಗಿ, ಕಣ್ಣೀರು ಸುರಿಸಿ, ಅತ್ತು ಅತ್ತು, ಬೆಳಗಿನ ಝಾಮದವರೆಗೂ ಓದಿ, ಪುಸ್ತಕವನ್ನು ಮುಗಿಸಿದಳು. ಆದರೂ ಹೃದಯದಲ್ಲಿ ಸಂಕಟವಾಗುತ್ತಿತ್ತು. ತಡೆದುಕೊಂಡರೂ ಅಳು ಬಿಕ್ಕಿಬಿಕ್ಕಿ ಬರುತ್ತಿತ್ತು. ದೀಪವಾರಿಸಿ ಸ್ವಲ್ಪ ಹೊತ್ತು ಮಲಗಿದಳು. ಆದರೆ ನಿದ್ರೆ ಬರುತ್ತದೆಯೆ? ಕತೆಯಲ್ಲಿದ್ದ ಗೌರಮ್ಮ–ಕಾಮಾಕ್ಷಮ್ಮ ಅವಳ ಕಣ್ಮುಂದೆಯೇ ಸುಳಿದಾಡುತ್ತಿದ್ದರು. ಕಾದಂಬರಿಯ ಒಂದೊಂದು ಸನ್ನಿವೇಶವನ್ನೂ ನೆನಪಿಕೊಂಡು ಕಣ್ಣೀರಿನಿಂದ ತಲೆದಿಂಬನ್ನೆಲ್ಲಾ ನೆನೆಸಿದ್ದಳು ಲಲಿತ.

ಬೆಳಿಗ್ಗೆ ಎದ್ದಾಗ ಸುಮಿತ್ರೆ—

"ಯಾಕತ್ತಿಗೆ, ಕಣ್ಣೆಲ್ಲಾ ಕೆಂಪಾಗಿದೆ. ತುಂಬ ಅತ್ತ ಹಾಗಿದೆಯಲ್ಲ!"

"ಹೌದು ಸುಮಿತ್ರ. ಆ ಕತೆ ಓದಿದರೆ ನೀನೂ ಅಳುತ್ತೀಯೆ."

"ಓದಿಬಿಟ್ಟೆಯಾ ಅತ್ತಿಗೆ ಪೂರ್ತಿ? ಹಾಗಾದರೆ 'ಕಣ್ಣೀರು'

ಓದಿದರೆ ಕಣ್ಣೀರೇ ಬರುತ್ತದೆ ಅಣ್ಣ!"

"ಹ್ಞಾ. ನೀನೂ ಓದು ಸುಮಿತ್ರ. ನಿನಗೇ ಗೊತ್ತಾಗುತ್ತದೆ!.... ತುಂಬ ಚೆನ್ನಾಗಿ ಬರೆದಿದ್ದಾರೆ."

"ಕೊಡು ಅತ್ತಿಗೆ"

ಲಲಿತೆ ಕೈಯ್ಯಿಂದ ಪುಸ್ತಕ ತೆಗೆದುಕೊಂಡಳು ಸುಮಿತ್ರ. ಆದರೆ ಅವಳು ಓದುವ ಮುನ್ನ ಅದು ಶಾಮುವಿನ ಕೈಸೇರಿತು.

"ಚಿಕ್ಕಣ್ಣಯ್ಯ, ನಾನೂ ಓದಬೇಕು ಅದನ್ನ. ಅತ್ತಿಗೆ ಓದಿ ಅತ್ತು ಅತ್ತು ಸುಸ್ತಾಗಿದ್ದಾರೆ."

"ಹಾಗಾದರೆ ನೀನೂ ಓದಿ ಅಳಬೇಕೋ ?"

"ಹ್ಞಾ. ಚಿಕ್ಕಣ್ಣಯ್ಯ".

"ಅಳೋದು ಅಂದರೆ ಎಷ್ಟು ಆಸೇನೆ ಚುಮ್ಮಿ—ನಿಮ್ಮಂಥ ಹೆಂಗಸರಿಗೆ!" ಎನ್ನುತ್ತಾ ಶಾಮು ಹಂಗಿಸಿದ. ಆದರೆ ಅವನೇ ಅದನ್ನು ಓದಿ ಕಣ್ಣೀರು ಹರಿಸಿದ್ದುದನ್ನು ನೆನಪು ಮಾಡಿಕೊಂಡಾಗ—

"ಬರೆದರೆ ಹೀಗೆ ಬರೆಯಬೇಕು. ಕಥೆ ಕಣ್ಣೀರು ಹರಿಸುತ್ತಲೇ ಅ.ನ. ಕೃಷ್ಣರಾಯರು "ಕಣ್ಣೀರು" ಕಾದಂಬರಿಯನ್ನು ಬರೆದರೇನೋ?"

ಎಂದುಕೊಂಡಿದ್ದ. ಅವನಿಗೂ ಸಾಹಿತ್ಯದಲ್ಲಿ ಅಭಿರುಚಿ ಇದ್ದುದರಿಂದ ಸಣ್ಣ ಸಣ್ಣ ಕಥೆ-ಕವಿತೆಗಳನ್ನು ಬರೆದಿದ್ದ. ಬೆಂಗಳೂರಿನಲ್ಲಿದ್ದಾಗ, ಗೆಳೆಯರ ಮೂಲಕ ಪರಿಚಿತರಾದ ಶ್ರೀಮಾನ್ ಎಲ್. ಪಿ. ಲಕ್ಷ್ಮೀನಾರಾಯಣರಾಯರು ಅವನ ಬರೆಯುವ ಶಕ್ತಿಯನ್ನು ಕಂಡು ಪ್ರೋತ್ಸಾಹಿಸಿದ್ದರು.

ಒಂದು ಸಾರಿ ಶಾಮು ತನ್ನ ಕವಿತೆ ಅಚ್ಚಾದ ಮಾಸ ಪತ್ರಿಕೆಯೊಂದನ್ನು ರಾಯರಿಗೆ ತೋರಿಸಿದಾಗ—

"ಇಂಥ ಕವಿತೆಗಳನ್ನು ಹಾಸ್ಯರಸ ಪ್ರಧಾನವಾದ ಪತ್ರಿಕೆಗಳಿಗೆ ಕಳಿಸಬಾರದಪ್ಪ. ಈ ಕವಿತೆಯು ವಿಷಯದಲ್ಲಿ ಎಷ್ಟು ಗಂಭೀರವಾಗಿದೆಯೋ ಅಷ್ಟು ಬೆಲೆ ಈ ಪತ್ರಿಕೆಯಲ್ಲಿ ಪ್ರಕಟವಾದಾಗ ಬರುವುದಿಲ್ಲ. ಇಂತಹ ಪತ್ರಿಕೆಗಳಿಗೆ ಅಣಕವಾಡುಗಳನ್ನು ಬರೆದು ಕಳುಹಿಸಬೇಕು........ನೀನು ಬರೆದಿರುವ ಪದ್ಯಗಳನ್ನೆಲ್ಲಾ ತೆಗೆದುಕೊಂಡು ಬಾ. ಚೆನ್ನಾಗಿರುವುದನ್ನು ಆರಿಸಿ 'ಛಾಯಾ' ಪತ್ರಿಕೆಯಲ್ಲಿ

ಪ್ರಕಟಿಸಲು ಪ್ರಯತ್ನಿಸೋಣ. ಅದರ ಸಂಪಾದಕರು ನನಗೆ ತುಂಬಾ ಸ್ನೇಹಿತರು." ಎಂದಿದ್ದರು. ಶಾಮುವಿನ ಸಂತೋಷಕ್ಕೆ ಪಾರವೇ ಇರಲಿಲ್ಲ. ಅಂದಿನಿಂದ ಅವನ ಬರವಣಿಗೆ ಹೆಚ್ಚಿತು. ಉತ್ತಮ ಸಾಹಿತ್ಯ ಜ್ಞಾನವುಳ್ಳವರೂ–ಸ್ವತಃ ಸಾಹಿತಿಗಳೂ ಆದ ಲಕ್ಷ್ಮೀನಾರಾಯಣ ರಾಯರು ಶಾಮುವಿನ ಬರವಣಿಗೆಯನ್ನು ಬೇಸರಪಟ್ಟುಕೊಳ್ಳದೆ ಓದಿ, ತಿದ್ದಿ, ಸಲಹೆಕೊಡುತ್ತಿದ್ದರು.

ಕೆಲವೇ ದಿನಗಳಲ್ಲಿಯೇ ತಾನೂ ಒಬ್ಬ ಬರಹಗಾರನೆನಿಸಿಕೊಳ್ಳುವ ಭಾಗ್ಯ ಶಾಮುವಿಗೆ ದೊರಕಿತು. ವಾರ ಪತ್ರಿಕೆಗಳಿಗೆ–ಮಾಸ ಪತ್ರಿಕೆಗಳಿಗೆ ಬರೆಯುವುದಕ್ಕೆ ಆರಂಭಿಸಿದ. ಆದರೆ ಅದೇ ಸಮಯಕ್ಕೆ ವಿದ್ಯಾಭ್ಯಾಸ ನಿಲ್ಲುವ ದುರದೃಷ್ಟ ಪ್ರಸಂಗ ನಡೆಯಿತು.

ಕಾಲೇಜು ವಿದ್ಯಾಭ್ಯಾಸಕ್ಕೆ ಬೆಂಗಳೂರಿಗೆ ಬಂದಮೇಲೆ ಸುಮಾರು ನಾಲ್ಕು ತಿಂಗಳಕಾಲ ನಾಣಿ–ಕಿಟ್ಟು ಹಣ ಕಳುಹಿಸುತ್ತಿದ್ದರು. ಅನಂತರ ಕಿಟ್ಟುವಿನ ಹಣ ನಿಂತುಹೋಯಿತು. ಅದಕ್ಕೆ ಕಾರಣವನ್ನೂ, ನರಸುವಿನ ವಿಷಯವನ್ನೂ ನಾಣಿಯೇ ಕಾಗದ ಬರೆದು ಶಾಮುವಿಗೆ ತಿಳಿಸಿದ್ದ. ಅನಂತರ ನಾಣಿ ಕಾಯಿಲೆಬಿದ್ದು, ಕೆಲಸಕ್ಕೆ ಹೋಗದಿದ್ದಾಗ, ನಾಗಪ್ಪನವರೇ ಅವನ ಸಂಬಳದ ಹಕ್ಕು ಪತ್ರ ಬರೆಸಿಕೊಂಡು ನಾಣಿಯ ಸಂಬಳವನ್ನು ಎಣಿಸಿಕೊಂಡು ಬಂದಿದ್ದರು. ಶಾಮುವಿಗೆ ಹಣ ಕಳುಹಿಸುವುದನ್ನು ಉದ್ದೇಶಪೂರ್ವಕವಾಗಿಯೇ ಮರೆತರು! ಒಂದೆರಡು ದಿನ ಉಪವಾಸವಿದ್ದ ಶಾಮು, ಕೊನೆ ಕೊನೆಗೆ ಮನೆ ಬಾಡಿಗೆಯುವನ ಕಾಟ ತಡೆಯಲಾರದೆ ಅಗ್ರಹಾರಕ್ಕೆ ಕಾಗದ ಬರೆದ. ಆದರೆ ನಾಗಪ್ಪನವರು, ಆ ಕಾಗದಗಳು ತಮ್ಮ ಕೈಸೇರಲೇ ಇಲ್ಲವೆಂಬಂತೆ, ಓದಿದೊಡನೆ ಹರಿದೆಸೆದರು. ಶಾಮು ದಿಕ್ಕುಗಾಣದೆ ಲಕ್ಷ್ಮೀನಾರಾಯಣರಾಯರ ಮರೆಹೊಕ್ಕು ತನ್ನ ವಿಷಯವನ್ನು ಸಾದ್ಯಂತವಾಗಿ ವಿವರಿಸಿ—

"ಸಾರ್, ನಾನು ಓದುವುದು ನಮ್ಮ ತಂದೆಗೆ ಸ್ವಲ್ಪವೂ ಇಷ್ಟವಿಲ್ಲ. ಅದಕ್ಕೇ ಅವರು ನನ್ನ ಕಾಗದಗಳಿಗೆ ಉತ್ತರವನ್ನೂ ಬರೆಯಲಿಲ್ಲ. ನನ್ನ ಅಣ್ಣ ಕಾಯಿಲೆಯಿಂದ ಹಾಸಿಗೆ ಹಿಡಿದು ಮಲಗಿ ಬಿಟ್ಟಿದ್ದಾನೆ. ಹಣ ಕಳುಹಿಸುವುದು ಅವನಿಂದಲೂ ಸಾಧ್ಯವಿಲ್ಲ"

"ಹಾಗಾದರೆ, ನೀನು ಏನು ಮಾಡಬೇಕೆಂದು ಇಷ್ಟಪಡುತ್ತಾರೆ ನಿಮ್ಮ ತಂದೆ ಶಾಮು ?"

ರಾಯರು ಪರಿಹಾರ ಸೂಚಿಸಲು ಕೇಳಿದರು.

"ಎಲ್ಲಾದರೂ ಕೆಲಸಕ್ಕೆ ಸೇರಿ, ನನ್ನ ಜೀವನಕ್ಕಾದರೂ ಸಕಾಗು ವಷ್ಟು ಸಂಪಾದಿಸಿಕೊಳ್ಳಬೇಕೆಂದು ಅವರ ಇಷ್ಟ, ಸಾರ್"

"ನಿನಗೆ ಓದಬೇಕೆಂದು ಇಷ್ಟವಿದೆ"

"ಹೌದು ಸಾರ್"

"ಕಾಲೇಜು ಓದು ಸುಲಭವಲ್ಲ. ತಿಂಗಳು ತಿಂಗಳೂ ಹನ್ನೊಂದು ರೂಪಾಯಿ ಫೀಸು ಕೊಡಬೇಕು. ಮೇಲಿನ ಖರ್ಚು ಎರಡು ಮೂರು ರೂಪಾಯಿಗಳಾದರೂ ಬೇಕು.

"ಹೌದು ಸಾರ್. ಕೊನೆಯ ಪಕ್ಷ ಹದಿನೈದು ರೂಪಾಯಿ ಗಳಾದರೂ ಬೇಕಾಗುತ್ತದೆ."

"ಊಟಕ್ಕೆ ನೀನೇನೂ ತೊಂದರಪಟ್ಟುಕೊಳ್ಳಬೇಡಪ್ಪ. ನಮ್ಮ ಮನೆಯಲ್ಲಿಯೇ ಇರು."

ರಾಯರ ಮಾತು ಕೇಳಿ ಶಾಮು ಕೃತಜ್ಞತೆಯಿಂದ ಮೂಕನಾದ. ಸ್ವಲ್ಪಹೊತ್ತು ಯೋಚಿಸಿ—"ನಿಮ್ಮ ಮನಸ್ಸು ತುಂಬ ದೊಡ್ಡದು ಸಾರ್. ಆದರೆ ನಾನು ಕಾಲೇಜು ವ್ಯಾಸಂಗ ಇಷ್ಟಕ್ಕೇ ನಿಲ್ಲಿಸಬೇಕೆಂದು ನಿರ್ಧರಿಸಿದ್ದೇನೆ ಸಾರ್...."

"ಯಾಕೆ ಶಾಮು ಇಷ್ಟು ಅಧೈರ್ಯ ?"

"ಹೌದು ಸಾರ್. ತಿಂಗಳು ತಿಂಗಳು ಹದಿನೈದು ರೂಪಾಯಿ ನನಗೆಲ್ಲಿಂದ ಬರುತ್ತದೆ ಸಾರ್. ನಮ್ಮ ತಂದೆ ಹದಿನೈದಾಣೆಯನ್ನೂ ಕಳುಹಿಸುವುದಿಲ್ಲ!"

"ಹಾಗಾದರೆ ಮುಂದೇನು ಮಾಡಬೇಕೆಂದಿದ್ದೀಯಾ ?"

"ಎಲ್ಲಾದರೂ ಕೆಲಸ ಹುಡುಕುತ್ತೇನೆ ಸಾರ್."

"ಅದರಿಂದ ನಿಮ್ಮ ತಂದೆಗೂ ಸಮಾಧಾನವಾಗುತ್ತದೆ ಅಲ್ಲವೆ ?"

"ಹೌದು ಸಾರ್."

"ನಿನಗೆ ಪತ್ರಿಕಾ ಕಚೇರಿಯಲ್ಲಿ ಕೆಲಸಮಾಡಲು ಇಷ್ಟವಿದ್ದರೆ ಹೇಳು. ನನ್ನ ಸ್ನೇಹಿತರ ಮೂಲಕ ಯಾವುದಾದರೂ ಪತ್ರಿಕೆಯ

ಸಂಪಾದಕ ಮಾರ್ಗದಲ್ಲಿ ಕೆಲಸಕ್ಕೆ ಪ್ರಯತ್ನಿಸೋಣ".

ಎಂದರು ರಾಯರು. ಬುದ್ಧಿವಿಕಸನಗೊಂಡು, ಜ್ಞಾನ ವೃದ್ಧಿಯಾಗಿ, ಸಾಹಿತ್ಯರಚನೆಯಲ್ಲಿ ಪಳಗುವುದಕ್ಕೆ ಪತ್ರಿಕಾಲಯವೇ ಸರಿಯಾದ ಸ್ಥಳವೆಂದು ಭಾವಿಸಿದ ಶಾಮು ಆ ಮಾತು ಕೇಳಿ ಉಬ್ಬಿಹೋದ.

"ಉಪಸಂಪಾದಕನಾಗಿ ಕೆಲಸಮಾಡಲು ನನಗೆ ತುಂಬ ಇಷ್ಟವಿದೆ ಸಾರ್" ಎಂದ ಶಾಮು. ಅವನ ಕೋರಿಕೆ ಬೇಗನೆ ಈಡೇರಿತು. ಕಾಲೇಜು ಸೇರಿದ ಐದಾರು ತಿಂಗಳಿಗೇ ಅದಕ್ಕೆ ಅನಿವಾರ್ಯವಾಗಿ ಶರಣುಹೊಡೆದು, ಶಾಮು 'ನವಕರ್ನಾಟಕ' ದಿನಪತ್ರಿಕೆಯ ಉಪಸಂಪಾದಕನಾದ. ತಿಂಗಳಿಗೆ ಐವತ್ತು ರೂಪಾಯಿ ಸಂಬಳವೆಂದು ಗೊತ್ತಾಯಿತು. ಲಕ್ಷ್ಮೀನಾರಾಯಣರಾಯರನ್ನು ಮನಸ್ಸಿನಲ್ಲೇ ವಂದಿಸುತ್ತಾ ಕೆಲಸಕ್ಕೆ ಹಾಜರಾದ. ಸಹೋದ್ಯೋಗಿಗಳೊಡನೆ ಆತ್ಮೀಯತೆಯಿಂದ ವರ್ತಿಸುತ್ತಾ ಬಹು ಶೀಘ್ರದಲ್ಲೇ ಮೆಚ್ಚಿಗೆ ಗಳಿಸಿಕೊಂಡ.

ಆದರೆ ಶಾಮುವಿನ ಇಷ್ಟೆಲ್ಲ ಸಮಾಚಾರವನ್ನು ಅಗ್ರಹಾರದಲ್ಲಿರುವವರಿಗೆ ಯಾರು ಹೇಳಬೇಕು? ಹಿಂದೆ ಬರೆದ ಕಾಗದಗಳಿಗೆ ಉತ್ತರ ಬಾರದಿದ್ದುದನ್ನು ಕಂಡು, ಮತ್ತೊಮ್ಮೆ ಕಾಗದ ಬರೆಯುವ ಸಾಹಸ ಮಾಡದೆ ತಾನೇ ಅಗ್ರಹಾರಕ್ಕೆ ಹೊರಟುಬಂದ. ಬಂದ ದಿನವೇ ತಾಯಿಗೆ ತನ್ನ ಓದು ನಿಂತ ಸುದ್ದಿಯನ್ನು ಹೇಳಿ ಮನ ನೋಯಿಸಬಾರದೆಂದುಕೊಂಡು ಸುಮ್ಮನಾದ.

ತಾಯಿ ಮಗನನ್ನು ವಿಚಾರಿಸದಿರುವ ಸುದ್ದಿಯುಂಟೆ?

ಮಧ್ಯಾಹ್ನದ ಊಟ ಹೊತ್ತಾಗುವುದೆಂದು ವೆಂಕಮ್ಮ ಸುಮಾರು ಹತ್ತು ಗಂಟೆಗೆ ಶಾಮುವಿಗೆ ಪ್ರಿಯವಾದ ರೊಟ್ಟಿಯನ್ನು ಮಾಡಿಕೊಟ್ಟರು. ಜೊತೆಗೆ ಎರಡನೆಯ ಸಾರಿ ಕಾಫಿ ಸಮಾರಾಧನೆಯೂ ಆಯಿತು. ಶಾಮು ಅಡಿಗೆ ಕೋಣೆಯನ್ನು ಬಿಟ್ಟು ಹೊರಡಲನುವಾದುದನ್ನು ಕಂಡು ವೆಂಕಮ್ಮ—

"ಕೂತ್ಕೊಳ್ಳೊ, ಇನ್ನೊ ಒಂದು ರೊಟ್ಟಿ ಕೊಡ್ತೀನೆ"

ಎಂದರು. ರೊಟ್ಟಿಯ ಆಸೆಗಿಂತ ತಾಯಿಯೊಡನೆ ಇನ್ನಷ್ಟು

ಹೊತ್ತು ಮಾತನಾಡುವ ಆಸೆ ಹೆಚ್ಚಾಗಿದ್ದುದರಿಂದ ಶಾಮು ಅಲ್ಲಿಯೇ ಕುಳಿತ. ಮಾತಿನ ಮಧ್ಯೆ ವೆಂಕಮ್ಮ ಕಾಲೇಜು ವಿದ್ಯಾಭ್ಯಾಸದ ವಿಷಯವನ್ನು ಪ್ರಶ್ನಿಸಿದಳು.

"ನೀನೇನೂ ಕೋಪಮಾಡಿಕೊಳ್ಳುವುದಿಲ್ಲ ತಾನೆ ಅಮ್ಮ?"

"ಕೋಪ ಯಾಕೆ ಮಾಡಿಕೊಳ್ಳಲೋ ಶಾಮು? ಹೇಳು"

"ಖಂಡಿತ ಕೋಪ ಮಾಡಿಕೊಳ್ಳುವುದಿಲ್ಲ ತಾನೆ, ಅಮ್ಮ?"

"ಇಲ್ಲಪ್ಪ. ಅದೇನು ಹೇಳು."

ತಾಯಿಯ ಆಶ್ವಾಸನೆಯಿಂದ ಧೈರ್ಯ ತಂದುಕೊಂಡು ಶಾಮು ಕಾಲೇಜು ಬಿಡಬೇಕಾದ ಅನಿವಾರ್ಯ ಪ್ರಸಂಗವನ್ನೂ, ಲಕ್ಷ್ಮೀನಾರಾಯಣರಾಯರು ಕೆಲಸ ಕೊಡಿಸಿದುದನ್ನೂ ಹೇಳಿದಾಗ:

"ನನಗಿವೆಲ್ಲ ಗೊತ್ತೇ ಇಲ್ಲಪ್ಪ. ನೀನು ಕಾಗದ ಬರೆದ ಸಮಾಚಾರ ನಿಮ್ಮ ತಂದೆ ಹೇಳಲೇ ಇಲ್ಲವಲ್ಲ!"

"ನಿನಗೆ ಗೊತ್ತಾಗಿದ್ದರೆತಾನೆ ನೀನೇನಮ್ಮ ಮಾಡುತ್ತಿದ್ದೆ? ಅಣ್ಣನಿಗಂತೂ ಮೊದಲೇ ಇಷ್ಟವಿರಲಿಲ್ಲ–ನಾನು ಓದೋದು. ಅದಕ್ಕೇ ಬರೆದ ಕಾಗದಕ್ಕೆ ಬದಲು ಬರೆಯಲೇ ಇಲ್ಲ–ನಿಮಗೂ ಹೇಳಲಿಲ್ಲ"

"ನನಗೆ ಮೊದಲೇ ಗೊತ್ತಾಗಿದ್ದಿದ್ದರೆ......?"

"ಏನಮ್ಮ ಮಾಡುತ್ತಿದ್ದೆ?"

"ಏನಾದರೂ ಮಾಡಬಹುದಾಗಿತ್ತಪ್ಪ"

"ಅಂದರೆ........?"

"ಅದೇ, ನನ್ನ ಸರ ಇತ್ತಲ್ಲ–ಅದನ್ನ ಏನಾದರೂ ಮಾಡಿ ಹಣ ಒದಗಿಸಬಹುದಾಗಿತ್ತು"

"ಅಜ್ಜಿ ಕೊಟ್ಟಿದ್ದಳು ಅಂದಿದ್ದೆಯಲ್ಲಮ್ಮ, ಆ ಚಿನ್ನದ ಸರವೆ?"

"ಹೌದಪ್ಪ. ಆ ಪುಣ್ಯವತಿ ಯಾವ ಗಳಿಗೆಯಲ್ಲಿ ಅದನ್ನು ನನಗೆ ಕೊಟ್ಟಳೊ, ಎಲ್ಲಿಗೆ ಹೋದರೂ ಅದು ನನ್ನ ಕೈಗೇ ಬರುತ್ತದೆ. ಚಿಕ್ಕಮ್ಮನ ನೆನಪಾಗಿ ಅದೊಂದು ಉಳಿದಿದೆ ನನ್ನ ಹತ್ತಿರ"

"ಅಂಥಾದ್ದನ್ನು ಮಾರಿ ನನ್ನ ಓದಿಗೆ ಕೊಡುತ್ತೇನೆ ಎನ್ನುತ್ತೀಯಲ್ಲ! ಅದರಿಂದ ನನಗೆ ಶ್ರೇಯಸ್ಸು ಇದೆಯೇನಮ್ಮ?"

"ನಿಮ್ಮಜ್ಜಿಯ ಒಡವೆ ನೀನು ಅನುಭವಿಸಿದರೆ ಶ್ರೇಯಸ್ಸಿಲ್ಲದೆ

ಹೋಗುತ್ತದೆಯೇ ಶಾಮು ?"

"ಹಾಗಲ್ಲಮ್ಮ, ಅದು ಹೆಣ್ಣು ಮಕ್ಕಳ ಸ್ವತ್ತು. ನಿಮ್ಮ ಚಿಕ್ಕಮ್ಮ 'ನನ್ನ ಮಗಳಿಗೆ' ಎಂದುಕೊಂಡು ನಿನಗೆ ಕೊಟ್ಟರು. ಅದನ್ನು ನೀನು 'ನನ್ನ ಮಗಳಿಗೆ' ಎಂದು ಸುಮಿತ್ರೆಗೆ ಕೊಡಬೇಕು. ನನಗೆ ಕೊಟ್ಟರೆ ಆ ಹೆಣ್ಣು ಮಗುವಿನ ಶಾಪ ತಟ್ಟದೆ ಇರುತ್ತದೆಯೇ ಅಮ್ಮ !"

ಶಾಮು ನಗುತ್ತಾ ಮಾತಾನಾಡುತ್ತಿದ್ದಂತೆಯೇ ಬಂದ ಸುಮಿತ್ರೆ–

"ನೋಡು, ಚಿಕ್ಕಣ್ಣಯ್ಯ, ಆ ಸರ ಒಂದು ದಿನ ಹಾಕಿಕ್ಕೊಳ್ತೀನಿ ಕೊಡು ಅಂದರೆ ಕೊಡೋದಿಲ್ಲ ಅಮ್ಮ ನನ್ನ ಕೈಗೆ" ಎಂದಳು.

ವೆಂಕಮ್ಮ ನಗುತ್ತಾ—

"ಆಗಲಿ, ಕೊಡುವ ಕಾಲ ಹತ್ತಿರ ಬಂದಿದೆ. ನಿಮ್ಮಪ್ಪ ಒಂದು ಗಂಡು ಹುಡುಕಿಕೊಂಡು ಬಂದ ಮೇಲೆ, ಈ ಸರ ಹಾಕಿಕೊಂಡು ಅವನ ಮುಂದೆ ಮೆರೆಯುವಿಯಂತೆ, ಅವಸರ ಪಡಬೇಡ !" ಎಂದರು.

ಸುಮಿತ್ರೆ ನಾಚಿಕೆಯಿಂದ ಓಡಿಹೋದಳು.

ಎರಡು ದಿನಗಳನಂತರ ಶಾಮುವನ್ನು ಕರೆದುಕೊಂಡು ರೈಲೂ ಬೆಂಗಳೂರಿಗೆ ಓಡಿ ಹೋಯಿತು.

## ೧೯

"ರಂಗೋಲಿ ವೆಂಕು ಬಂದಿದ್ದಾಳಂತೆ ಕಣೆ. ರಂಗೋಲಿ ವೆಂಕು"

"ಯಾವಾಗ ಬಂದಳಂತೆ ?"

"ನಿನ್ನೆ ರಾತ್ರಿ ರೈಲಿನಲ್ಲಿ"

"ಅವಳನ್ನ ನೋಡಿ ತುಂಬ ದಿನವಾಯ್ತು !"

"ಪಾಪ, ಯಾಕೆ ಬರ್ತಾಳೆ ಇಲ್ಲಿಗೆ ತಂದೆ–ತಾಯಿ ಇರುವವರೆಗೆ ತಾನೆ. ಆ ಮೇಲೆ ತಮ್ಮಂದಿರು ಆ ಅಕ್ಕನನ್ನು ಅಷ್ಟು ಅಕ್ಕರೆಯಿಂದ ಕರೆಸಿಕೊಳ್ಳುತಾರೆಯೆ ?"

"ಅದೂ ನಿಜವೇ ಅನ್ನು"

"ಏನೋ ತಮ್ಮನ ಮಗಳಿಗೆ ಮದುವೆ ಅಂತ ಬಂದಿದ್ದಾಳೆ"

"ನಾನು ನೋಡಲೇ ಇಲ್ಲವಲ್ಲ"

"ಅದೋ, ಬರ್‍ತ್ತಿದಾಳೆ ನೋಡು"

ಬಾವಿಯ ಬಳಿ ನಿಂತಿದ್ದ ಅಷ್ಟಗ್ರಾಮದ ಇಬ್ಬರು ಹೆಂಗಸರು ಅತ್ತ ನೋಡಿದರು.

'ಊರಿಗೆ ಬಂದವಳು ನೀರಿಗೆ ಬರದಿರುತ್ತಾಳೆಯೆ ?'

ಬಂದೇಬಂದಳು ಬಾವಿಯ ಬಳಿಗೆ ವೆಂಕಮ್ಮ.

"ಚೆನ್ನಾಗಿದ್ದೀಯಾ ವೆಂಕು ?"

"ಏನೋ ಇಷ್ಟರ ಮಟ್ಟಿಗೆ ಇದ್ದೀನಿ. ನೋಡಿ ರಂಗಜ್ಜಿ."

"ಗುರುತೇ ಸಿಕ್ಕಲಿಲ್ಲ ಕಣೆ ನೀನು !"

ನಕ್ಕಳು ವೆಂಕಮ್ಮ ರಂಗಜ್ಜಿಯ ಕಡೆ ತಿರುಗಿ ಮೆಲ್ಲನೆ–"ಅದು ಯಾರಜ್ಜಿ ? ಗುರುತೇ ಮರೆತು ಹೋಗಿದೆ ?" ಎಂದು ಬಳಿಯಲ್ಲೇ ನಿಂತಿದ್ದ ಬೋಳುತಲೆಯ ಹೆಂಗಸನ್ನು ತೋರಿಸಿ ಕೇಳಿದಳು.

"ಇದ್ಯಾಕೆ, ನೀನು ಕಾಣೆಯೇನೇ ಅವಳನ್ನು ? ನಿಮ್ಮ ಪಕ್ಕದ ಮನೆಯವಳೇ ಅಲ್ಲವೇನೆ ?"

"ಪಕ್ಕದ ಮನೆಯಲ್ಲಿ ಇಂಥಾವರು ಯಾರಿದ್ದಾರೆ ಅಜ್ಜಿ ? ಪಾರ್ವತಿ ಅವಳ ಅಪ್ಪ ಇಬ್ಬರೇ ಅಲ್ಲವೆ ?"

ರಂಗಜ್ಜಿಗೆ ಏಕೋ ನಗು ಬಂದಿತು.

"ಎಲ್ಲೇ ಪಾತಿ, ನಿನ್ನ ಮುಖತೋರಿಸು-ವೆಂಕೂಗೆ. ನೋಡ ಸರಿಯಾಗಿ."

ನಗುತ್ತಲೇ ಹತ್ತಿರ ಬಂದು ನಿಂತಳು ಪಾತಮ್ಮ. ಎರಡು ನಿಮಿಷ ಒಂದೇ ಸಮನೆ ನಿಟ್ಟಿಸಿನೋಡಿದ ವೆಂಕಮ್ಮ–"ಪಾರ್ವತೀ !" ಎಂದು ರಾಗವಾಗಿ ಉದ್ಗರಿಸಿದಳು ಕಡೆಗೂ ವೆಂಕಮ್ಮ ತನ್ನನ್ನು ಗುರುತಿಸಿದ ಳೆಂದು ಪಾರ್ವತಿಗೆ ಸಂತೋಷದಿಂದ ನಗು ಬಂದಿತ್ತು. ಆದರೆ ವೆಂಕಮ್ಮ ನಿಜವಾಗಿ ಅಳುತ್ತಿದ್ದಳು.

"ಇದ್ಯಾಕೆ ವೆಂಕು, ಅಳುತ್ತಿದ್ದೀ ?"

ರಂಗಜ್ಜಿಯ ಮಾತು ಅವಳಿಗೆ ಕೇಳಿಸಿತೋ ಇಲ್ಲವೊ! ಅವಳಂತೂ ಉತ್ತರಿಸಲಿಲ್ಲ. ಪಾರ್ವತಿಗೂ ವಿಸ್ಮಯವಾಗಿತ್ತು.

ಮೌನವಾಗಿಯೇ ನೀರು ಸೇದಿದಳು ವೆಂಕಮ್ಮ.

"ವೆಂಕು, ಎಷ್ಟು ಮಕ್ಕಳೇ ನಿನಗೆ ?"

ಕಣ್ಣೊರಸಿಕೊಳ್ಳುತ್ತಾ, ರಂಗಜ್ಜಿಯ ಪ್ರಶ್ನೆಗೆ ಉತ್ತರಿಸಿದಳು ಆಕೆ

"ಐದು ಗಂಡು, ಒಂದು ಹೆಣ್ಣು, ರಂಗಜ್ಜಿ"

'ಮದುವೆ ಮುಂಜಿ, ಕೆಲಸ-ಕಾರ್ಯ' ಮೊದಲಾದ ಸಂಗತಿಗಳನ್ನೆಲ್ಲಾ ವಿಚಾರಿಸಿದಳು ರಂಗಜ್ಜಿ.

"ಹಾಗಾದರೆ ಇನ್ನೊಬ್ಬ ಮಗ, ಒಬ್ಬಳು ಮಗಳು ಮದುವೆಗೆ ಇದ್ದಾರೆ ಇನ್ನು!"

"ಹೌದಜ್ಜಿ"

"ನೀನೇ ಪುಣ್ಯವಂತೆ ವೆಂಕು ಐದು ಗಂಡು ಇವರೆ ಅದೇ ಒಂದು ದೊಡ್ಡ ಆಸ್ತಿ. ಹುಡುಗರಿಗೆಲ್ಲಾ ಕೈತುಂಬ ವರದಕ್ಷಿಣೆ ಬಂದೇ ಬರುತ್ತದೆ... ...

ರಂಗಜ್ಜಿ ಆ ಮಾತು ಆಡಿದಾಗ ವೆಂಕಮ್ಮ ಮನಸ್ಸಿನಲ್ಲಿಯೇ 'ಬರುತ್ತದೆ ಏನು, ಬಂದೇ ಬಂದಿದೆ. ತಲೆಯ ಮೇಲೆ ಕಲ್ಲೂ ಬಿದ್ದಿದೆ' ಎಂದುಕೊಂಡಳು. ಮಾತು ಮುಂದುವರಿಸಿದಳು ರಂಗಜ್ಜಿ—

"ಒಬ್ಬೊಬ್ಬನಿಗೆ ಬಂದ ವರದಕ್ಷಿಣೆಯಲ್ಲೂ ಒಂದೊಂದು ಸಾವಿರವನ್ನು ತೆಗೆದಿಟ್ಟರೆ-ಐದುಸಾವಿರದಲ್ಲಿ ನಿನ್ನ ಮಗಳಿಗೆ ರಾಜನನ್ನ ತಂದು ಮದುವೆ ಮಾಡಬಹುದು!"

ಆ ಮಾತು ಕೇಳಿ ವೆಂಕಮ್ಮ ನಸುನಕ್ಕಳು.

ನಾಗಪ್ಪನವರೇನೋ ಒಬ್ಬ 'ರಾಜ'ನನ್ನೇ ಹುಡುಕಿದ್ದರು. ರಂಗಜ್ಜಿ ಅರಸಿನ ಅರ್ಥದಲ್ಲಿ 'ರಾಜ' ಎಂದು ಹೇಳಿದ್ದರೆ, ನಾಗಪ್ಪನವರು 'ರಾಜ' ಎಂಬ ಹೆಸರಿನ ಅಳಿಯನನ್ನೇ ಹುಡುಕಿದ್ದರು. ಹುಡುಗ ಬಿ. ಎಸ್ಸಿ ಪದವೀಧರನಾಗಿ ತನ್ನ ತಾಯಿ – ತಂದೆಯರೊಡನೆ ಬೆಂಗಳೂರಿನಲ್ಲಿಯೇ ವಾಸಿಸುತ್ತಿದ್ದ. ವಿಮಾನ ಕಾರ್ಖಾನೆಯಲ್ಲಿ ಇನ್ನೂರು ರೂಪಾಯಿಗಳ ಸಂಬಳ ಬರುತ್ತಿದ್ದಿತು. ನಾರಾಯಣನ ಮೂಲಕ ನಾಗಪ್ಪನವರು ಆ ಹುಡುಗನನ್ನು ಪತ್ತೆ ಹಚ್ಚಿದ್ದರು.

ಅದೇ ದಿನ ಬ್ಯಾಂಕರನ ಬಳಿಗೆ ಹೋಗಿ ತಮ್ಮ ಬಡ್ಡಿಯ ಹಣದ ಲೆಕ್ಕವನ್ನು ನೋಡಿ ಬಂದಿದ್ದ ನಾಗಪ್ಪನವರು ತುಂಬ ಆನಂದದಿಂದಿದ್ದರು. ಸುಂದರುವಿನ ವರದಕ್ಷಿಣೆ ಹಣ ಹತ್ತು ಸಾವಿರ ರೂಪಾಯಿ, ಬ್ಯಾಂಕರನ ಬಳಿ ಬಡ್ಡಿಗೆ ಬಡ್ಡಿ ಕೂಡಿಕೊಂಡು ಇಪ್ಪತ್ತೆರಡು ಸಾವಿರ

ವನ್ನೂ ಮೀರಿತ್ತು. ಕೆಲವುಸಾರಿ ಸೇಕಡ ಇಪ್ಪತ್ತರ ಹಾಗೆ, ಮತ್ತೆ ಕೆಲವು ಬಾರಿ ಇಪ್ಪತ್ತೈದರ ಹಾಗೆ, ಸುಮಾರು ಐದು ವರ್ಷಗಳಿಗೆ ಹತ್ತುಸಾವಿರ ರೂಪಾಯಿ ಇಪ್ಪತ್ತೆರಡು ಸಾವಿರ ರೂಪಾಯಿಗಳಾಗಿ ಬೆಳೆದಿತ್ತು. ಇನ್ನೈದು ವರ್ಷಗಳೆಂದರೆ ಈ ಇಪ್ಪತ್ತೆರಡು ಸಾವಿರಗಳಿಗೆ ಇನ್ನು ಇಪ್ಪತ್ತೆರಡು ಸಾವಿರವೋ ಇಪ್ಪತ್ತೆಂಟು ಸಾವಿರವೋ ಸೇರಿ ತಾವು ಅರ್ಧ ಲಕ್ಷಾಧಿಕಾರಿಗಳಾಗುತ್ತೇವೆಂದು ನಾಗಪ್ಪನವರು ಉಬ್ಬಿ ಹೋಗಿದ್ದರು. ಆ ಆನಂದದಲ್ಲಿದ್ದಾಗಲೇ ಸುಮಿತ್ರೆಯ ಮದುವೆಯನ್ನು ಆದಷ್ಟು ಬೇಗ ಮುಗಿಸಿ ಬಿಡಬೇಕೆಂದು ನಾರಾಯಣನೊಡನೆ ಹೇಳಿದ್ದರು. ಆಗಲೇ ರಾಜುವನ್ನು ಸೂಚಿಸಿದ್ದ ನಾರಾಯಣ. ತಡ ಮಾಡಿದರೆ ಹುಡುಗ ಕೈಬಿಟ್ಟು ಹೋಗುವನೇನೋ ಎಂದು ದೂರಾಲೋಚನೆ ಮಾಡಿದ ನಾಗಪ್ಪನವರು ನಾರಾಯಣನನ್ನು ಕರೆದುಕೊಂಡು ಆ ವರನ ಮನೆಗೆ ಹೋಗಿದ್ದರು.

ರಾಜುವಿನ ತಂದೆ ಸೀತಾರಾಮಯ್ಯನವರು ನಗೆ ಮುಖದಿಂದಲೇ ಇಬ್ಬರನ್ನೂ ಸ್ವಾಗತಿಸಿದ್ದರು. ನಂತರ ನಾರಾಯಣ ಪೀಠಿಕೆ ಹಾಕಿದ್ದ. ಮಾತಿನ ಮಧ್ಯೆ ನಾಗಪ್ಪನವರು ನೇರವಾಗಿ ವಿಷಯವನ್ನು ಹೇಳಿದ್ದರು.

"ಅದಕ್ಕೇನು ಆಗಬಹುದು. ಹುಡುಗ ಹುಡುಗಿಯನ್ನು ನೋಡಿ ಒಪ್ಪಲಿ"

ನಮ್ಮ ಹುಡುಗಿಗೆ ಹಾಡು ಬರುತ್ತವೆ ಹಸೆ ಬರುತ್ತದೆ. ಮನೆಗೆಲಸ ಮಾಡುತ್ತಾಳೆ. ಕಸೂತಿ ಹಾಕುವುದನ್ನೂ ಕಲಿತಿದ್ದಾಳೆ."

"ಅದೆಲ್ಲಾ ಹೇಗಾದರೂ ಇರಲಿ ನಾಗಪ್ಪನವರೆ. ಹುಡುಗ ನೋಡಬೇಡವೆ ?"

"ಅಗತ್ಯವಾಗಿ ಆಗಲಿ. ನನ್ನ ಜೊತೆಯಲ್ಲಿ ಬರುವ ಹಾಗಿದ್ದರೆ ನಾನೇ ಕರೆದುಕೊಂಡು ಹೋಗುತ್ತೇನೆ."

"ಅವನಿಗೆ ನಾಳೆ ಒಂದೇ ದಿನ–ಭಾನುವಾರ ರಜ"

"ಬೆಳಗ್ಗೆ ಬಂದು ಸಂಜೆ ರೈಲಿಗೆ ವಾಪಸ್ಸು ಬಂದು ಬಿಡಲಿ."

ಎಂದಿದ್ದರು ನಾಗಪ್ಪ ಮರುದಿನ ನಡಗರದಿಂದಲೇ ರಾಜುವನ್ನು ಕರೆದುಕೊಂಡು ಅಗ್ರಹಾರ ಸೇರಿದರು ಹೆಂಡತಿಗೆ ವಿಷಯವನ್ನು ತಿಳಿಸಿದರು. ಅಳಿಯನಾಗುವವನಿಗೆ ಔತಣವನ್ನೆ ಮಾಡಿದಳು ವೆಂಕಮ್ಮ.

ಎರಡು ಗಂಟೆಗೇ ಸುಮಿತ್ರೆಗೆ ಶೃಂಗಾರ ಮಾಡಿದಳು ಲಲಿತ. ಕನ್ನಡಿಯಲ್ಲಿ ತನ್ನ ಮುಖ ತಾನೇ ನೋಡಿಕೊಂಡಾಗ ಸುಮಿತ್ರೆಗೆ ತುಂಬ ನಾಚಿಕೆಯಾಗಿತ್ತು. ಆ ನಾಚಿಕೆಯಿಂದಲೇ ಬಳಕುತ್ತ ಅಂಗಳಕ್ಕೆ ಬಂದಳು.

ಹಳ್ಳಿಯ ಹುಡುಗಿ ಕಪ್ಪಗೆ, ಕುಳ್ಳಗೆ, ಮಳ್ಳಿಯ ಹಾಗೆ ಇರಬಹು ದೆಂದುಕೊಂಡಿದ್ದ ರಾಜು. ಆದರೆ ಸುಮಿತ್ರೆ ಹಾಗಿದ್ದಳೆ?

ಹುಡುಗಿ ತುಂಬ ಬೆಳ್ಳಗಿಲ್ಲದಿದ್ದರೂ–ಬೆಳ್ಳಗೇ ಇದ್ದಳು! ಒಳ್ಳೆಯ ನಿಲುವಿನಲ್ಲಿ ಬೆಳೆದು ಬಳ್ಳಿ ಹಾಗೆ ಬಳುಕುತ್ತಿದ್ದಳು. ಅವಳ ಮುಂಗೂ ದಲಿನ ಉಂಗುರಮಾಲೆ, ಅಂಗಳದಲ್ಲಿ ವೆಂಕಮ್ಮ ಇಟ್ಟಿದ್ದ ಸುರಳಿ ರಂಗೋಲೆಯನ್ನು ನೆನಪಿಗೆ ತರುತ್ತಿತ್ತು. ಕಣ್ಣುಗಳು ಬಾದಾಮಿಯೋ, ಕಮಲವೋ! ರಾಜುವಿನ ಕಣ್ಣುಗಳಿಗೆ ಮಾತ್ರ ಒಂದೊಂದು ಸಾರಿ ಒಂದೊಂದು ರೀತಿಯಾಗಿ ಕಂಡವು ಗುಲಾಬಿಯ ಕೆನ್ನೆಯಂತೂ ತುಂಬಿದ ಕೆರೆಯಷ್ಟು ಗಂಭೀರವಾಗಿತ್ತು. ಆದರೆ ಕಣಿವೆಗಳ ನಡುವೆ ಹರಿಯುವ ಹೊಳೆಯಂತೆ ತುಟಿಗಳ ಕಿರುಬಿರುಕಿನಿಂದ ನಗೆದೊರೆ ನಯನ ಮನೋಹರವಾಗಿ ಹರಿದು ಬರುತ್ತಿದ್ದುದನ್ನು ಕಂಡು ರಾಜು ಸುಮಿತ್ರೆಗೆ ಸೋತಿದ್ದ.

"ಯಾವುದಾದರೂ ಒಂದು ಹಾಡು ಹೇಳು"

ನಾಗಪ್ಪನವರ ಮಾತು ಕೇಳಿಸದಂತೆಯೇ ಗಂಭೀರವಾಗಿ ಕುಳಿತಿದ್ದಳು ಸುಮಿತ್ರೆ. ಆದರೆ ಲಲಿತೆ ಬಿಡುವಳೆ?

ಸುಮಿತ್ರೆ ಆರಂಭಿಸಿದಳು—

"ರಾಮಾ ನನುಬ್ರೋವರಾ........"

ಅರ್ಧಗಂಟೆಯೇ ಆಯಿತು, ಹಾಡು ಮುಗಿಯುವ ವೇಳೆಗೆ. ಲಲಿತೆ ತನಗೆ ತಿಳಿದಷ್ಟು ಮಟ್ಟಿಗೆ ಸಂಗೀತ ಪಾಠ ಮಾಡಿಸಿದ್ದರೂ, ಸುಮಿತ್ರೆಗೆ ಸುಮಧುರ ಕಂಠವಿದ್ದುದರಿಂದ ಆ ಅರ್ಧ ಗಂಟೆಯ ಕಾಲವು ಯಾರಿಗೂ ಬೇಸರ ತಂದಿರಲಿಲ್ಲ.

ಸೌಂದರ್ಯಕ್ಕೇ ಮರುಳಾಗಿದ್ದ ರಾಜು ಸಂಗೀತಕ್ಕೂ ಸೋತ. ಸುಮಿತ್ರೆಯ ಸುಂದರ ರೂಪನ್ನು ಕಣ್ತುಂಬ ತುಂಬಿಕೊಂಡು ಬೆಂಗಳೂರಿಗೆ ಹಿಂತಿರುಗಿ ತಂದೆಯ ಬಳಿ ಒಪ್ಪಿಗೆ ಸೂಚಿಸಿದ.

ನಾಗಪ್ಪನವರೂ ಅವನ ಜತೆಯಲ್ಲಿಯೇ ಹೋಗಿದ್ದರು. ಮಾತುಕತೆಯಾಡಿ ಲಗ್ನಪತ್ರಿಕೆ ಬರೆಸಿಕೊಂಡೇ ಬರಬೇಕೆಂದು ಅವರ ಅಪೇಕ್ಷೆ ಆದರೆ ಗಂಡು ಹೆತ್ತವರು ಅಷ್ಟು ಸುಲಭವಾಗಿ ಒಪ್ಪುವರೆ ?

"ವರದಕ್ಷಿಣೆ ಏನು ಕೊಡುತ್ತೀರಿ ?"

ಸೀತಾರಾಮಯ್ಯ ಕೇಳಿಯೇ ಕೇಳಿದರು. ತಾವೂ ಹಾಗೆಯೇ ಕೇಳಿ, ಗಂಡಿನ ತಂದೆಯು ಅಧಿಕಾರವನ್ನು ಚಲಾಯಿಸಿದ ಪ್ರಸಂಗಗಳು ನಾಗಪ್ಪನವರ ನೆನಪಿಗೆ ಬರದಿರುತ್ತವೆಯೇ ? ಆದರೂ ವೇಷ ಹಾಕಿಕೊಂಡು ನಟಿಸತೊಡಗಿದರು—

"ನಾನು ಬಡವಸ್ವಾಮಿ ರಿಟೈರ್ಡ್ ಸ್ಕೂಲ್ ಮೇಷ್ಟ್ರು ಬರೋ ಪೆನ್ಷನ್ನು ಮನೆ ಸಂಸಾರಕ್ಕೇ ಸಾಲೋಲ್ಲ. ಹುಡುಗರು ಸಂಪಾದಿಸುವುದು ಅವರವರ ಹೆಂಡತಿ ಮಕ್ಕಳನ್ನು ಸಾಕಿಕೊಳ್ಳುವುದಕ್ಕೇ ಆಗುತ್ತದೆ. ನಾನೇನು ಕೊಡಬಲ್ಲೆ ಸ್ವಾಮಿ ?"

"ಹೆಚ್ಚಿಗೆ ಕೇಳುವ ಆಸೆ ನನಗಿಲ್ಲ ನಾಗಪ್ಪನವರೆ. ಹಾಗೇ ಕೇಳಬೇಕೆಂದರೆ ನಮ್ಮ ಹುಡುಗನ ಓದಿಗೆ ಈಗಾಗಲೇ ಮೂರು-ನಾಲ್ಕು ಸಾವಿರ ಖರ್ಚಾಗಿದೆ. ಅದನ್ನೆಲ್ಲಾ ಕೊಡುತ್ತೀರ ಹೇಳಿ"

"ಅಯ್ಯಯ್ಯೋ, ಬಡವನನ್ನು ಬಾವಿಗೆ ನೂಕಿದಂತೆಯೇ ಸ್ವಾಮಿ"

"ಹೆದರಬೇಡಿ ನಾನೇನೂ ಅಷ್ಟು ಕೇಳುವುದಿಲ್ಲ. ನಾನು ಕೇಳಿದ್ದಕ್ಕೆ ಕಮ್ಮಿಯಾದರೆ ನಾನು ಒಪ್ಪುವುದೂ ಇಲ್ಲ !!"

"ಹೇಳಿಸ್ವಾಮಿ. ಈ ಬಡವನ ಕೈಯಲ್ಲಿ ಶಕ್ತಿ ಇದೆಯೇನೋ ನೋಡೋಣ !"

"ಒಂದೇ ಒಂದು ಸಾವಿರ"

ನಾಗಪ್ಪನವರು ಕಂಗಾಲಾದರು. ಸಾವಿರ ಎಂದರೆ ಸುಮ್ಮನೆ ಬರುತ್ತದೆಯೇ ? ಐದುನೂರು-ಆರುನೂರು ಎಂದರೆ ಅದೇ ಹೆಚ್ಚು. ಅಂಥಾದ್ದರಲ್ಲಿ ಸಾವಿರ ಕೇಳಿದರೆ ಕೊಟ್ಟುಬಿಡುವುದಕ್ಕೆ ತಾವೇನು ಹುಚ್ಚರೆ ? ಎಂದುಕೊಂಡರು ನಾಗಪ್ಪ.

"ಆರುನೂರು ಕೊಡುತ್ತೇನೆ ಸ್ವಾಮಿ ತಾವು ಆಗುವುದಿಲ್ಲ ಎನ್ನಬಾರದು."

"ಖಂಡಿತ ಆಗುವುದಿಲ್ಲ"

"ಹೋಗಲಿ. ಆರುನೂರೈವತ್ತು ಕೊಟ್ಟು ಬಿಡುತ್ತೇನೆ"

"ಒಂದು ಕಾಸು ಕಮ್ಮಿಯಾದರೆ–ಸಾವಿರಕ್ಕೆ, ನಾನು ಮುಟ್ಟುವುದಿಲ್ಲ ನಾಗಪ್ಪನವರೆ"

ಸೀತಾರಾಮಯ್ಯನವರು ಖಂಡಿತವಾಗಿಯೇ ನುಡಿದಾಗ ನಾಗಪ್ಪನವರು ಉಪಾಯಗಾಣದಾದರು. ಎಂಟುನೂರಕ್ಕೆ ಹೆಚ್ಚಿಗೆ ಕೊಡಲು; ಅವರ ಮನಸ್ಸು ಸರ್ವಥಾ ಒಪ್ಪಲಿಲ್ಲ ಆದರೆ ಹುಡುಗ ಚೆನ್ನಾಗಿದ್ದಾನೆ ಹೆಚ್ಚಿಗೆ ಸಂಬಳ ಬರುತ್ತದೆ. ಮಗಳು ಚೆನ್ನಾಗಿ ಬದುಕುತ್ತಾಳೆ. ಅಂಥ ಸಂಬಂಧವನ್ನು ಬಿಡುವುದಕ್ಕಾಗುತ್ತದೆಯೆ ?

"ಆಗಲಿ ಸ್ವಾಮಿ ನಾನು ಊರಿಗೆ ಹೋಗಿ ಬರುತ್ತೇನೆ. ಆ ಮೇಲೆ ಯೋಚಿಸೋಣ" ಎಂದು ನಾಗಪ್ಪನವರು ಅಗ್ರಹಾರಕ್ಕೆ ಹಿಂತಿರುಗಿ ಬಂದಿದ್ದರು. ಅದೇ ಸಮಯಕ್ಕೆ ಅಷ್ಟಗ್ರಾಮದಿಂದ, ವೆಂಕಮ್ಮನ ಕಿರಿಯ ತಮ್ಮನ ಮಗಳ ಮದುವೆಯ ಸುದ್ದಿ ಬಂದಿತು.

"ಊರಿಗೆ ಹೋಗಿ ಬಹಳ ದಿನವಾಯ್ತು. ಈ ಮದುವೆಯ ನೆಪದಲ್ಲಿಯಾದರೂ ಹೋಗಿ ಬರೋಣ ಅಂದ್ರೆ" ಎಂದಿದ್ದಳು ವೆಂಕಮ್ಮ.

"ಮಾಡೋದಿಕ್ಕೆ ಕೆಲಸವಿಲ್ಲ ! ಅದೊಂದಿಷ್ಟು ಖರ್ಚು. ನಮ್ಮ ನಿರೆ ಬೇಡ."

ಎಂದು ನಾಗಪ್ಪನವರು ತಡೆಹಾಕಿದರು ಆ ರಾತ್ರಿ ಸುಮಿತ್ರೆಯ ಮದುವೆಯ ವಿಚಾರವನ್ನೇ ಯೋಚಿಸುತ್ತಾ ವರದಕ್ಷಿಣೆ ಹಣವನ್ನೇ ಗುಣಾಕಾರ ಹಾಕುತ್ತಿದ್ದಾಗ ತಟ್ಟನೆ ಅವರ ಮನಸ್ಸು ಅಷ್ಟಗ್ರಾಮಕ್ಕೆ ಓಡಿಹೋಯಿತು. ಅಲ್ಲಿ ಯಾರಾದರೂ 'ಗಂಡು'ಗಳಿರಬಹುದೆ ? ವರದಕ್ಷಿಣೆ ತೆಗೆದುಕೊಳ್ಳದಿರುವ 'ವರ'ಗಳು ಸಿಕ್ಕಬಹುದೆ ? ಹಾಗೆ ಯಾವನಾದರೂ ಸಿಕ್ಕಿದರೆ ಸುಮಿತ್ರೆಯನ್ನು ಸುಲಭವಾಗಿ ಕಟ್ಟಿಬಿಡಬಹುದು. ಖರ್ಚಿಲ್ಲದೆ ಕೆಲಸ ನಡೆದು ಹೋಗುತ್ತದೆ ಎಂದು ಯೋಚನೆ ಹೊಳೆಯಿತು

ಮರುದಿನ ಇದ್ದಕ್ಕಿದ್ದಂತೆ ವೆಂಕಮ್ಮನೊಡನೆ ಪ್ರಯಾಣಮಾಡಿದರು. ಪತಿಪತ್ನಿಯರು ಸುಮಿತ್ರೆಯನ್ನು ಕರೆದುಕೊಂಡು ರಾತ್ರಿಯ ರೈಲಿಳಿದು ಅಷ್ಟಗ್ರಾಮ ಸೇರಿದರು. ಆ ಕತ್ತಲೆಯಲ್ಲಿ ವೆಂಕಮ್ಮನು ಬಂದಿರುವ ಸುದ್ದಿ ನೆರೆಹೊರೆಯ ಹೆಂಗಸರಿಗೆ ಹೇಗೆ ತಿಳಿಯಬೇಕು ?

ಬೆಳಗಾದಮೇಲೆಯೂ ಆ ಸುದ್ದಿ ಗೋಪ್ಯವಾಗಿರುತ್ತದೆಯೆ? ಅದರಲ್ಲಿಯೂ ರಂಗಜ್ಜಿಗೆ ತಿಳಿದರೆ ಇಡೀ ಅಷ್ಟಗ್ರಾಮಕ್ಕೇ ತಿಳಿದಹಾಗೆ!

ಊರಿನ ವೃದ್ಧ ಸುಮಂಗಲಿಯರು, ಹಣ್ಣುಹಣ್ಣು ಮುದುಕಿಯರು ಒಂದಲ್ಲ ಒಂದು ಕಡೆ, ಒಂದಲ್ಲ ಒಂದು ರೀತಿಯಲ್ಲಿ ವೆಂಕಮ್ಮನನ್ನು ಮಾತನಾಡಿಸಿದರು. ಎಲ್ಲರ ಬಾಯಲ್ಲೂ ಅದೇ ಮಾತೇ!

"ನೀನು ತುಂಬ ಪುಣ್ಯವಂತೆ ವೆಂಕಮ್ಮ. ದೇವರು ಕೊಟ್ಟ ಐದು ಗಂಡುಮಕ್ಕಳೇ ನಿನಗೆ ದೊಡ್ಡ ಆಸ್ತಿ. ತಲಾ ಒಂದೊಂದು ಸಾವಿರ ಹಾಕಿದರೆ ನಿನ್ನ ಮಗಳಿಗೆ ರಾಜನಂಥ ಗಂಡು ಸಿಗುತ್ತಾನೆ. ನಿನ್ನ ಮಗಳಿಗೆ ಜೋರಾಗಿ ಮದುವೆ ಮಾಡಬಹುದು!"

ವೆಂಕಮ್ಮನಿಗೆ ಆ ಮಾತು ಕೇಳಿದಾಗಲೆಲ್ಲಾ ನಗು ಬರುತ್ತಿತ್ತು.

ಆದರೆ ಪಾರ್ವತಿ ಮಾತ್ರ ಆ ಮಾತು ಹೇಳಲಿಲ್ಲ.

"ವೆಂಕು, ಹಣದ ಸುಸಿ ಹಾಳಾಯ್ತು. ಒಳ್ಳೆ ಯೋಗ್ಯತೆ ಇರುವ ಹುಡುಗನಿಗೆ ನಿನ್ನ ಮಗಳನ್ನ ಕೊಡೆ. ಹುಡುಗಿ ಚೆನ್ನಾಗಿದ್ದಾಳೆ ಅಂತ ಇವತ್ತು ಒಪ್ಪಿ ಮದುವೆ ಆಗಿ, ನಾಳೆ–'ಹಣ ಸಾಲದು' ಅಂತ ಹಟ ಹಿಡಿದು ತೌರಿಗೆ ಅಟ್ಟುವಂಥ ಗಂಡಿಗೆ ಕೊಡಬೇಡವ್ಮ."

ಆ ಮಾತಿನಲ್ಲಿ ಪಾರ್ವತಿಯ ಸಂಕಟ ಅಡಗಿತ್ತು. ಅವಳ ಬಾಳಿನ ಅನುಭವಸಾರವೇ ಹುದುಗಿತ್ತು. ಅದನ್ನು ಹೇಳುವಾಗ ಕಂಠವೂ ಬಿಗಿದಿತ್ತು.

"ಅಂದಹಾಗೆ ನಿನ್ನ ವೇಷವೇ ಬದಲಾಗಿ ಹೋಗಿದೆಯಲ್ಲೆ ಪಾರ್ವತಿ?"

"ಇನ್ನೂ ನಾನು ಪಾರ್ವತಿಯೆಂದೇ ತಿಳಿದುಕೊಂಡಿದ್ದೀಯೇನೆ ವೆಂಕು. ನಾನು ಈಗ 'ಪಾತಿ' ಕಣೆ"

"ಅಂದರೆ ನಿನ್ನ ಯಜಮಾನರು ಹೋಗಿಬಿಟ್ಟರೇನೆ?"

"ಅವರು ಹೋಗಿ ಐದು ವರ್ಷಗಳ ಮೇಲಾಗುತ್ತ ಬಂತು"

"ಅಯ್ಯೋ ಪಾಪ!"

ಮರುಕ ಸೂಚಿಸಿದಳು ವೆಂಕಮ್ಮ.

"ಎರಡನೇ ಮದುವೆ ಆದಮೇಲೆ ನಿನ್ನ ಕರೆಸಿಕೊಳ್ಳಲೇ ಇಲ್ಲವೇನೆ?"

"ತಾಲಿ ಕಟ್ಟಿಸಿಕೊಂಡಮೇಲೆ ಎರಡು ತಿಂಗಳಿಗೇ ನನ್ನನ್ನ ಓಡಿಸಿದರಲ್ಲ. ನಿನಗೆ ಜ್ಞಾಪಕವಿಲ್ಲವೆ ವೆಂಕು ?"

"ಹ್ಞ........ಆಗ ನಾನೂ ಇಲ್ಲೇ ಇದ್ದೆನಲ್ಲ."

"ಆಮೇಲೆ ಅವರು ನನ್ನ ಮುಖವೇ ನೋಡಲಿಲ್ಲ. ಅವರು ಸತ್ತ ಸುದ್ದಿಯನ್ನೂ ನನಗೆ ತಿಳಿಸಲಿಲ್ಲ ಆಮೇಲೆ ಹ್ಯಾಗೋ ಗೊತ್ತಾಯಿತು ಅನ್ನು !"

"ಮದುವೆಯಾಗಿ ಯಾವ ಸುಖ ಅನುಭವಿಸಿದೆಯೆ ಪಾರ್ವತಿ"

"ಮದುವೆಯಾಗದೆ ಮೂಲೆಯಲ್ಲಿ ಬಿದ್ದಿದ್ದರೆ ಯಾವ ಸುಖವೋ, ಅದೇ ಸುಖವೇ ಅನುಭವಿಸಿದೆ ವೆಂಕು"

ಪಾರ್ವತಿಯ ಮಾತು ವೆಂಕಮ್ಮನ ಕರುಳು ಚುಚ್ಚಿತು.

ವರದಕ್ಷಿಣೆ ಸಾಲದೆಂದು ಅತ್ತೆ-ಮಾವ ಓಡಿಸುವ ಹಂಚಿಕೆ ಹಾಕಿ, ತುಂಬಿದ ಯೌವ್ವನದಲ್ಲಿ ರಂಭೆಯಂತಿದ್ದ ಪಾರ್ವತಿಯನ್ನು ಕುರುಡಿಯನ್ನಾಗಿಸಿ ಅಂಗಸೌಂದರ್ಯವನ್ನು ಅಂಗಾರಕನ ಪಾಲುಮಾಡಿ ಧೃತರಾಷ್ಟ್ರನ ಅನುಜಾತೆಯನ್ನಾಗಿ ಪರಿವರ್ತಿಸಿದರು. ರೂಪಕ್ಕೆ ಸೋತು ಕೈಹಿಡಿದಿದ್ದ ಗಂಡ, ಆಕೆ ಕುರೂಪಿಯಾದಾಗ ಕೈಬಿಟ್ಟು ತೌರಿಗೆ ಅಟ್ಟಿದ. ಪಾರ್ವತಿ ಕಾಮುಕ ಮಾರಿಗಳಿಗೆ ಬಲಿಯಾಗದೆ, ಪಾತಿವ್ರತ್ಯದಲ್ಲಿಯೇ ವೃದ್ಧೆಯಾದಳು ! ಯಾವ ಸುಖ ದೊರೆಕಿತು ಅವಳಿಗೆ ?

ವೆಂಕಮ್ಮನ ಮನಸ್ಸು ಪಾರ್ವತಿಯ ಬಾಳಿನ ಆದಿ-ಅಂತ್ಯವನ್ನು ಅವಲೋಕಿಸಿತು. ತನಗೂ ಒಂದು ಕಾಲದಲ್ಲಿ ಅಂತಹ ನೀರಸ ಬಾಳ್ವೆಯೇ ಮೀಸಲಾಗುವುದರಲ್ಲಿತ್ತು. ಆದರೆ ಅಣ್ಣ ಚಂದ್ರು ಅದನ್ನು ತಪ್ಪಿಸಿದ. ಇಲ್ಲದಿದ್ದರೆ ಅದೇ ನರಕ....ಅರಳಿ ಪರಿಮಳಿಸುವ ಕುಸುಮದಂತಹ ಕನ್ಯೆಯರ ಬಾಳು, ವರದಕ್ಷಿಣೆಯ ಉರಿಬಿಸಿಲಿಗೆ ಬಾಡಿ, ಮದುವೆಯ ಬಿರುಗಾಳಿಗೆ ಕೆಳಗುರುಳಿ, ಪತಿಯ ಹೆಸರಿನ ಮಾನ್ಯತೆಯಲ್ಲಿ ಅನ್ಯರ ಕಾಲ್ತುಳಿತಕ್ಕೆ ಸಿಕ್ಕಿ ಒಸಗಿ, ಕಸವಾಗಿ ಹಾಳಾಗುತ್ತಿದೆಯಲ್ಲಾ ಎಂದು ವೆಂಕಮ್ಮ ಮನಸಾರೆ ಮರುಗಿದಳು. ಅವಳ ಕಣ್ಮುಂದೆ ವಿವಾಹದ ಅದೃಷ್ಟ ಪರೀಕ್ಷೆಗೆ ನಿಂತ ಕನ್ಯೆ-ಸುಮಿತ್ರೆಯ ಬಾಳಿನ ಭವಿಷ್ಯದ ಚಿತ್ರ ಸುಳಿಯುತ್ತಿತ್ತು. ಆದರೆ ಅವಳು ನೆನಸಿದಂತೆ

ನಡೆಯುತ್ತದೆಯೆ ?

ನಾಗಪ್ಪನವರು ನೆನೆಸಿದ್ದೂ ನಡೆಯಲಿಲ್ಲ !

ಮದುವೆಗೆ ಬಂದಿದ್ದ ಬಂಧುಗಳನ್ನೆಲ್ಲಾ "ವರ ಇದೆಯೆ ?" ಎಂದು ನಿರ್ದಾಕ್ಷಿಣ್ಯವಾಗಿ ಕೇಳಿದರು ನಾಗಪ್ಪ. ಅಷ್ಟಗ್ರಾಮದ ಪರಿಚಿತ ಮನೆಗಳನ್ನೆಲ್ಲಾ ಒಳಹೊಕ್ಕರು. ವರನಿಗಾಗಿ ಹುಡುಕಾಡಿದರು. ತಂದೆ–ತಾಯಿಯರು 'ವರ ರತ್ನ' ಗಳನ್ನು ಮುಚ್ಚಿಡುತ್ತಾರೆಯೆ ? ಬಂಧುತ್ವದಲ್ಲೇನೋ ಒಂದೆರಡು ಗಂಡುಗಳ ಪತ್ತೆಯಾಯಿತು. ಆದರೆ ಎರಡು ಸಾವಿರ ವರದಕ್ಷಿಣೆಗೆ ಕಡಿಮೆಯಾದವರು ಯಾರೂ ಇರಲಿಲ್ಲ. ಸಾವಿರಕ್ಕೇ ಒಪ್ಪಿದ ಬೆಂಗಳೂರಿನ ಸೀತಾರಾಮಯ್ಯನವರ ಮಗನೇ ವಾಸಿ ಎಂದುಕೊಂಡು ಪತ್ನೀ ಪುತ್ರಿ ಸಮೇತರಾಗಿ ನಾಗಪ್ಪನವರು ಅಗ್ರಹಾರಕ್ಕೆ ಹಿಂತಿರುಗಿ ಬಂದರು.

## ೨೦

'ಕಣ್ಣೀರು' ಕಾದಂಬರಿ ಲಲಿತೆಯ ಮೇಲೆ ಪ್ರಬಲವಾದ ಪರಿಣಾಮವನ್ನೇ ಮಾಡಿತ್ತು. ಅದೂ ವರದಕ್ಷಿಣೆಯ ವಿಚಾರವಾಗಿಯೇ ಬರೆದ ಕತೆಯಾದುದರಿಂದ, ತಾನೂ ಅಂತಹ ಒಂದು 'ವರದಕ್ಷಿಣೆಯ ಪ್ರಸಂಗ'ದಲ್ಲಿ ಸಿಕ್ಕಿ ಬಿದ್ದಿದ್ದೇನೆಂದೂ, ಅದಕ್ಕೆ ಪರಿಹಾರ ಖಂಡಿತವಾಗಿ ಸಾಧ್ಯವಿದೆಯೆಂದೂ ಪರಿಪರಿಯಾಗಿ ಆಲೋಚಿಸಿದ್ದಳು ಲಲಿತ. ಆ ಕತೆಯಲ್ಲಿ ಒದಗಿರುವ ಸನ್ನಿವೇಶಕ್ಕೂ–ತನ್ನ ಸನ್ನಿವೇಶಕ್ಕೂ ವ್ಯತ್ಯಾಸ ವಿದೆಯೆಂದು ಆಕೆಗೆ ತಿಳಿದಿತ್ತು. ತನ್ನ ಬಾಳು ಹಾಳಾದರೂ ಸರಿಯೆ, ಶಾಂತುವಿನ ಬಾಳು ಹಾಳಾಗಬಾರದು ಎಂದು ದೃಢವಾಗಿ ನಿಶ್ಚಯಿಸಿ, ಶಾಂತುವಿನ ಸ್ನೇಹವನ್ನು ಹೆಚ್ಚಾಗಿ ಬೆಳಸತೊಡಗಿದ್ದಳು. ಅತ್ತೆ, ಮಾವ, ನಾದಿನಿಯರು ಅಷ್ಟಗ್ರಾಮಕ್ಕೆ ಹೊರಟು ಹೋದಾಗಲಂತೂ ಲಲಿತೆಗೆ ತುಂಬ ಅನುಕೂಲವೇ ಆಯಿತು. ಶಾಂತುವಿನ ಸ್ನೇಹ ದಿನ ದಿನಕ್ಕೆ ಬೆಳೆದು ಪರಸ್ಪರ ಆತ್ಮೀಯತೆಯಿಂದ ವರ್ತಿಸುವಂತಾಯಿತು.

ಆಗತಾನೇ ಗುಣ ಮುಖನಾಗಿದ್ದ ನಾಣಿಗೆ ಶಾಂತುವಿನ ನಿತ್ಯ ಸಂದರ್ಶನ ನವಚೇತನವನ್ನೇ ಕೊಟ್ಟಂತಾಗಿತ್ತು. ಲಲಿತೆ ಅವಕಾಶ ವಾದಾಗಲೆಲ್ಲ ಶಾಂತು – ನಾಣಿಯರು ಏಕಾಂತದಲ್ಲಿ ಮಾತಾನಾಡುವ ಸಂದರ್ಭಗಳನ್ನು ಒದಗಿಸತೊಡಗಿದಳು.

"ಶಾಂತು, 'ಅವರಿಗೆ' ಇವತ್ತು ನೀನೇ ಬಡಿಸು. ನಾನು ಬೇಗ ಬಟ್ಟೆ ಒಗೆದುಕೊಂಡು ಬರುತ್ತೇನೆ"

ಎಲೆಯನ್ನು ಹಾಕಿ ನಾಣಿಯನ್ನು ಊಟಕ್ಕೆ ಕೂಡಿಸಿ, ಅವನು ಒಂದು ತುತ್ತು ಕೈಗೆ ತೆಗೆದುಕೊಂಡಾಗ ಆ ಮಾತು ಹೇಳಿ ಅಲ್ಲಿಂದ ಹೊರಟು ಹೋಗುತ್ತಿದ್ದಳು ಲಲಿತ.

"ನನಗೆ ಯಾಕೋ ತಲೆನೋವು ಕಣೆ, ಶಾಂತು. ಆ ನೀಲಗಿರಿ ಎಣ್ಣೆ ಇತ್ತಲಾಗೆ ಕೊಡು. ಹಾಗೆಯೇ ಅಲ್ಲಿ ವೀಳ್ಯದೆಲೆ ಇದೆ, ತಗೊಂಡು ಹೋಗಿ 'ಅವರಿಗೆ' ಕೊಡಮ್ಮ. ಸುಣ್ಣ ಜಾಸ್ತಿ ಹಾಕ್ಕೊಂಡು ಬಾಯಿ ಸುಟ್ಟುಕೊಂಡು ಬಿಡ್ತಾರೆ! ನೀನೇ ಸುಣ್ಣಹಚ್ಚಿ ಮಡಿಚಿ ಕೊಡು"

"ಉಹ್ಞು ಅಕ್ಕ. ನಾನು ಹೋಗೋಲ್ಲ" ಎಂದು ಶಾಂತು ನಾಚಿಕೆ ನಟಿಸಿದಾಗ— "ಪರವಾಗಿಲ್ಲ ಹೋಗೆ. ಕಂಡಿದ್ದೀನಿ"

ಎಂದು ಲಲಿತ ನಗುತ್ತಲೇ ಅಧಿಕಾರವಾಣಿಯಲ್ಲಿ ನುಡಿಯುವಳು. ಶಾಂತುವಿಗೂ ಆ ಸಂದರ್ಭವನ್ನು ಉಪಯೋಗಿಸಿಕೊಳ್ಳುವ ಆಸೆ. ಆದರೆ ಲಲಿತೆಯನ್ನು ಅರಿತುಕೊಳ್ಳದ ನಾಣಿ—

"ಆ ಮಹಾದೇವಿ ಏನು ಮಾಡುತ್ತಿದೆ ?"

"ಯಾರು–ಅಕ್ಕನೇ ?"

"ಹ್ಞು"

"ತಲೆನೋವು ಅಂತ ಮಲಗಿಕೊಂಡಳು"

"ಒಳ್ಳೆಯದೇ ಆಯಿತು ಬಿಡು ಸದ್ಯ, ಆ ಹಾಳು ಶನಿ ಇಲ್ಲೆಲ್ಲಿ ಬಂದು ನನ್ನ ಕಣ್ಮುಂದೆ ಕುಕ್ಕರಿಸುತ್ತೋ ಅಂತಿದ್ದೆ"

"ಛೆ, ಹಾಗನ್ನ ಬೇಡಿ. ಅವಳು ದೇವತೆ."

"ನನಗೇನೋ ದೆವ್ವವೇ !"

"ಯಾವುದೋ ದೆವ್ವ ನಿಮ್ಮನ್ನು ಹಿಡಿದುಕೊಂಡಿದೆ ಅಷ್ಟೆ !"

"ನನಗೇನೂ ಹಿಡಿದಿಲ್ಲ ಶಾಂತು. ನಮ್ಮ ಅಪ್ಪನಿಗೆ ಹಿಡಿದಿದೆ—ವರದಕ್ಷಿಣೆ ದೆವ್ವ! ಅದಕ್ಕೋಸ್ಕರವೇ ನಿನ್ನಂತಹ ದೇವತೆಗೆ ಬದಲು ಇನ್ನೊಂದು ದೆವ್ವ ನನ್ನ ಕುತ್ತಿಗೆಗೆ ಗಂಟು ಬಿದ್ದಿದ್ದು !"

"ಹಾಗಂದವರು ಪಾಪಕ್ಕೆ ಹೋಗುತ್ತಾರೆ. ಲಲಿತಕ್ಕ ಸಾಕ್ಷಾತ್ ಶ್ರೀ ಲಲಿತೆ! ಅವಳು ಇಷ್ಟಪಡದಿದ್ದರೆ ನಾನು ಈ ಮನೆಯ ಹೊಸಲು ಮೆಟ್ಟುವುದಾದರೂ ಸಾಧ್ಯವಾಗುತ್ತಿರಲಿಲ್ಲ ನೀವು-ನನ್ನೊಡನೆ ಇಷ್ಟು ಮಾತನಾಡುವುದೂ ಸಾಧ್ಯವಾಗುತ್ತಿರಲಿಲ್ಲ."

"ಅದು ಸುಳ್ಳು ಅವಳು ಇಷ್ಟಪಟ್ಟರೇನು, ಪಡದಿದ್ದರೇನು ನಾನು ಇಷ್ಟಪಟ್ಟರೆ ಆಯಿತು !"

"ನೀವು ಇಷ್ಟಪಟ್ಟದ್ದೊಂದೂ ಖಂಡಿತ ಆಗುವುದಿಲ್ಲ. ಹಿಂದೆ ನಡೆದಿದ್ದೆಲ್ಲಾ ಜ್ಞಾಪಿಸಿಕೊಳ್ಳಿ !" ಎಂದು ಹೆಮ್ಮೆಯಿಂದ ನುಡಿಯುತಿದ್ದ ನಾಣಿಗೆ ಸೋಲದೆ ಶಾಂತು ಹೇಳುತ್ತಿದ್ದಳು.

ಅವಳ ಮಾತೇ ನಿಜವಾಯಿತು !

ನಾಗಪ್ಪ ವೆಂಕಮ್ಮ ಸುಮಿತ್ರೆಯರು ಅಷ್ಟಗ್ರಾಮದಿಂದ ಮರಳಿದ ಮೇಲೆ ನಾಣಿ ಎಷ್ಟು ಇಷ್ಟಪಟ್ಟರೂ ಶಾಂತುವಿನ ಮುಖದರ್ಶನ ದೊರೆಯುವುದೇ ಕಠಿಣವಾಗುತ್ತಿತ್ತು. ಅವಳ ಯೋಚನೆಯಲ್ಲಿಯೇ ಮುಖ ಬಾಡಿಸಿಕೊಂಡು ಕೊರಗುತ್ತಿರುವ ಅವನನ್ನು ಕಂಡಾಗ ಲಲಿತೆಗೆ 'ಅಯ್ಯೋ' ಎನ್ನಿಸುತ್ತಿತ್ತು ಆಗ ತಾನೇ ಶಾಂತುವನ್ನು ಕರೆದು ಕೊಂಡು ಬಂದು, ಕೋಣೆಯಲ್ಲಿ ನಾಣಿಯ ಬಳಿ ನಿಲ್ಲಿಸಿ, ತಾನು ಪೆಟ್ಟಿಗೆ ತೆರೆಯುವ ನೆಪದಲ್ಲಿ ಅತ್ತ ಕಡೆ ಮುಖ ತಿರುಗಿಸಿಕೊಂಡು—

"ನಿನಗೆ ತೋರಿಸ್ತೀನಿ ಅಂತ ಹೇಳಿದ್ದೆನಲ್ಲಾ ಆ ಕಪೂತಿ ಚೌಕ, ಅದು ಎಲ್ಲೋ ಈ ಪೆಟ್ಟಿಗೆಯಲ್ಲಿ ಕೆಳಗೆ ಸೇರಿಕೊಂಡು ಬಿಟ್ಟಿದೆ ಕಣೆ. ನಿಂತುಕೊಂಡಿರೇ ಅಲ್ಲೇ ; ಹುಡುಕಿ ತೆಗೀತೀನಿ"

ಎನ್ನುತ್ತಾ ಸ್ವಲ್ಪ ಹೊತ್ತು ಪೆಟ್ಟಿಗೆಯಲ್ಲಿನ ಸಾಮಾನುಗಳನ್ನೆಲ್ಲಾ ಕೆಳಗೆ ಸುರಿದು, ಅನಂತರ ಒಂದೊಂದಾಗಿ ಒಳಗೆ ಜೋಡಿಸಿ ಕೊನೆಗೆ

"ಇಲ್ಲೇ ಇರೆ. ಬಂದುಬಿಡ್ತೀನಿ. ನಮ್ಮ ಸುಮಿತ್ರ ಏನಾದರೂ ತೆಗೆದುಕೊಂಡಿದ್ದಾಳೇನೋ ನೋಡ್ತೀನಿ"

ಎನ್ನುತ್ತಾ ಕೋಣೆಯಿಂದ ಹೊರಗೆ ಹೊರಟುಹೋಗುವಳು.

ಅಪ್ಪರವರೆಗೂ ಕಣ್ಣುಗಳಲ್ಲಿಯೇ ಮಾತನಾಡಿಕೊಳ್ಳುತ್ತಿದ್ದ ನಾಣಿ ಶಾಂತು, ಲಲಿತ ಹೋದ ಕ್ಷಣದಲ್ಲಿಯೇ ತುಟಿಯಲ್ಲಿ ಮಾತನಾಡಿಕೊಂಡು ಪರಸ್ಪರ ವಿರಹ ವೇದನೆಗೆ ಸಂಜೀವಿನಿ ದೊರಕಿಸಿಕೊಳ್ಳುತ್ತಿದ್ದರು. ಬೇರೆ ಯಾರಾದರೂ ಆ ಕೋಣೆಯ ಬಳಿ ಸುಳಿಯುವ ಸೂಕ್ಷ್ಮ ತಿಳಿದೊಡನೆ ಲಲಿತ—

"ಸಿಕ್ಕಿತು ಕಣೆ ಶಾಂತು. ಬೇಗ ಬಾರೆ ಇಲ್ಲಿ"

ಎಂದು ಕರೆದು, ಆ ಕೋಣೆಯಲ್ಲಿ ಏನೂ ನಡೆಯಲೇ ಇಲ್ಲ ವೇನೋ ಎನ್ನುವಂತೆ, ತಾನೇ ಆ ಪ್ರಸಂಗವನ್ನು ಮರೆತು, ಇತರರಿಗೂ ತಿಳಿಯದಂತೆ ಮುಚ್ಚಿಟ್ಟು ಬಿಡುತ್ತಿದ್ದಳು

"ಎಂತಹ ಹಸುಗಳಿಗೆಯನ್ನು ಹಾಳು ಮಾಡಿಬಿಟ್ಟಳು ಆ ಮೂದೇವಿ" ಎಂದು ನಾಣಿ ಲಲಿತೆಯ ಮೇಲೆಯೇ ಬೈಗಳ ಸುರಿಮಳೆ ಸುರಿಸುತ್ತಿದ್ದ. ಅದಕ್ಕೆ ಲಲಿತೆ ಕೋಪಗೊಳ್ಳುವಳೇ ? ಗಂಡನ ಮನೆಗೆ ಬಂದ ಮೊದಲ ದಿನಗಳಲ್ಲಿ, ನಾಣಿಯ ವರ್ತನೆ ಕಂಡು ಕೊರಗುತ್ತ ದುಃಖಿಸುತ್ತಿದ್ದುದು ದಿನಚರಿಯಾಗಿತ್ತು. ಆದರೆ ಸುಮಿತ್ರೆಯಿಂದ ಶಾಂತು-ನಾಣಿಯರ ಪ್ರಣಯ ಪ್ರಸಂಗ ತಿಳಿದಮೇಲೆ, 'ಕಣ್ಣೀರು' ಕಾದಂಬರಿ ಓದಿದಮೇಲೆ, ಅವಳ ನೋವು-ನಗೆಯಾಗಿ ಪರಿವರ್ತಿತವಾಗಿತ್ತು. ಅಸಮಾಧಾನದ ಇರುಳಿನಲ್ಲಿ ಸಮಾಧಾನದ ಬೆಳಕಿನ ಚಂದ್ರ ಉದಿಸಿದ್ದ. ಬಾಡಿದ ಮುಖದಲ್ಲಿ ಹಾಡುವ ನಗೆಲಹರಿ ಹರಿಯುತ್ತಿತ್ತು. ಒಂದಲ್ಲ ಒಂದುದಿನ ನಾಣಿಯ ಜೀವನದಲ್ಲಿ ಶಾಂತುವಿಗೆ ಸಮಪಾಲು ದೊರೆಯಲೇಬೇಕೆಂದು ಆಕೆ ತೀರ್ಮಾನಿಸಿಕೊಂಡಿದ್ದಳು. ಹಾಗೆ, ತನ್ನ ಗಂಡನ ಬಾಳಿಗೆ ಬೆಳಕಾಗಿ ಬರುವ ಶಾಂತುವಿನ ಸ್ನೇಹವನ್ನು ಆತ್ಮೀಯ ಮಾಡಿಕೊಂಡು ಸೋದರಿಯ ಸಲಿಗೆಯಲ್ಲಿ ಆಮೋದವನ್ನು ಅನುಭವಿಸುತ್ತಾ ಅಪ್ರತಶಿಲೆಯಂತೆ ಆಕರ್ಷಕವಾಗಿ ಹೊಳೆಯುತ್ತಿದ್ದಳು. ಅವಳ ಬಿಳಿಯ ಮುಖದಲ್ಲಿ ಹೊಳೆಯುತ್ತಿದ್ದ ಬೆಳ್ಳಗಿನ ದಂತಪಕ್ತಿ ಆ ಆಕರ್ಷಣೆಯನ್ನು ಇಮ್ಮಡಿಸಿತ್ತು.

ಲಲಿತೆ, ಅತ್ತೆಯಮನೆಯ ಹೊಸ ಸೊಸೆಯಾಗಿ, ಹೀಗಿರುವುದು ಸಂತೋಷವೋ–ಅಸೂಯೆಯೋ ?

'ಸಂತೋಷ' ಎಂದರು ಕೆಲವರು.

'ತುಂಬ ಅಪರೂಪ' ಎಂದರು ಹಲವರು.

'ಪೂರ್ವಪುಣ್ಯ' ಎಂದರು ಕಣ್ಣು ಕಾಣದ ವೃದ್ಧರು. ಆದರೆ ಏನು ಹೇಳಲೂ ತೋರದ ಕಿಟ್ಟುವಿನ ಹೆಂಡತಿ ಸರಸು—

'ಇದು ಒಳ್ಳೆಯದಕ್ಕಲ್ಲ. ಏನೋ ಹೊತ್ತು ಬಂದಿದೆ ಈ ಹುಡುಗಿಗೆ' ಎಂದು ಅಸೂಯೆಪಟ್ಟಳು. ಲಲಿತೆಯ ನಗೆ ಮುಖವನ್ನು ಕಂಡಾಗ ಸರಸುವಿಗೆ ತುಂಬಿದ ಸೊಗಸಿನಲ್ಲಿ ಕಣ್ಣು ಬಿಟ್ಟಂತಾಗುತ್ತಿತ್ತು.

'ಅತ್ತಿಗೆ, ನೀನು ಎಷ್ಟು ಒಳ್ಳೆಯವಳು ಅತ್ತಿಗೆ' ಎಂದು ಸುಮಿತ್ರೆ ಲಲಿತೆಯ ಬಳಿ ನಿಂತು ತುಂಬಿದ ಹೃದಯದಿಂದ ನುಡಿದಾಗ, ಸುತ್ತಿಗೆ ಯಿಂದ ತನ್ನ ನೆತ್ತಿಗೆ ಹೊಡೆದಂತಾಗುತ್ತಿತ್ತು ಸರಸುವಿಗೆ. ಅತ್ತೆ, ಲಲಿತೆಯನ್ನು ಹೊಗಳಿದಾಗಲಂತೂ ತನ್ನ ಮುಖಕ್ಕೇ ಉಗುಳಿ ದಂತಾಗುತ್ತಿತ್ತು !

'ಈ ನರಕವನ್ನು ಸಹಿಸಲಾರೆ'–ಎಂದಿತು ಸರಸುವಿನ ಮನಸ್ಸು. ಅವಳ ಇರುಳುಗಣ್ಣಿಗೆ ಅದು ಸ್ವರ್ಗವೆಂದು ಹೇಗೆ ಗೋಚರಿಸಬೇಕು ? ಒಂದುವೇಳೆ ಗೋಚರಿಸಿದರೂ ಆ 'ಸವತಿ'ಯ ಸುಖವನ್ನು ಆಹುತಿ ತೆಗೆದುಕೊಳ್ಳುವ ನಾಗಿಣಿಯಲ್ಲವೇ ತಾನು ? ಆ ಸ್ವರ್ಗಕ್ಕೆ ಕಿಚ್ಚು ಹಚ್ಚದಿದ್ದರೆ ತನಗೆ ಹುಚ್ಚು ಹಿಡಿಯುವುದಿಲ್ಲವೆ ?

'ಇನ್ನು ತಡಮಾಡಬಾರದು' ಎಂದುಕೊಂಡು ಸರಸು, ನಾಗಮಣಿ ಯನ್ನು ಕಾಯುವ ನಾಗರಾಣಿಯಂತೆ ನಾಣಿಯ ಮೇಲೆ ತನ್ನ ಕಣ್ಣು ಕಾವಲಿಟ್ಟಳು.

ಒಂದು ಸಂಜೆ, ಇನ್ನೂ ಸೂರ್ಯ ಮುಳುಗಿರಲಿಲ್ಲ. ವೆಂಕಮ್ಮ ಸೀತಕ್ಕನ ಮನೆಯ ಜಗುಲಿಯ ಮೇಲೆ ಕುಳಿತು ಎಲೆ ಹಚ್ಚುತ್ತಿದ್ದಳು. ಸುಮಿತ್ರೆಯೂ, ಅವಳ ಬಳಿ ಕುಳಿತು, ತನ್ನ ಚಿಕ್ಕಣ್ಣಯ್ಯ ಶಾಮುವಿಗೆ ಕಳುಹಿಸಿಕೊಡಲು ಕರವಸ್ತ್ರದಮೇಲೆ ಕಸೂತಿ ಹಾಕುತ್ತಿದ್ದಳು. ಆಗ ತಾನೇ ಮನೆಗೆಲಸ ಮುಗಿಸಿ ಹೊರಗೆ ಬಂದ ಶಾಂತು—

"ಲಲಿತಕ್ಕ ಎಲ್ಲಿ ಸುಮಿತ್ರೆ ?"

"ಬೆಳಗ್ಗೆಯಿಂದ ಜ್ವರವಮ್ಮ ಅವಳಿಗೆ. ರೂಮಿನಲ್ಲಿ ಮಲಗಿದ್ದಾಳೆ" ವೆಂಕಮ್ಮನೇ ಭಾರವಾದ ಧ್ವನಿಯಲ್ಲಿ ಉತ್ತರಿಸಿದಳು.

"ನನಗೆ ಗೊತ್ತೇ ಇರಲಿಲ್ಲ. ಹೋಗಿ ನೋಡಿಕೊಂಡು ಬರುತ್ತೇನೆ"

ಎನ್ನುತ್ತಾ ಶಾಂತು ನಾಲ್ಕು ಹೆಜ್ಜೆ ಇಟ್ಟು, ಹಿಂತಿರುಗಿನೋಡಿ–

"ಬಾರೆ ಸುಮಿತ್ರಾ ನೀನೂನು" ಎಂದು ಕರೆದಳು. ಆದರೆ ಸುಮಿತ್ರ—"ಇಷ್ಟು ಹೊತ್ತೂ ನನಗೆ ಮನೇಲ್ಲೇ ಇದ್ದು ಬೇಜಾರಾಗಿದೆ. ನೀನು ಹೋಗಿ ಬಾ."

ಎಂದಾಗ, ಶಾಂತು ಒಬ್ಬಳೇ ಲಲಿತೆಯ ಕೋಣೆಗೆ ಬಂದಳು. ಅವಳು ಬಂದುದನ್ನು ಸರಸು ಸೂಕ್ಷ್ಮವಾಗಿ ತನ್ನ ಕೋಣೆಯಿಂದಲೇ ನೋಡಿದಳು. ಶಾಂತು ಬಾಗಿಲು ಸರಿಸಿ, ಕೋಣೆಯ ಒಳ ಹೊಕ್ಕು ಮತ್ತೆ ಮೊದಲಿನಂತೆಯೇ ಬಾಗಿಲು ಹಾಕಿದಳು. ಆಗ ತಾನೆ ಬಂದಿದ್ದ ನಾಣಿ ಒಳಗೆ ಕುಳಿತು ಯಾವುದೋ ಪುಸ್ತಕ ಓದುವುದರಲ್ಲಿ ಮಗ್ನನಾಗಿದ್ದ ಶಾಂತು, ಅವನ ನೋಟವನ್ನು ತನ್ನೆಡೆಗೆ ಸೆಳೆಯುವಷ್ಟು ಸೂಕ್ಷ್ಮವಾಗಿ, ಮೆಲ್ಲ ಮೆಲ್ಲನೆ ಹೆಜ್ಜೆಯಿಡುತ್ತಾ ಲಲಿತೆಯ ಬಳಿಗೆ ಬಂದಳು. ಒಂದೆರಡು ಬಾರಿ 'ಲಲಿತಕ್ಕ–ಲಲಿತಕ್ಕ' ಎಂದು ಮೆಲ್ದನಿಯಲ್ಲಿ ಕರೆದಳು. ಆದರೆ ಲಲಿತೆಗೆ ಗಾಢ ನಿದ್ರೆ ಬಂದಂತ್ತಿತ್ತು ! ಅವಳು ಎಚ್ಚರಗೊಳ್ಳಲಿಲ್ಲ. ಅಷ್ಟರಲ್ಲಿ ನಾಣಿಯ ನೋಟ ಶಾಂತುವನ್ನು ಸೆಳೆಯಿತು. ಅವಳು ಬಂದು ಅವನ ಬಳಿ ಕುಳಿತಳು. ಪಿಸುಮಾತು ಪ್ರಾರಂಭವಾಯಿತು : "ಎಷ್ಟು ದಿನ ಆಯಿತು ನೀನು ಬಂದು !"

"ನಿನ್ನೆ ಎಷ್ಟು ಹೊತ್ತು ಇದ್ದೆ ಎನ್ನುವುದನ್ನು ಮರೆತು ಬಿಟ್ಟಿರಾ?"

"ಶಾಂತು, ಸದಾ ನೀನು ನನ್ನ ಜೊತೆಯಲ್ಲಿಯೇ ಇರಬೇಕು. ನನ್ನ ಕಣ್ಮುಂದೆಯೇ ಇರಬೇಕು."

"ಅದು ಹೇಗೆ ಸಾಧ್ಯ ?"

"ಅದೇ ನನಗೆ ದೊಡ್ಡ ಸಮಸ್ಯೆ !"

"ಲಲಿತಕ್ಕನೇ ಅದನ್ನು ಬಗೆಹರಿಸಬೇಕು !"

"ಅದೊಂದು ಮೊದ್ದು ಮೂದೇವಿ. ಅದಕ್ಕೇನು ಗೊತ್ತಾಗುತ್ತದೆ"

"ಆ ಮಾತು ನಿಮಗೆ ಹೇಳಿಕೊಳ್ಳಿ !"

"ನಿಜವಾಗಿಯೂ ?"

"ಹ್ಞೂ........"

ಎಂದು ಶಾಂತು ತನ್ನ ಕೆನ್ನೆಯ ಕೆನೆಹಾಲಿಗೆ ಅಕ್ಕರೆಯ ಸಕ್ಕರೆ ಬೆರೆಯಿಸಿ, ತುಟಿ ಹಿಗ್ಗಿಸಿ, ಚಪ್ಪರಿಸಿ, ನಕ್ಕಾಗ ನಾಣಿಯ ಸ್ವರ್ಗ ಅವನ

ತೋಳ್ತಿಕ್ಕೆಯಲ್ಲಿ ಅಡಕವಾಗಿತ್ತು. ತುಟಿ, ಕೆನ್ನೆ, ಹಣೆ, ಕಣ್ಣುಗಳೆಲ್ಲಾ ಅವನು ಪ್ರೀತಿಯಿಂದ ಕೊಟ್ಟ ಮುತ್ತುಗಳನ್ನೆಲ್ಲಾ ಕೂಡಿಸಿಕೊಂಡು ಮಾಲೆಕಟ್ಟಲು ತೊಡಗಿದ್ದವು. ಆದರೆ ಆ ಮಾಲೆ ಪೂರ್ತಿಯಾಗಲು ಶಾಂತವೂ ತನ್ನ ಕೈಲಾದಷ್ಟು ದಾನ ಮಾಡಲು ನಿಶ್ಚಯಿಸಿ ತನ್ನ ಸರದಿಯನ್ನು ಉಪಯೋಗಿಸಿಕೊಂಡಳು. ಮೊದಲು ಕೊಟ್ಟ ತುಟಿಯು ಮತ್ತು ನಾಣಿಯು ಕೊಟ್ಟ ಮುತ್ತನ್ನು ಮೀರಿಸುವ ಗಟ್ಟಿ ಮುತ್ತಾಗಿತ್ತೆಂದು ಇಬ್ಬರಿಗೂ ತಿಳಿದಿತ್ತೇನೋ! ಅದು ಬೇಗ ಒಡೆಯಬಾರದೆಂದು ಇಬ್ಬರೂ ಪ್ರಯತ್ನಿಸಿ, ಕಾಪಾಡುವ ನೆಪದಲ್ಲಿ ಎಲ್ಲವನ್ನೂ ಮರೆತರೂ, ಅದು ಕಾಡು ಪಾಲಾಯಿತು! ಮೆಲ್ಲನೆ ಬಾಗಿಲು ಸರಿಯಿತು. ಮುತ್ತು ಒಡೆಯಿತು. ಒಡೆದ ಚೂರು ಒಂದು ಪಕ್ಕದಲ್ಲೊಂದು ಹತ್ತಿರ ಹತ್ತಿರದಲ್ಲೇ ಬಿದ್ದಿತು–ಸರಸು ಬಾಗಿಲ ಬಳಿ ನಿಂತಿದ್ದಳು!

"ಲಲಿತಕ್ಕನಿಗೆ ಜ್ವರ ಅಂತಿದ್ರು. ಹ್ಯಾಗಿದೆಯೋ ನೋಡೋಣ ಅಂತ ಬಂದೆ....ಥೂ, ಇದೇನು ಅಸಹ್ಯ"

ಆ ಒಡೆದ ಮುತ್ತಿಗೆ ಸುತ್ತಿಗೆಯಿಂದ ಗಿಡುಗಿ ಪುಡಿಪುಡಿಮಾಡಿದಂತೆ ಗಡಬಡನೆ ನುಡಿದು ಸರಸು ಹಾಗೆಯೇ ಬಾಗಿಲು ಎಳೆದುಕೊಂಡು ಚುಚ್ಚುವ ಮಲೇರಿಯಾ ಸೊಳ್ಳೆಯಂತೆ ಹಾರಿ ಹೋದಳು.

ಮರುದಿನ ಬಂದ ಪಂಡಿತರು ಲಲಿತೆಯ ಜ್ವರವನ್ನು ಪರೀಕ್ಷಿಸಿ 'ಇದು ಮಲೇರಿಯಾ ಜ್ವರವೇ!' ಎಂದು ತೀರ್ಮಾನಿಸಿ ಹೇಳಿದರು. ಆದರೆ ಅದು ಕಿಟ್ಟುವಿನ ಕೊಠಡಿಯಿಂದ ಬಂದ ಮಲೇರಿಯಾ ಸೊಳ್ಳೆ ಚುಚ್ಚಿದುದರಿಂದ ಬಂದ ಮಲೇರಿಯಾ ಜ್ವರವೆ?

"ಅಲ್ಲವೇ ಅಲ್ಲ!" ಎಂದರು ಕೋಟೆಯಿಂದ ಬಂದ ಡಾಕ್ಟರು. ವೆಂಕಮ್ಮನ ಬಲವಂತದಿಂದ, ನಾಣಿ ಅವರನ್ನು ಕರೆತಂದಿದ್ದ.

"ಮನಸ್ಸಿನಲ್ಲಿ 'ಏನೋ' ಇಟ್ಟುಕೊಂಡು ಕೊರಗುತ್ತಿರುವ ಹಾಗಿದೆ. ಹಾಗೆಯೇ ಮುಂದುವರಿದರೆ ಅದೇ "ಕ್ಷಯ"ವಾಗುತ್ತದೆ."

ಡಾಕ್ಟರ ಮಾತು ನಾಣಿಯನ್ನೇನೂ ಹೆದರಿಸಲಿಲ್ಲ.

'ಕ್ಷಯ ಬಂದವರು ಪರಲೋಕಕ್ಕೆ ಟಿಕೆಟ್ ತೆಗೆದುಕೊಂಡ ಹಾಗೆಯೇ. ಸದ್ಯ, ಲಲಿತೆಗೂ ಆ ಭಾಗ್ಯ ಸಿಕ್ಕಿದರೆ, ನನಗೆ ನನ್ನ ಭಾಗ್ಯ ರತ್ನವೇ ಸಿಕ್ಕುತ್ತದೆ!' ಎಂದು ಮನಸ್ಸಿನಲ್ಲೇ ಆಶಿಸಿದ ನಾಣಿ.

ಆದರೆ ಹೆದರಿದ್ದವಳು ವೆಂಕಮ್ಮ.

"ಹುಡುಗಿ ಮೊದಲಿನ ಹಾಗೆಯೇ ಆಗುವುದಕ್ಕೆ ಏನು ಮಾಡ ಬೇಕು ಹೇಳೀಪ್ಪಾ"

"ಬರೀ ಔಷಧಿ ಕುಡಿಸಿದರೆ ಏನೂ ಪ್ರಯೋಜನವಿಲ್ಲಮ್ಮ. ಮನಸ್ಸಿನ ಕೊರಗಿಗೆ ಕಾರಣ ತಿಳಿದು ಮದ್ದುಕೊಟ್ಟರೆ ಬೇಗ ಗುಣ ವಾಗುತ್ತದೆ" ಎನ್ನುತ್ತಾ ಡಾಕ್ಟರು ಔಷಧಿ ಕೊಟ್ಟು ಹಿಂತಿರುಗಿದರು. ಅದು ದೇಹದ ಖಾಯಿಲೆ ಗುಣವಾಗುವುದಕ್ಕಾಯಿತು. ಆದರೆ ಮನಸ್ಸಿನ ಕೊರಗನ್ನು ಮಾಯವಾಗಿಸುವಂಥ ಸಂಜೀವಿನಿಯನ್ನು ಕೊಡುವವರು ಯಾರು ?

"ಶಾಂತು........ಶಾಂತು........"

ಆಯಾಸದ ಹಗಲು ನಿದ್ದೆಯಲ್ಲಿ ಮೈಮರೆತಿದ್ದ ಲಲಿತ ಕನವರಿ ಸುತ್ತಾ ಕೂಗಿಕೊಂಡಳು—ಎರಡುಬಾರಿ....

"ಶಾಂತು....ಶಾಂತು...."

ಬಳಿಯಲ್ಲೇ ಕುಳಿತಿದ್ದ ವೆಂಕಮ್ಮ ಸೊಸೆಯ ಸ್ಥಿತಿಯನ್ನು ನೋಡುತ್ತ ನೋಡುತ್ತ ವ್ಯಥೆಪಡುತ್ತಿದ್ದಳು. ಡಾಕ್ಟರು 'ಮನಸ್ಸಿನ ಕೊರಗು' ಎಂದು ಹೇಳಿದ ಮೇಲೆ ವೆಂಕಮ್ಮ 'ಅದೇನಿರ ಬಹುದು' ಎಂದು ಗಾಢವಾಗಿ ಯೋಚಿಸಿ ಊಹಿಸಿಕೊಂಡಿದ್ದಳು. ಮದುವೆಯಾಗಿ ಮನೆಗೆ ಬಂದ ಹುಡುಗಿ ಗಂಡನಿಗೆ ಉಪೇಕ್ಷಿತಳಾಗಿ, ತಿರಸ್ಕರಿಸಲ್ಪಟ್ಟು, ಇದ್ದೂ ಇಲ್ಲದ ಬಾಳನ್ನು ಬಾಳುತ್ತಿರುವುದೇ ಆ ಕೊರಗು ಎಂದುಕೊಂಡರು. ಆ ಕ್ಷಣ ನಾಣಿಯ ಬಗೆ ಕ್ರೋಧ ಮೂಡುತ್ತಿತ್ತು. ಕೈ ಹಿಡಿದವಳನ್ನು ಕಡೆಗಣ್ಣಿನಿಂದ ಕಾಣುತ್ತಾ ಕೊರಗಿಸುತ್ತಿರುವವನು ಅವನೇ ಎಂಬ ವಿಚಾರ ಸುಳಿದಾಗ, ಚಿನ್ನ ದಂಥ ಹುಡುಗಿಯನ್ನು ಕಲ್ಲಿದ್ದಲಿಗಿಂತ ಕಡೆಯಾಗಿ ಕಂಡು, ಮೊಂಡು ತನವನ್ನೇ ಸಾಧಿಸುವುದು ಕಲ್ಲು ಮನಸ್ಸಿನ ಕುಲ್ಲಕತನವೆಂದು ಅವರ ಮನಸ್ಸು ಸಮರ್ಥಿಸುತ್ತಿತ್ತು. ಮರುಕ್ಷಣದಲ್ಲಿಯೇ—ಬಂಗಾರ, ಬಂಗಲೆ, ಶೃಂಗಾರ, ಸೌಂದರ್ಯ, ಮೆಚ್ಚುವ ಗುಣ, ಕೈ ಹಿಡಿದ ಋಣ—ಎಲ್ಲವೂ ಇದ್ದರೂ ಮನಸ್ಸಿಲ್ಲದಿದ್ದರೆ ಏನಾಗುತ್ತದೆ ? ಹಾಗೆಯೇ ನಾಣಿಗೆ ಅವಳ ಮೇಲೆ ಮನಸ್ಸಿಲ್ಲ. ಮನಸ್ಸಿಲ್ಲದವಳನ್ನು ಏಕೆ ಮದುವೆಯಾಗಬೇಕು

ಎಂದರೆ, ಅದು ಅವನ ತಪ್ಪೆ? ಹಾಗಾದರೆ ತಪ್ಪು ಯಾರದು? ವರ ದಕ್ಷಿಣೆಯ ಆಸೆಗೆ ಆ ಹುಡುಗಿಯನ್ನು ತಂದು ನಾಣಿಗೆ ಕಟ್ಟದಿದ್ದರೆ, ಆ ಹುಡುಗಿ ಏಕೆ ಈ ಮನೆಗೆ ಬಂದು ಮರ್ಮಸಂಕಟವನ್ನನು ಭವಿಸುತ್ತಿದ್ದಳು? ಅವಳು ಅವನಿಗೆ ಬೇಡವಾದ ಹುಡುಗಿ. ಬೇಡವಾದ ವಳಾಗಿ ತಾನೇಕೆ ಬದುಕಿರಬೇಕು ಎನ್ನುವ ಕೊರಗು ಅವಳಿಗೆ. ಆ ಕೊರಗೇ ಕಾಯಿಲೆ. ಡಾಕ್ಟರು ಹೇಳಿದ ಮನಸ್ಸಿನ ಕಾಯಿಲೆ ಮನೋ ರೋಗಕ್ಕೆ ಮದ್ದಿಲ್ಲವೆನ್ನುತ್ತಾರೆ. ಅದು ನಿಜವಾದರೆ ಲಲಿತೆಯ ಗತಿ..?

ವೆಂಕಮ್ಮನ ಮನಸ್ಸಿನಲ್ಲಿ ಅಲೆ ಅಲೆಯಾಗಿ ಬಂದು ಹೋಗುತಿತ್ತು ಯೋಚನಾಸರಣಿ.

"ಶಾಂತು....ಶಾಂತು...."

ಇನ್ನೊಮ್ಮೆ ಅದೇ ಕನವರಿಕೆ. ಲಲಿತ ಮಗ್ಗುಲು ಬದಲಿಸಿ ಹೊರಳಿದಳು. ವೆಂಕಮ್ಮ ಅವಳ ಹಣೆಯಮೇಲೆ ಕೈಯಿಟ್ಟು ನೋಡಿದರು.

"ಪುಟ್ಟಾ, ಇದೇನೇ ಇಷ್ಟು ಸುಡುತ್ತಿದೆಯಲ್ಲಮ್ಮ"

"ಅಮ್ಮ, ನೀಲಗಿರಿತೈಲ ತರಲೇನೆ, ಅತ್ತಿಗೆ ಹಣೆಗೆ ಹಚ್ಚಿ ತಿಕ್ಕು. ತಲೆ ನೋವಾಗಿದ್ದರೆ ಬಿಟ್ಟು ಹೋಗಲಿ"

ಎನ್ನುತ್ತಾ ಸುಮಿತ್ರೆ ಎದ್ದು ಹೋಗಿ ನೀಲಗಿರಿ ಎಣ್ಣೆಯನ್ನು ತಂದು ತಾಯಿಯ ಕೈಗಿತ್ತಳು. ವೆಂಕಮ್ಮ ಲಲಿತೆಯ ಹಣೆಗೆ ಅದನ್ನು ಹಿತವಾಗಿ ಉಜ್ಜತೊಡಗಿದರು. ಎರಡು ನಿಮಿಷಗಳ ಬಳಿಕ ನಿದ್ರೆ ಯಲ್ಲಿದ್ದ ಲಲಿತ ಎಚ್ಚರಗೊಂಡು—

"ಅತ್ತೆ........ಅತ್ತೆ........"

ಎಂದು ಕೂಗಿದಳು.

"ಏನಮ್ಮ, ತಲೆನೋವು ಹೆಚ್ಚಾಗಿದೆಯೋ ಪುಟ್ಟಾ?"

"ಇಲ್ಲ ಅತ್ತೆ. ಶಾಂತೂನ ನೋಡಬೇಕು ನಾನು"

ವೆಂಕಮ್ಮ ಕೂಡಲೆ ಶಾಂತುವಿಗೆ ಹೇಳಿಕಳುಹಿಸಿದಳು. ಆದರೆ ಅವಳು ಬರುವಳೇ? ಹಿಂದಿನ ಸಂಜೆ ಕಿಟ್ಟುವಿನ ಕೊಠಡಿಯಿಂದ ಬಂದ ಮುತ್ತು ಒಡೆದ ಮಲೇರಿಯಾ ಸೊಳ್ಳೆ ಅವಳನ್ನು ಕಚ್ಚಿತ್ತು. ಉತ್ಸಾಹ ವಿಲ್ಲದೆ ಅವಳ ದೇಹ ಅತ್ತಿಂದಿತ್ತ ತಿರುಗಾಡುತ್ತಿದ್ದರೂ, ಕಾಯಿಲೆ

ಅಂಟಿಕೊಂಡು ಹಾಸಿಗೆ ಹಿಡಿದಿತ್ತು ಅವಳ ಬೇಸತ್ತ ಮನಸ್ಸು !

ಆ ದಿನ ಬೆಳಗ್ಗೆಯೇ ಸರಸು ಗುಟ್ಟಾಗಿ ಸೀತಕ್ಕನನ್ನು ಸಂಧಿಸಿ, ತಾನು ನಾಣಿಯ ಕೋಣೆಯಲ್ಲಿ ಕಂಡ ಸಂಗತಿಯನ್ನು ಬಣ್ಣಿಸಿದ್ದಳು ಶಾಂತು-ನಾಣಿಯರನ್ನು ಚಿಕ್ಕಂದಿನಿಂದಲೂ ನೋಡುತ್ತಿದ್ದ ಸೀತಕ್ಕ ನಿಗೆ ಆ ಮಾತು ಸುಳ್ಳೆನಿಸಲಿಲ್ಲ ಆದರೆ ಅದು ತನ್ನ ಮಗಳ ತಪ್ಪಿಂದಾಗಲಿ, ನಾಣಿಯ ತಪ್ಪಿಂದಾಗಲಿ ಆಕೆ ಹೇಳಲಿಲ್ಲ. ಅವಳ ಮನಸ್ಸು 'ನಿನ್ನ ಬಡತನದ ತಪ್ಪು' ಎಂದಿತು. ಮರುಕ್ಷಣದಲ್ಲಿ 'ನಾಗಪ್ಪನವರ ವರದಕ್ಷಿಣೆ ಆಸೆ' ಎಂದು ಕೂಗಿ ಹೇಳಿತು ಬಡತನ- ವರದಕ್ಷಿಣೆಗಳಿಗೆ ಬಹು ಬೆಲೆಯ ಜೀವ ರತ್ನಗಳು ಬಲಿಯಾಗಬೇಕೇ ಎಂದುಕೊಂಡಳು ಸೀತಕ್ಕ.

"ಮದುವೆಯಾಗದ ಹುಡುಗಿಗೆ ಆಗಬಾರದ್ದು ಆಗಿಹೋದರೆ ಕೆಟ್ಟಹೆಸರು ಯಾರಿಗೆ ಸೀತಕ್ಕ ?"

ಸೀತಕ್ಕನ ಹೃದಯಕ್ಕೆ ಕೊಂಡಿಚೇಳಿನಂತೆ ಕುಟುಕಿದ್ದಳು ಸರಸು. ಅವಳ ಮಾತೂ ಯೋಚಿಸಬೇಕಾದುದೇ ಅಲ್ಲವೇ ?

ಲೋಕದ ಕಣ್ಣಿಗೆ ಕಾಣದಂತೆ ಶಾಂತು ನಾಣಿಯ ಪ್ರೇಮದ ರಾಣಿಯಾದರೆ, ಅದರ ಪರಿಣಾಮ-ಮಾನಾಪಹರಣ, ಪ್ರಾಣಾರ್ಪಣ, ನಾಲದೆಂಬಂತೆ ಇನ್ನೊಂದು ತಲೆಮಾರಿನವರೆಗೆ ನಿಲ್ಲುವ ನಿಂದೆ !

ಅಷ್ಟರವರೆಗೆ ಅವಕಾಶಕೊಡುವುದು ತನ್ನ ತಪ್ಪೆಂದು ನಿರ್ಧರಿಸಿ ಕೊಂಡಳು ಸೀತಕ್ಕ. ಸರಸು ಹೋದನಂತರ ಶಾಂತುವಿಗೆ ಛೀಮಾರಿ ಹಾಕಿ, ವೆಂಕಮ್ಮನ ಮನೆಯಕಡೆ ಸುಳಿಯಬಾರದೆಂದು ಕಟ್ಟಪ್ಪಣೆ ಮಾಡಿದಳು. ಅವಳ ವಿಷಯದಲ್ಲಿ ತಾನೇ ಸ್ವತಃ ಜಾಗ್ರತೆ ವಹಿಸಿದಳು. ಮನಸ್ಸಿಗೆ ಬಂದ ಮಲೇರಿಯಾ ರೋಗದಿಂದ ಶಾಂತುವಿನ ಮುಖವೂ ಮಲಿನವಾಗಿತ್ತು.

"ಶಾಂತು, ಅಮ್ಮ ಕರೀತಾಳೆ-ಬರಬೇಕಂತೆ"

ಎಂದು ಸುಮಿತ್ರೆ ಹೇಳಿದಾಗ ಶಾಂತುವಿನ ಮುಖದಲ್ಲಿ ಗೆಲುವು ಮಿಂಚಿತು.

"ಏನೋ ಕೆಲ್ಸ ಮಾಡ್ತಾ ಇದ್ದಾಳೆ. ಆಮೇಲೆ ಬರ್‍ತಾಳಂತೆ ಅಂತ ಹೇಳು-ಹೋಗಮ್ಮ"

ಎಂದು ಸೀತಕ್ಕನೇ ಉತ್ತರಿಸಿದಾಗ ಶಾಂತುವಿನ ಮುಖ ಮತ್ತೆ ಬಾಡಿತು.

'ಈಗ ಬರುವಳು–ಇನ್ನೇನು ಬರುವಳು' ಎಂದು ನಿರೀಕ್ಷಿಸಿದ ಲಲಿತೆಯೂ ನಿರಾಶೆಗೊಂಡು ಮುಖ ಬಾಡಿಸಿಕೊಂಡಳು.

ಸಂಜೆ ವೆಂಕಮ್ಮನೇ ಬಂದಳು ಸೀತಕ್ಕನ ಮನೆಗೆ. ಸರಸು ಹೇಳಿದ ಪ್ರಸಂಗದ ಪುನರ್‌ಕಥನವಾಯಿತು.

"ಸೀತು, ಅದು ನನ್ನ ತಪ್ಪೇನೆ?"

"ಅಲ್ಲ ಅಕ್ಕ!"

"ಲಲಿತೆಯ ತಪ್ಪೇನೆ?"

"ಯಾವ ಬಾಯಲ್ಲಿ ಆ ಮಾತು ಆಡಲಿ ಅಕ್ಕ?"

"ನಿನ್ನ ಸಿಟ್ಟು ಆ ಹುಡುಗಿಯಮೇಲೆ ತೋರಿಸಬಹುದೇನಮ್ಮ?"

"ಆ ಹುಡುಗಿಯ ಮೇಲೆ ನನಗೇತಕ್ಕೆ ಸಿಟ್ಟು?"

"ನಿದ್ದೆಯಲ್ಲೆಲ್ಲಾ 'ಶಾಂತು,........ಶಾಂತು' ಅಂತ ಕನವರಿಸಿ ಕೊಳ್ಳುತ್ತಾಳಲ್ಲೆ!"

"ನಿಜವೇನಕ್ಕ!"

"ಆ ಹುಡುಗಿ ಶಾಂತುವಿಗೋಸ್ಕರ ಎಷ್ಟು ಒದ್ದುಕೊಳ್ತಾಳೆ ಗೊತ್ತೇನೆ ಸೀತು?"

"ಹೌದಮ್ಮ. ನನ್ನನ್ನ ಕಂಡರೆ ಲಲಿತಕ್ಕನಿಗೆ ತುಂಬ ಪ್ರೀತಿ".

ಎಂದಳು ಶಾಂತು. ವೆಂಕಮ್ಮನ ದುಃಖದ ದನಿ ಸೀತಕ್ಕನ ಹೃದಯವನ್ನು ಕರಗಿಸಿತ್ತು.

"ಹೋಗಿ ಬಾ ಶಾಂತು; ಲಲಿತಕ್ಕನನ್ನು ಮಾತನಾಡಿಸಿಕೊಂಡು ಬಂದು ಬಿಡು"

ಎಂದು ಸೀತಕ್ಕ ನುಡಿದಾಗ—

"ನಾನೂ ನಿನ್ನ ಜತೆಯಲ್ಲಿಯೇ ಬರುತ್ತೇನೆ–ನಡಿಯಮ್ಮ"

ಎನ್ನುತ್ತಾ ವೆಂಕಮ್ಮನೂ ಎದ್ದು ಶಾಂತುವನ್ನು ಹಿಂಬಾಲಿಸಿದಳು.

ಇಬ್ಬರೂ ಜೊತೆಯಲ್ಲಿ ಬಂದುದನ್ನು ಕಂಡ ಸರಸುವಿಗೆ ಕೆಂಡದ ಮೇಲೆ ನಿಂತಂತಾಯಿತು.

"ಲಲಿತ, ಶಾಂತು ಬಂದಿದ್ದಾಳೆ–ನೋಡಮ್ಮ"

ವೆಂಕಮ್ಮನ ಧ್ವನಿ ಸಂಗೀತದಷ್ಟು ಇಂಪಾಗಿ ಕೇಳಿಸಿತು. ಮೆಲ್ಲನೆ ಕಣ್ ತೆರದು ಈಕ್ಷಿಸಿದಳು ಲಲಿತ.

"ಅಕ್ಕ, ಜ್ವರ ಹೇಗಿದೆ?"

"ಈಗ ಸ್ವಲ್ಪ ಇಳಿದಿದೆಯಮ್ಮ, ಪರವಾಗಿಲ್ಲ"

ಮೌನವಾದಳು ಶಾಂತು. ಅವಳ ಕೈ ಲಲಿತೆಯ ಮುಂಗೂದಲನ್ನು ನೇವರಿಸಿತು.

"ಯಾಕೆ ಶಾಂತು, ಈಕಡೆ ಬರಲಿಲ್ಲ".

ಮಗುವಿನಂತೆ ಮುಗ್ಧಳಾಗಿ ಕೇಳಿದಳು ಲಲಿತೆ. ಆದರೆ ಶಾಂತು ಏನೆಂದು ಉತ್ತರಿಸಬೇಕು?

"ಎರಡು ದಿನಕ್ಕೇ ಎಷ್ಟು ಇಳಿದುಹೋಗಿದ್ದೀ ಲಲಿತಕ್ಕ?"

"ಅತ್ತಿಗೆಗೆ ಬೇಗ ವಾಸಿಯಾದರೆ ವರದರಾಜಸ್ವಾಮಿಗೆ ಮಹಾ ಮಂಗಳಾರತಿ ಮಾಡಿಸುತ್ತೇನಂತ ಅಮ್ಮ ಹರಸಿಕೊಂಡಿದ್ದಾರೆ ಶಾಂತು!"

ಎಂದು ಮೃದುವಾಗಿ ನಗುತ್ತಾ ನುಡಿದ ಸುಮಿತ್ರೆಯ ಮಾತಿಗೆ–

"ಲಲಿತಕ್ಕ ಎದ್ದು ಓಡಾಡುವ ಹಾಗಾದರೆ ನಾನೂ ಎರಡು ತೆಂಗಿನಕಾಯಿ ಒಡೆಯುತ್ತೇನೆ!"

ಎಂದು ಶಾಂತುವೂ ದನಿಗೂಡಿಸಿದಳು.

ಅಷ್ಟರಲ್ಲಿ ಬೆಂಗಳೂರಿಗೆ ಹೋಗಿದ್ದ ನಾಗಪ್ಪನವರು, ಶಾಮುವನ್ನು ಜೊತೆಯಲ್ಲಿ ಕರೆದುಕೊಂಡು ಒಳಗೆ ಬಂದರು.

"ಅಮ್ಮ, ಚಿಕ್ಕಣ್ಣಯ್ಯ ಬಂದ ಕಣೆ!"

ಅಣ್ಣನನ್ನು ಕಂಡ ಆನಂದದಿಂದ ಸುಮಿತ್ರೆ ತಾಯಿಗೆ ಸುದ್ದಿ ತಿಳಿಸಿಧಳು.

"ನಾನು ಹೋಗ್ತೀನಿ ಲಲಿತಕ್ಕ. ಆ ಮೇಲೆ ಬರ್ತೀನಿ"

ಎಂದು ಶಾಂತು ನಾಗಪ್ಪನವರ ಬಿರುನೋಟಕ್ಕೆ ಹೆದರಿ ನುಸುಳಿಕೊಂಡು ಹೋದಳು.

ಶಾಮುವಿನ ಕೈಚೀಲವನ್ನು ತೆಗೆದು ನೋಡಿದ ಸುಮಿತ್ರೆ–

“ಅಣ್ಣಯ್ಯ, ಸೀರೆ ತಂದಿದಾನೆ ಕಣೆ ಅಮ್ಮ”
ಎಂದು ನಗೆ ಮಲ್ಲಿಗೆ ಚೆಲ್ಲಿ ನುಡಿದಳು.
“ಹ್ಞಂ........ನಿನಗೇನೂ ಇಲ್ಲ!”
ಎಂದರು ನಾಗಪ್ಪ.
“ಇನ್ಯಾರಿಗೋ..........?”
“ಅವನ ಹೆಂಡತೀಗೆ ಕಣೆ!”
“ಹಾಗಾದರೆ ಹೆಂಡತಿ ಎಲ್ಲಿ?”
‘ಇದ್ದಾಳೆ ಇಲ್ಲಿ. ತೋರಿಸ್ತೀನಿ ಆಮೇಲೆ!”
ಎಂದರು ನಾಗಪ್ಪ.
ಅನಂತರ ಸುಮಿತ್ರೆ ಕೈಚೀಲದೊಳಗೆ ಹುಡುಕಾಡಿ–
“ಅಮ್ಮ, ಮಾವಿನ ಹಣ್ಣು?” ಎಂದಳು.
ಅದುವರೆಗೂ ಅತ್ತ ಕಡೆ ಗಮನಿಸದಿದ್ದ ವೆಂಕಮ್ಮ—
‘ಏನೇ ಅದು ನಿನ್ನ ಅವಾಂತರ? ಶಾಮು, ಸೀರೆ, ಹೆಂಡತಿ, ಮಾವಿನ ಹಣ್ಣು ಅಂತ ಏನೇನೋ ಮಾತಾಡ್ತಾ ಇದ್ದೀಯಲ್ಲ!”
ಎನ್ನುತ್ತಾ ಅಂಗಳಕ್ಕೆ ಬಂದಳು.
ಶಾಮು ಮಂದಹಾಸ ಬೀರುತ್ತಾ ನಿಂತಿದ್ದ, ಸುಮಿತ್ರೆಯ ತೊಡೆಯಮೇಲೆ ಹಸಿರು ವಾಯಿಲ್ ಸೀರೆ ಇದ್ದಿತು; ಅವಳ ಕೈಯಲ್ಲಿ ಮಾವಿನ ಹಣ್ಣು ಮಂಡಿಸಿತ್ತು.
“ಹ್ಞಂ, ನಾನು ಅಂದ್ಕೊಂಡೆ, ಇವತ್ತು ಮಧ್ಯಾಹ್ನ ಮಜ್ಜಿಗೆ ಹುಳಿ ಊಟಮಾಡ್ತಾ ಇರೋವಾಗ ‘ನಮ್ಮ ಶಾಮೂಗೆ ಇದು ತುಂಬ ಇಷ್ಟ, ಅವನಿದ್ದಿದ್ದರೆ ಮಧ್ಯಾಹ್ನಕ್ಕೇ ಸಾಲುತ್ತಿರಲಿಲ್ಲ ಈ ಮಜ್ಜಿಗೆ ಹುಳಿ’ ಅಂತ. ಇದೋ ಈಗ ನೀನು ಪ್ರತ್ಯಕ್ಷವಾಗಿಬಿಟ್ಟೆ!”
ಎಂದಳು ವೆಂಕಮ್ಮ.
ನಗುತ್ತಿದ್ದ ಶಾಮು—
“ಹೋಗಲಿ. ಇನ್ನೂ ಮಿಕ್ಕಿದೆಯೋ ಇಲ್ಲವೋ?” ಎಂದ.
“ಓಹೋ! ದಂಡಿಯಾಗಿದೆ ನಡಿಯಪ್ಪ. ಕೈಕಾಲು ತೊಳೆದು ಕೊಂಡು ಬಾ. ಬಡಿಸುತ್ತೇನೆ”
–ವೆಂಕಮ್ಮ ಅಡಿಗೆ ಮನೆಯ ಕಡೆಗೆ ನಡೆದರು.

ಸಂಜೆಗತ್ತಲಾಗಿದ್ದರಿಂದ ಸುಮಿತ್ರೆ ಅಂಗಳದಲ್ಲಿ ದೀಪ ಹಚ್ಚಿಟ್ಟು, ನಾಣಿಯ ಕೋಣೆಯಲ್ಲೂ ಬೆಡ್‌ಲ್ಯಾಂಪ್ ಹೊತ್ತಿಸಿಟ್ಟು ಬಂದಳು.

ಸ್ವಲ್ಪ ಹೊತ್ತಿನನಂತರ ಊಟಕ್ಕೆ ಕುಳಿತರು–ಮಗನೊಡನೆ ನಾಗಪ್ಪ.

"ನಮ್ಮ ಶಾಮೂಗೆ ಒಂದು ಹೆಣ್ಣು ನೋಡಿಕೊಂಡು ಬಂದಿದ್ದೀನಿ ಕಣೆ"

"ಸದ್ಯ, ಅವನಿಗೆ ತಾನೆ ಅವಸರ ? ಬೆಳೆದ ಹುಡುಗಿ ಮನೆಯಲ್ಲಿ ಇರಲಿ. ಅವಳಿಗೊಂದು ಗಂಡು ಹುಡುಕದೆ ಎಷ್ಟು ದಿನಾಂತ ಹೀಗೆ ಇಟ್ಟುಕೊಂಡಿರುತ್ತೀರಿ ?"

"ಅವಳಿಗೂ ಹುಡುಕಿದ್ದೇನಲ್ಲ !"

"ಹುಡುಕಿದರೆ ಬಂತೆ ಭಾಗ್ಯ !"

"ಇನ್ನೇನಾಗಬೇಕು–ಮದುವೆ ಅನ್ನೋದು ಒಂದು ತಾನೆ?"

"ಹ್ಞು, ಅದೊಂದು ಆಗಿಹೋದರೆ ನಾವು ನಿಶ್ಚಿಂತೆಯಾಗಿರಬಹುದು !"

"ಅದಕ್ಕೇ ಕಣೆ, ಶಾಮುವಿನ ಮದುವೆ ಜತೆಯಲ್ಲೇ ಅವಳ ಮದುವೆಯನ್ನೂ ಮಾಡಿಬಿಡೋಣ. ಖರ್ಚಿನಲ್ಲಿ ಖರ್ಚು !"

ಎಂದರು ನಾಗಪ್ಪ. ಹಾಗೆ ಮಾಡಿದರೆ ಊಟದ ಖರ್ಚು ತಮಗೆ ಬೀಳುವುದಿಲ್ಲವೆಂದು ಅವರು ಹಂಚಿಕೆ ಹಾಕಿದ್ದರು.

"ಹಾಗಾದರೆ ಬೇಗ ಏರ್ಪಾಟುಮಾಡಿ. ಶಾಮು ಹುಡುಗಿಯನ್ನು ನೋಡಿದ್ದಾನೆಯೋ ?"

"ಕರಕೊಂಡು ಹೋಗಿ ತೋರಿಸಿದೆ"

ಎಂದರು ನಾಗಪ್ಪ. ಶಾಮು ತಲೆ ತಗ್ಗಿಸಿಕೊಂಡು ಊಟ ಮಾಡುತ್ತಿದ್ದ.

"ನಿನಗೆ ಒಪ್ಪಿಗೆಯಾಯಿತೇನೋ ಶಾಮು ?"

"ನನಗೇನಮ್ಮ ಅವಸರ ಮದುವೆಗೆ ?"

"ನಿನಗಾಗದಿದ್ದರೆ ನಿಮ್ಮಣ್ಣ ಸುಮಿತ್ರೆಗೂ ಮಾಡುವುದಿಲ್ಲ"

"ಅದೇನೋ ಖಂಡಿತ !"

ನಾಗಪ್ಪನವರು ಊಟ ಮುಗಿಸಿ ಎದ್ದರು.

"ಇನ್ನಷ್ಟು ಮಜ್ಜಿಗೆ ಹುಳಿ ಹಾಕಮ್ಮ"–ಎನ್ನುತ್ತಾ ಶಾಮು ನಿಧಾನವಾಗಿ ಊಟಮಾಡುತ್ತಿದ್ದ.

"ಅಂದರೆ ಹುಡುಗಿ ಚೆನ್ನಾಗಿಲ್ಲವೇನೊ?"

"ಚೆನ್ನಾಗಿಲ್ಲದೆ ಏನು?"

ಎನ್ನುತ್ತಾ ಕೈತೊಳೆದು ಬಂದ ನಾಗಪ್ಪನವರು ತಮ್ಮ ಕೋಟಿನ ಜೇಬಿನಿಂದ ಒಂದು ಭಾವಚಿತ್ರವನ್ನು ತೆಗೆದು ವೆಂಕಮ್ಮನ ಕೈಗಿತ್ತರು.

"ಎಲ್ಲಮ್ಮ. ಚಿಕ್ಕಣ್ಣಯ್ಯನ ಹೆಂಡತಿ ಹೇಗಿದ್ದಾಳೋ ನೋಡೋಣ"

ಎಂದು ಸುಮಿತ್ರ ತಾಯಿಯ ಕೈಯಿಂದ ಆ ಭಾವಚಿತ್ರವನ್ನು ತೆಗೆದುಕೊಂಡು ನಿಟ್ಟಿಸಿದಳು

'ಸೋಟು ಜಡೆಯು ಮೊದ್ದು ಹುಡುಗಿ, ಅಲ್ವೇನಣ್ಣಯ್ಯ?"

"ಅಷ್ಟೇ ಅಲ್ಲ ಕಣೆ ಚುಮ್ಮಿ. ಅವಳ ಕಣ್ಣು ನೋಡು. ಎಡ ಗಣ್ಣು ಎಡತೊರೆ ಕಡೆ ಬಲಗಣ್ಣು ಬಾಗಿಲಕೋಟೆ ಕಡೆ ನೋಡುತ್ತೆ!"

'ಕೈಕಾಲು ಎಲ್ಲಾ ಚೆನ್ನಾಗಿದೆಯೇನಣ್ಣಯ್ಯ?"

"ಒಂದು ಕೈ ಚಿಕ್ಕದು – ಒಂದು ಕಾಲು ದೊಡ್ಡದು!"

ಆ ವರ್ಣನೆ ಕೇಳುತ್ತ ನಿಂತಿರಲು ನಾಗಪ್ಪನವರಿಗೆ ಸಾಧ್ಯ ವಾಗಲಿಲ್ಲ! ಅವರು ಹೊರಜಗಲಿಯ ಕಡೆಗೆ ಹೆಜ್ಜೆ ಹಾಕಿದರು.

"ನಿಮ್ಮ ಅಪ್ಪ ಏನಂದರು?"

–ವೆಂಕಮ್ಮ ಮಗನ ಸನಿಯದಲ್ಲಿ ಕುಳಿತು ಕೇಳಿದರು.

"ಅಪ್ಪನಿಗೇನಮ್ಮ ಒಪ್ಪಿಕೊಂಡಿದ್ದಾರೆ! ಎರಡು ಸಾವಿರ ವರದಕ್ಷಿಣೆ ಕೊಡುತ್ತಾರಂತೆ–ಇಂಥಾ ಸಮಯ ಬಿಟ್ಟುಬಿಡಬಾರದು ಅಂತಾರೆ–ಅಪ್ಪ!"

"ವರದಕ್ಷಿಣೆ ಮನೆ ಹಾಳಾಯ್ತು. ಈಗಾಗಲೇ ನಾಲ್ಕು ಮಕ್ಕಳ ಮೇಲೆ ಕಲ್ಲುಮಳೆ ಸುರಿಸಿದ್ದಾಯಿತು. ಇನ್ನು ನೀನೊಬ್ಬ ಬಾಕಿ!"

"ನಾನೇನೋ ಖಂಡಿತ ಆ ಹುಡುಗಿಯನ್ನು ಮಾಡಿಕೊಳ್ಳುವು ದಿಲ್ಲವಮ್ಮ"

ಊಟ ಮುಗಿಸಿದ ಶಾಮು ಕೈತೊಳೆಯಲು ಎದ್ದು ಹೋದ.

ವೆಂಕಮ್ಮ ನಿಟ್ಟುಸಿರುಬಿಟ್ಟಳು.

ರಾತ್ರಿ ಎಲ್ಲರೂ ಅಂಗಳದಲ್ಲಿ ಸುತ್ತುಗಟ್ಟಿ ಕುಳಿತರು ಊರಿನ ಸಮಾಚಾರಗಳು ಹೊರಬಂದವು. ಮನೆಯ ಗುಟ್ಟುಗಳೂ ರಟ್ಟಾದುವು. ಲಲಿತೆಯ ಕಾಯಿಲೆಯ ವಿವರವೂ ತಿಳಿಯಿತು. ಆ ಸಮಯದಲ್ಲಿ ತಮ್ಮ ಬುದ್ಧಿವಂತಿಕೆಯನ್ನು ಹೆಮ್ಮೆಯಿಂದ ಹೇಳಿಕೊಳ್ಳುತ್ತಾ ನಾಗಪ್ಪನವರು, ತಾವು ಬ್ಯಾಂಕರನಿಗೆ ಕೊಟ್ಟಿದ್ದ ಹತ್ತು ಸಾವಿರ ರೂಪಾಯಿಗಳು ಇಪ್ಪತ್ತೆರಡು ಸಾವಿರಗಳಾಗಿರುವುದನ್ನು ವರ್ಣಿಸಿ ಆನಂದಿಸಿದರು.

"ನೀನು ಹೇಳುತ್ತಿರುವುದು ನಿಜವೇನಣ್ಣ ?"

"ಹೌದು ಶಾಮು"

"ನನಗೇನೋ ನಂಬಿಕೆಯಿಲ್ಲಪ್ಪ !"

"ನೋಡು, ನನ್ನ ಕೋಟಿನ ಜೇಬಿನಲ್ಲಿ ಡೈರಿ ಇದೆ ತೆಗೆದುಕೋ, ತೋರಿಸುತ್ತೇನೆ"

ಶಾಮು ಡೈರಿಯನ್ನು ತೆಗೆದುಕೊಂಡು ಬಂದ.

ನಾಗಪ್ಪನವರು ಕೊನೆಯ ಪುಟದಲ್ಲಿ ಗುರುತಿಸಿದ್ದ ಬಡ್ಡಿ ಲೆಕ್ಕವನ್ನು ತೋರಿಸಿದರು.

"ಒಂದೊಂದು ಸಾರಿ ಸೇಕಡ ನಲವತ್ತರಂತೆ ಬಡ್ಡಿ ಕೊಡುತ್ತಾನಂತೆ, ಪುಣ್ಯಾತ್ಮ !"

ಶಾಮು ಎರಡು ನಿಮಿಷ ಯೋಚಿಸಿದ.

"ಅಣ್ಣ, ಬೇಗ ನೀನು ಈ ಹಣವನ್ನೆಲ್ಲ ವಾಪಸ್ಸು ತೆಗೆದುಕೊಂಡು ಬಿಡು. ಅವನ ವ್ಯವಹಾರ ಬಹುಕಾಲ ನಿಲ್ಲುವಂತೆ ತೋರುವುದಿಲ್ಲ !"

"ಹೊಗೋ ಹುಚ್ಚ ! ನಿನಗೆ ಏನು ಗೊತ್ತು ? ಎಷ್ಟೋ ವರ್ಷಗಳಿಂದ ಅದೇ ವ್ಯವಹಾರ ನಡೆಸುತ್ತಿದ್ದಾನೆ. ಅದೂ ನೂರು - ಇನ್ನೂರು ರೂಪಾಯಿಗಳ ವಹಿವಾಟೆ ? ಸಾವಿರಗಟ್ಟಲೆ - ಲಕ್ಷಗಟ್ಟಲೆ ! ನಮ್ಮ ಲಾಯರ್ ನಾರಾಯಣನೂ ಬಡ್ಡಿಗೆ ಕೊಟ್ಟಿದ್ದಾನೆ. ಸರ್ಕಾರದ ದೊಡ್ಡ ದೊಡ್ಡ ಅಧಿಕಾರಿಗಳೂ ಕೊಟ್ಟಿದ್ದಾರಂತೆ ! ಅಂಥಾದ್ದರಲ್ಲಿ ನಾನೇಕೆ ಹೆದರಬೇಕು ?"

ಎನ್ನುತ್ತಾ ನಾಗಪ್ಪ, ಡೈರಿಯ ಹಾಳೆಗಳನ್ನು ಮೊಗಚಿದರು

ಆ ವಿಷಯವಾಗಿ ಮಾತು ಬೆಳೆಸುವುದು ಪ್ರಯೋಜನವಿಲ್ಲ ವೆಂದು ಶಾಮು ಸುಮ್ಮನಾದ.

ನಾಗಪ್ಪನವರು ಡೈರಿಯ ಹಾಳೆಯೊಂದನ್ನು ಕ್ಷಣಕಾಲ ಓದಿ–

"ಇಂದ ಹಾಗೆ ನೀನು ಮೈಸೂರಿಗೆ ಹೋಗುತ್ತೀನಿ ಅಂದೆಯಲ್ಲ ಶಾಮು. ಯಾವಾಗ ಹೋಗುತ್ತೀಯ ?"

–ಎಂದು ಕೇಳಿದರು.

"ಇವತ್ತು ರಾತ್ರಿಯೇ ಹೊರಡಬೇಕಾಗಿತ್ತು ಅಣ್ಣ. ಆದರೆ ನೀನು ನನ್ನನ್ನು ಇಲ್ಲಿಗೆ ಕರೆದುಕೊಂಡು ಬಂದುಬಿಟ್ಟೆ. ನಾಳೆ ಬೆಳ ಗಿನ ರೈಲಿಗೇ ಇಲ್ಲಿಂದ ಹೊರಟು ಬೆಂಗಳೂರು ಸೇರಿ, ಅಲ್ಲಿಂದ ಮಧ್ಯಾ ಹ್ನದ ರೈಲಿನಲ್ಲಿ ಮೈಸೂರು ಸೇರುತ್ತೇನೆ."

"ಅದೇನೊ ಮಗು–ಮೈಸೂರಿಗೆ ?"

ಕುತೂಹಲದಿಂದ ಕೇಳಿದಳು ವೆಂಕಮ್ಮ.

"ಅಲ್ಲಿ ಸಿನಿಮಾ ತಯಾರಿಸುವ ಸ್ಟುಡಿಯೋ ಹೊಸದಾಗಿ ಕಟ್ಟಿ ದ್ದಾರಮ್ಮ. ಅದರ ಪ್ರಾರಂಭೋತ್ಸವಕ್ಕೆ ನಮಗೆಲ್ಲಾ ಆಹ್ವಾನ ಕೊಟ್ಟಿದ್ದಾರೆ ಹಾಗೆಯೇ 'ಕೃಷ್ಣಲೀಲ' ಅಂತ ಒಂದು ಸಿನಿಮಾ ತಯಾರಿಸುತ್ತಾರಂತೆ. ಅದರ ಮುಹೂರ್ತೋತ್ಸವಕ್ಕೂ ಆಹ್ವಾನ ಬಂದಿದೆ"

–ಎಂದು ತನ್ನ ಪ್ರಿಯವಾದ ವಿಷಯವನ್ನು ತಾಯಿಗೆ ವಿವರಿ ಸಿದ ಶಾಮು

"ಈ ಅಡ್ರೆಸ್ಸು ಇಟ್ಟುಕೊ ಳ್ಳೊ. ಮೈಸೂರಿನಲ್ಲಿ ಇವರ ಮನೆ ಯಲ್ಲಿಯೇ ಬೇಕಾದರೆ ಇಳಿದುಕೊಳ್ಳಬಹುದು."

- ಎನ್ನುತ್ತಾ ನಾಗಪ್ಪನವರು ವಿಳಾಸವನ್ನು ಬರೆದಿದ್ದ ಡೈರಿ ಯನ್ನು ಶಾಮುವಿನ ಕೈಗಿತ್ತರು.

"ಯಾರಣ್ಣ ಇವರು ?"

"ನಮ್ಮ ನಾಣಿಯ ಮಾವನ ತಂಗಿಯ ಮನೆಯಂತೆ–ಅಂದರೆ ಲಲಿತೆಯ ಸೋದರತ್ತೆಯ ಮನೆ. ಆಕೆಯ ಗಂಡನ ಹೆಸರು ಗೋವಿಂದಯ್ಯ ಅಂತ. ಸಯ್ಯಾಜಿರಾವ್ ರಸ್ತೆಯಲ್ಲಿ ಅಂಗಡಿ ಇಟ್ಟಿ

ದ್ದಾರಂತೆ. ಮನೆಯೂ ತುಂಬ ವಿಶಾಲವಾಗಿದೆಯಂತೆ. ಅಲ್ಲೇ ಇಳಿದುಕೋ"

"ಇಲ್ಲಣ್ಣ.......... ನನ್ನ ಸ್ನೇಹಿತರೂ ಬರುತ್ತಾರೆ. ಅವರ ಮನೆಯೂ ಮೈಸೂರಿನಲ್ಲಿಯೇ ಇದೆ. ಅಲ್ಲೇ ಇಳಿದುಕೊಳ್ಳಬೇಕೆಂದು ಬಲವಂತ ಮಾಡಿದ್ದಾರೆ. ಬಿಡುವು ಮಾಡಿಕೊಂಡು ಗೋವಿಂದಯ್ಯ ನವರ ಮನೆಗೂ ಹೋಗಿ ಬರುತ್ತೇನೆ."

"ಹಾಗೇ ಮಾಡು. ಅಂತೂ ಖಂಡಿತ ಅವರ ಮನೆಗೆ ಹೋಗಿ ಬಾ !"

ಎಂದರು ನಾಗಪ್ಪ.

ವೆಂಕಮ್ಮನಿಗೆ ವಿಷಯ ಅರ್ಥವಾಯಿತು. ಲಲಿತೆಯ ಮದುವೆಯ ಮಾತುಕತೆ ನಡೆಯುವಾಗ 'ನನ್ನ ತಂಗಿಯ ಮಗಳೊಬ್ಬಳಿದ್ದಾಳೆ. ನಿಮ್ಮ ಇನ್ನೊಬ್ಬ ಹುಡುಗನಿಗೆ ಮಾಡಿಕೊಳ್ಳಬಹುದು' ಎಂದು ಹೇಳಿದ್ದ ಸಂಗತಿ ಅವಳಿಗೆ ನೆನಪಾಯಿತು. ಈ 'ಮೋಟು ಜಡೆಯ ಮೊದ್ದು ಹುಡುಗಿ'ಗಿಂತ ಆ ಹುಡುಗಿ-ಗೋವಿಂದಯ್ಯನವರ ಮಗಳು-ಚೆನ್ನಾಗಿದ್ದರೆ, ರಾಮು ಮೆಚ್ಚಿದರೆ, ಅವಳೇ ಈ ಮನೆಗೆ ಸೊಸೆಯಾಗಿ ಬರಲಿ ಎಂದು ಹಾರೈಸಿದಳು ವೆಂಕಮ್ಮ.

# ಈವರೆಗಿನ ಕೈಹೊತ್ತಿಗೆಗಳು

| | | |
|---|---|---|
| ೧. *ಗೃಹಲಕ್ಷ್ಮಿ | .... | ಅ. ನ. ಕೃ. |
| ೨. *ಮಲ್ಲಿ | .. | ದೇವುಡು |
| ೩. *ವಿಮೋಚನೆ | | ನಿರಂಜನ |
| ೪. *ಪರದೇಶಿ | | ಕುಲಕರ್ಣಿ ಬಿಂದುಮಾಧವ |
| ೫. *ಸ್ವರ್ಣರೇಖೆ | . | ವೀರಕೇಸರಿ |
| ೬. *ಅಪಸ್ವರ | . | ತ್ರಿವೇಣಿ |
| ೭. *ರಾಯರು ಕಂಡ ರಂಗು | ... | ಬೆಳ್ಳಿ ರಾಮಚಂದ್ರರಾವ್ |
| ೮. *ರುಕ್ಮಿಣಿ | ... | ಅ. ನ. ಕೃ. |
| ೯. *ವಜ್ರದುಂಗುರ | . | ನಾ. ರಾಜಣ್ಣ |
| ೧೦. *ಕೇದಿಗೆ ವನ | | ತ. ರಾ. ಸು. |
| ೧೧. *ಸಮಾಜ ಗರ್ಭದಲ್ಲಿ | | ಸಿ. ಬಿ. ಚಂದ್ರಶೇಖರ್ |
| ೧೨. ತೀರಿದ ಆಸೆ | ... | ಸೇವ ನಮಿರಾಜಮಲ್ಲ |
| ೧೩. ಪ್ರಕೃತಿ | | ಶ್ರೀರಂಗ |
| ೧೪. ಹೊಲ-ಮನೆ | | ಶ್ರೀಕೃಷ್ಣ ಪಾಟೀಲ |
| ೧೫. *ದೇವದಾಸಿ-ಎಚ್ಚಮನಾಯಕ | | ದಿವಂಗತ ಕೆ. ಹಿರಣ್ಣಯ್ಯ |
| ೧೬. ರಾಣೀ ಅಜ್ಞಾತಾ | | ನವಗಿರಿನಂದ |
| ೧೭. ಬಯಕೆಯ ಬೆಲ | | ಎಚ್ಚೆಸ್ಕೆ |
| ೧೮. ರಂಗಮ್ಮನ ವಠಾರ | | ನಿರಂಜನ |
| ೧೯. ಗೊಂಡಾರಣ್ಯ | | ಶಿವರಾಮ ಕಾರಂತ |
| ೨೦. ಶ್ರೇಯಾಂಸ—ಭಾಗ ೧ | .. | ಮಿರ್ಜಿ ಅಣ್ಣಾರಾಯ |
| ೨೧. ಶ್ರೇಯಾಂಸ—ಭಾಗ ೨ | .. | ಮಿರ್ಜಿ ಅಣ್ಣಾರಾಯ |
| ೨೨. ಸಂಸ್ಕೃತಿಯ ವಿಶ್ವರೂಪ | .. | ಅ. ನ. ಕೃ. |
| ೨೩. ಕಾಂಚನಗೀತ | ... | ಇಂದಿರಾತನಯ |

## ಅಚ್ಚಿನಲ್ಲಿ

| | | |
|---|---|---|
| ೨೪. ತಾಯಿ-ಮಕ್ಕಳು | ... | ಅ. ನ. ಕೃ. |
| ೨೫. ಅದಲು-ಬದಲು | .. | ನಾಡಿಗೇರ್ ಕೃಷ್ಣರಾಯ |

## ಮುಂಬರುವ ಪ್ರಕಟನೆಗಳು

| | | |
|---|---|---|
| ಕಳಂಕಿನಿ | ... | ಅ. ನ. ಕೃ. |
| ನಕ್ಷತ್ರಗಾನ | ... | ಇಂದಿರಾತನಯ |

*ಪ್ರತಿಗಳು ಮುಗಿದಿವೆ.